ಡಿಸೆಂಬರ್ ೧೯೯೫ • ಬೆಲೆ: ರೂ. ೬-೦೦

ಮನೆಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ



## ಬೇಂದ್ರೆ

ಎಷ್ಟೊಂದು ನೆನಪುಗಳು!

ಪುಸ್ತಕ ವಿಭಾಗ

## ಮಾಹಿತಿಯ ರಾಜಮಾರ್ಗ

ಒಡಿಸ್ಸಿ ಜಾನಪದ ಕಲಾವಿದೆ



('ಕಸ್ತೂರಿ'ಯ ಸಂಗ್ರಹದಿಂದ)



# ಕಸ್ತೂರಿ

ಕನ್ನಡ ಡೈಜೆಸ್ಟ್

ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎಸ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಭಾವರೇಖೆಯಲ್ಲಿ ಬೇಂದ್ರೆ
ಚಿತ್ರ:
ಸುರೇಶ ಕುಲಕರ್ಣಿ, ಧಾರವಾಡ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೫೮೦ ೦೨೦.

## ಚಿಂತನ

"ನಮ್ಮ ನಿಮ್ಮನ್ನೆಲ್ಲ ಆ ಮುಕ್ಕಣ್ಣನೇ ನೋಡಿಕೊಳ್ಳುತ್ತಾನೆ" ಎಂಬುದು ನಮ್ಮವರ ಬಲವಾದ ನಂಬಿಕೆ. ಅದಕ್ಕಾಗಿಯೇ ಮುಕ್ಕಣ್ಣನ ಭಯದಿಂದ, ಆತನ ಮೇಲಿನ ಭಕ್ತಿಯಿಂದ ಆದಷ್ಟು ಪರಿಶುದ್ಧ ಬದುಕು ನಡೆಸುವ ಯತ್ನ ಅವರದು. ಆದರೆ ಈಗಿನ ಮುಕ್ಕಣ್ಣರೇ ಬೇರೆ. ಅವರು ಅಲ್ಲಿ ಮೇಲೆಲ್ಲೂ ಇಲ್ಲ; ಇಲ್ಲಿಯೇ, ನಮ್ಮ-ನಿಮ್ಮ ಸುತ್ತಲೇ, ಗೊತ್ತಾಗದಂತೆ, ಇದ್ದಾರೆ. ನಮ್ಮ ಪ್ರತಿ ಹೆಜ್ಜೆಯನ್ನೂ ಎಣಿಸುತ್ತಾರೆ, ಪ್ರತಿ ಮಾತನ್ನೂ ಆಲಿಸುತ್ತಾರೆ, ಪ್ರತಿ ಕೃತಿಯನ್ನೂ ದಾಖಲಿಸಿಕೊಳ್ಳುತ್ತಾರೆ.

ಈ ಮುಕ್ಕಣ್ಣರಲ್ಲೂ ಇಬ್ಬಗೆಯವರಿದ್ದಾರೆ:

ತಾವು ಕಟ್ಟಿಕೊಂಡ ಸಾಮ್ರಾಜ್ಯದಲ್ಲಿ- ಅದು ಕೈಗಾ... ಇರಬಹುದು, ಇಲ್ಲ ಇನ್ನಾವುದೇ ಇತಿ ದೊಡ್ಡ ವ್ಯವಹಾರ... ಆಗಿರಬಹುದು- ಪ್ರತಿಯೊಂದನ್ನೂ ಸೂಕ್ಷ್ಮವಾಗಿ ಅವಲೋಕಿಸುತ್ತ ಎಲ್ಲವನ್ನೂ ಸುವ್ಯವಸ್ಥಿತವಾಗಿ ಇಟ್ಟುಕೊಳ್ಳುವ ಹಂಬಲದವರು. ಮೈಗಳ್ಳರನ್ನು, ಮನೆಮುರುಕರನ್ನು ಪತ್ತೆ ಹಚ್ಚಿ ಅವರನ್ನು ನಿವಾರಿಸಿ ಉಳಿದವರನ್ನು ಕಾಪಾಡುವ ಕರುಣಾಳುಗಳು.

ಆದರೆ ಇನ್ನೊಂದು ವರ್ಗದವರು ಮಾತ್ರ ತದ್ವಿರುದ್ಧ ಸ್ವಭಾವದರು. ಅವರಿಗೆ ಸದಾ ತಮ್ಮ ಮೂರನೆಯ ಕಣ್ಣನ್ನು ಮೋಸ, ವಂಚನೆಗಳಿಗಾಗಿಯೇ ಬಳಸಿಕೊಳ್ಳುವ ಉದ್ದೇಶ. ನಿಮ್ಮ 'ಅಂತರಂಗ'ವನ್ನೆಲ್ಲ ನಿಮಗೆ ಅರಿಯದಂತೆ ಅರಿತುಕೊಂಡು ಆಟವಾಡಿಸುವ ಚಟ. ನಿಮ್ಮ ಡೈರಿಯ ಪುಟಗಳನ್ನೂ, ನಿಮ್ಮ ಬ್ಯಾಂಕಿನ ಖಾತೆಯನ್ನೂ, ಇನ್ನಿತರ ವೈಯಕ್ತಿಕ ವಿವರಗಳನ್ನೂ ಸೂರೆಮಾಡುವವರು.

ಈ ಎರಡನೆಯ ವರ್ಗದವರಿಂದಾಗಿಯೆ 'ಜಗತ್ತು ಸಂಕುಚಿತಗೊಳ್ಳುತ್ತಿದೆ' ಎಂಬ ಮಾತು ವಿರುದ್ಧಾರ್ಥಪಡೆಯುತ್ತಲಿದೆ ಎಂಬುದು ಶೋಚನೀಯ.

ಇಂಥವರಿಂದಲೆ 'ಅನುಕೂಲ'ಗಳು ಅನಾನುಕೂಲಗಳೆನಿಸುತ್ತಿರುವುದು.

• ವ್ಯವಸ್ಥಾಪಕ ಸಂಪಾದಕ

# ಸಹ ಚಿಂತನ

**ಅಥೋ ಭ್ರಷ್ಟಃ ತಥೋ ಭ್ರಷ್ಟಃ!**

ನವೆಂಬರ್ ಸಂಚಿಕೆಯಲ್ಲಿನ ಅನಿಲ ಕಮತಿಯವರ ಲೇಖನದಿಂದ ಗಡಿನಾಡಿನಲ್ಲಿ ಕನ್ನಡಿ ಸ್ಥಿತಿಗತಿ ತಿಳಿದು ಬಹಳ ಬೇಸರವಾಯಿತು. ಕೇವಲ ಮಹಾರಾಷ್ಟ್ರ ಗಡಿಯಲ್ಲಿ ಮಾತ್ರ ಈ ಪರಿಸ್ಥಿತಿಯಿಲ್ಲ. ಆಂಧ್ರ ಮತ್ತು ತಮಿಳುನಾಡಿನ ಗಡಿಗಳಲ್ಲೂ ಇದೇ ಪರಿಸ್ಥಿತಿಯಿದೆ. ಕರ್ನಾಟಕದ ಏಕೀಕರಣವಾಗಿ ಸುಮಾರು ನಾಲ್ಕು ದಶಕಗಳೆ ಉರುಳಿದ್ದರೂ ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಗದಿರುವುದು ಶೋಚನೀಯ.

ಅಚ್ಚ ಕನ್ನಡ ಪ್ರಾಂತ್ಯಗಳನ್ನು ಮರಾಠಿಮಯಮಾಡಲು ಮಹಾರಾಷ್ಟ್ರ ಸರ್ಕಾರ ಕನ್ನಡ ಶಾಲೆಗಳನ್ನು ನಿಧಾನವಾಗಿ ಕತ್ತು ಹಿಸುಕಿ ಕೊಲ್ಲುತ್ತಿದ್ದರೆ. ಕರ್ನಾಟಕದಲ್ಲಿ ಮರಾಠಿ ಶಾಲೆಗಳಿಗೆ ಅಲ್ಪಸಂಖ್ಯಾತ ಎಂಬ ಹೆಸರಿನಲ್ಲಿ ಅಗ್ರ ಪ್ರಾಶಸ್ತ್ಯ ನೀಡುತ್ತಿರುವುದು ವಿಧಿಯ ವಿಪರ್ಯಾಸ. ಪರಿಸ್ಥಿತಿ ಹೀಗೆಯೇ ಮುಂದುವರೆದರೆ ಗಡಿಗಳಲ್ಲಿ ಕನ್ನಡ ಮಾಯವಾಗುವ ದಿನಗಳು ದೂರವಿಲ್ಲ.

**ಕೃ. ರಾ. ಪೇಟೆ — ಅಬ್ದುಲ್‌ಸಾಬ್**

"ಗಡಿಯಾಚೆಗೆ ಕನ್ನಡ! ಗಡಿಯೀಚೆಗೆ ಮರಾಠಿ?" ಡಾ. ಅನಿಲ ಕಮತಿಯವರ ಲೇಖನ ಓದಿದೆ. ಗಡಿ ಪ್ರದೇಶದ ಕನ್ನಡದ ಸ್ಥಿತಿಗತಿಯ ಸ್ಪಷ್ಟ ಚಿತ್ರಣ ಇದಾಗಿದೆ. ಕನ್ನಡ ನಾಡಿನಲ್ಲಿಯೇ ಕನ್ನಡದ ಸ್ಥಿತಿ ಅನಾಥವಾಗಿರುವುದು ದುರ್ದೈವದ ಸಂಗತಿಯೇ ಸರಿ!

**ಹಳೇಹಳ್ಳಿ — ಎಚ್. ಎನ್. ಕಿರಣ್‌ಕುಮಾರ್**

**ಕೃತಿ ಚೌರ್ಯವಲ್ಲ**

ಅಗಸ್ಟ್ ೧೯೯೫ರ ಕಸ್ತೂರಿ ಸಂಚಿಕೆಯಲ್ಲಿ ಮೊದಲ ಪುಟದಲ್ಲೇ ಅಚ್ಚಾದ 'ಹೆಜ್ಜೆಗುರುತು' ಎಂಬ ನನ್ನ ಅನುವಾದಿತ ಲೇಖನ ಕುರಿತು, ಮಂಗಳೂರಿನ ಡಾ. ವ್ಹಿ.ಆರ್. ಭಟ್ ಎಂಬವರು "ಸಹಚಿಂತನ" ಅಂಕಣದಲ್ಲಿ ಅದು "ಕೃತಿಚೌರ್ಯ" ಎಂಬ ಭಾವನೆ ಬರುವಂತೆ ಅಭಿಪ್ರಾಯಪಟ್ಟಿದ್ದಾರೆ.

ನಾನು ಆ ಲೇಖನವನ್ನು ಅನುವಾದಿಸಿ ಕಳಿಸುವಾಗ, ಮೂಲ ಹೆಜ್ಜೆಗುರುತಿನಲ್ಲೇ ಅಚ್ಚಾದ, ಔಷಧ ಕಂಪನಿಯೊಂದರ ಜಾಹೀರಾತೆಂಬುದನ್ನು ಖಚಿತಪಡಿಸಲು, ನಕಲು ಪ್ರತಿಯನ್ನು ಕಳಿಸಿದ್ದೆ, ಜೊತೆಗೆ ಪತ್ರದಲ್ಲಿ ಅದರ ಮೂಲ ಲೇಖಕರಾರೆಂಬುದು ಗೊತ್ತಿಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದೆ. ಲೇಖನ ಪ್ರಕಟಗೊಳ್ಳುವಾಗ "ಅನುವಾದಕ" ಎಂಬ ಶಬ್ದ ಬಿಟ್ಟು ಹೋದದ್ದರಿಂದ ಓದುಗರು ನಾನು ಯಾರದನ್ನೋ ನನ್ನದಾಗಿಸಿಕೊಂಡೆ ಎಂದು ಭಾವಿಸಲು ಸಾಧ್ಯವಾಯಿತು.

**ಕುಡಾಳ — ಡಾ. ಎಂ.ಜಿ. ಸವದತ್ತಿ**

**(ಕಣ್ತಪ್ಪಿನಿಂದಾದ ಪ್ರಮಾದಕ್ಕೆ ವಿಷಾದಿಸುತ್ತೇವೆ. –ಸಂ)**

**ಮೆಂಥ್ಯದ ಮಹಿಮೆ**

ಮಧುಮೇಹ ನಿಯಂತ್ರಣಕ್ಕೆ ಮದ್ದಾಗಿ ಮೆಂಥ್ಯವನ್ನು ಉಪಯೋಗಿಸುವುದು ಹೇಗೆಂಬುದನ್ನು ಡಾ. ಕೆ.ಜಿ. ಅರಳಿಕಾಯಿ ಚೆನ್ನಾಗಿ ವಿವರಿಸಿದ್ದಾರೆ. ನಮ್ಮಲ್ಲಿನ ರೋಗಕ್ಕೆ ನಮ್ಮಲ್ಲೇ ಮದ್ದಿರುವಾಗ, ನಾವು ಅಪಾಯಕಾರಿಯಾದ ಮಾತ್ರೆಗಳನ್ನು ನುಂಗುತ್ತಿರುವುದು ಎಳ್ಳಷ್ಟೂ ಸರಿಯಲ್ಲ.

**ಸುರತ್ಕಲ್ — ಪಿ. ರಾಜೇಶ್ ಐತಾಳ್**

**'ಕೃತಿ' ಎಂಬ ಮಹತ್ಕೃತಿ**

ಅಕ್ಟೋಬರ್ ತಿಂಗಳ 'ಕೃತಿ ಎಂಬ ವಿಶೇಷ ಹುಡುಗಿ' ಈ ಲೇಖನ ಪ್ರತಿಯೊ

ಬ್ಬರೂ ಓದಲೇ ಬೇಕಾದುದು ಲೇಖನ ಬರೆದ ಸೋನಿಯವರಿಗೆ ಧನ್ಯವಾದ ಗಳು. ಹಾಗೂ ೧೩ನೇ ಶತಮಾನದ ನೆಕ್ಲೇಸು ಬಹಳ ಚೆನ್ನಾಗಿ ಮುಖಪುಟ ದಲ್ಲಿ ಪ್ರಕಟಗೊಂಡಿತ್ತು.

**ಕಲಾದಗಿ** **ಸುವರ್ಣ ಹಡಪದ**

'ಕೃತಿ ಎಂಬ ವಿಶೇಷ ಹುಡುಗಿ' ಓದು ತ್ತಿದ್ದಂತೆಯೇ ಅವಳ ಬಗ್ಗೆ ಹೆಮ್ಮೆ ಅನಿ ಸಿತು. ಭಾರತದ ಪ್ರಪ್ರಥಮ ಪ್ರನಾಳ ಶಿಶುವಾದ 'ಕೃತಿ'ಯ ಅದ್ಭುತ ಸಾಧನೆಗಳ ಮುಂದೆ ನಾವೆಲ್ಲಾ ಕುಬ್ಜರೇನೋ ಎಂಬ ಭಾವನೆ ಬಂತು. ಕಲಿಯಬೇಕಾದ ನೂರಾರು ವಿದ್ಯೆಗಳಲ್ಲಿ ತಾನು ಕೆಲವನ್ನು ಮಾತ್ರ ಕಲಿತಿದ್ದೇನೆ. ಇನ್ನೂ ಕಲಿಯಬೇ ಕೆಂದುಕೊಂಡಿರುವುದು ಬಹಳಷ್ಟಿದೆ, ಎಂದು ಹೇಳುವ ಮೂಲಕ ಕೃತಿ ವಿನಯ ವನ್ನು ತೋರ್ಪಡಿಸಿದ್ದಾಳೆ. ಅವಳು ಇತ ರರಿಗೆ ಮಾದರಿಯಾಗಲಿ.

**ಮುದ್ದಾಬಳ್ಳಿ** **ಭೋಜರಾಜ ಸೊಪ್ಪಿಮಠ**

**ಮದನಕಾಮನ ಕಥೆಗಳು**

'ಕಸ್ತೂರಿ'ಯಲ್ಲಿ ಮೂಡಿ ಬರುತ್ತಿರುವ 'ಮದನ ಕಾಮನ ಕಥೆಗಳು' ತುಂಬಾ ಕುತೂಹಲಕರವಾಗಿವೆ. ಮೊದಲಲ್ಲೇ ಪ್ರಕಟವಾಗಿರುವ ರಾಜಕುಮಾರನ ಸತ್ವ ಪರೀಕ್ಷೆಯ ಭಾಗ ಚೆನ್ನಾಗಿದೆ. ಮುಂದು ವರೆಯಲಿ.

**ದಂಡಿನಶಿವರ** **ಡಿ. ಎಸ್. ಮಂಜನಾಥ**

**ಗೀತೆ ಹಾಗೂ ಆಡಳಿತ ವ್ಯವಸ್ಥೆ**

ನವೆಂಬರ್ ತಿಂಗಳ ಕಸ್ತೂರಿ ಹೆಚ್ಚು ಪರಿಮಳಯುಕ್ತವಾಗಿ ಮೂಡಿದೆ. ವಿಶೇ ಷವಾಗಿ, "ಮಿದುಳು ಲಕ್ವ ಪೀಡಿತ ಗಣಿ ತದ ಪ್ರೊಫೆಸರ್!" ಮತ್ತು "ಭಗವದ್ಗೀತೆ ಮತ್ತು ಆಡಳಿತ ವ್ಯವಸ್ಥೆ"ಗಳಂತ ಸ್ಫೂರ್ತಿ ದಾಯಕ ಲೇಖನ ಪ್ರಕಟಿಸಿದಕ್ಕಾಗಿ 'ಕಸ್ತೂರಿ'ಗೆ ಅನಂತ ವಂದನೆಗಳು. ತಾವು ದಯಮಾಡಿ The Geeta and Managememt ಪುಸ್ತಕ ದೊರೆಯುವ ವಿಳಾಸ ತಿಳಿಸಿರಿ.

**ಗದಗ** **ವಿ.ವಿ. ದೇಶಪಾಂಡೆ**

**ಸ್ಪರ್ಶದ ಮೋಡಿ**

ನವೆಂಬರ್ ಸಂಚಿಕೆಯಲ್ಲಿ ಪ್ರಕಟ ವಾದ ಡಾ. ಎಚ್. ಎಸ್. ಮೋಹನ ಅವರ 'ಮಗುವಿನ ಬೆಳವಣಿಗೆಯಲ್ಲಿ ಸ್ಪರ್ಶದ ಮಹತ್ವ' ಲೇಖನವನ್ನೋದಿದೆ. ಮಗುವಿಗೆ ಆಗುವ ಸ್ಪರ್ಶದ ಅನುಭ ವವು ಅದರ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯ ಮೇಲೆ ಬೀರುವ ನೇರ ಮತ್ತು ಅತಿ ಮುಖ್ಯವಾದ ಪರಿಣಾಮಗ ಳನ್ನು ಕುರಿತು ಚೆನ್ನಾಗಿ ನಿರೂಪಿಸಿದೆ.

**ಕಲಾದಗಿ** **ಶ್ರೀದೇವಿ ಆಲಗುಂಡಿ**

**ನೋವಿಲ್ಲದ ಶಸ್ತ್ರಚಿಕಿತ್ಸೆ**

'ಆರೋಗ್ಯದಂಗಳ' ವಿಭಾಗದಲ್ಲಿ ಅಕ್ಟೋಬರ್ ತಿಂಗಳ ಸಂಚಿಕೆಯಲ್ಲಿನ ಲೇಖನ "ನೋವಿಲ್ಲದ ಶಸ್ತ್ರ ಚಿಕಿತ್ಸೆಗಳು" ಅತ್ಯುಪಯುಕ್ತ ಲೇಖನ. ಆರೋಗ್ಯಕ್ಕೆ ಸಂಬಂಧಿಸಿದಂತೆ ಕಸ್ತೂರಿ ಪತ್ರಿಕೆಯು ಸಂಸ್ಥೆಯೊಂದು ಮಾಡಬಹುದಾದಂ ತಹ ಸಮುದಾಯದ ಅರಿವನ್ನು ಹೆಚ್ಚಿಸುವ ಸ್ತುತ್ಯರ್ಹ ಕೆಲಸ ಮಾಡುತ್ತಿದೆ. ಪ್ರತಿ ತಿಂಗಳೂ ಬರುತ್ತಿರುವ ಈ ಲೇಖನ ಮಾಲೆ ಸಂಗ್ರಹ ಯೋಗ್ಯ.

**ಬೆಟ್ಟದಪುರ** **ಎಸ್.ಎ. ಮಹಾದೇವ್**

**ಯಾತನಾ ಶಿಬಿರ**

ಅಕ್ಟೋಬರ್ ಸಂಚಿಕೆಯಲ್ಲಿಯ ಪುಸ್ತಕ ವಿಭಾಗದಲ್ಲಿ ಪ್ರಕಟವಾಗಿರುವ "ಯಾತನಾ ಶಿಬಿರ" (ಸಂಗ್ರಹಾನು ವಾದ–ಶ್ರೀಕಾಂತ) ಓದಿದೆ. ಹೃದಯಕಲ ಕುವಂತಿರುವ ಈ ಪ್ರಸಂಗವನ್ನೋದಿ ಅತೀವ ಸಂಕಟಪಟ್ಟೆ. ಇದು ನಡೆದಿರು ವುದು ನಾನು ಹುಟ್ಟುವ ಮೊದಲೇ. ಹೀಗಾಗಿ ನನಗೀಗ ಇದು ಚಾರಿತ್ರಿಕ ವಿಷ

**(ಆರನೆ ಪುಟಕ್ಕೆ)**

# ಅಂತರಂಗ


ಮಿತ್ರ ಸಂದರ್ಶನ (ನೀತಿ ಕಥೆ) ............ ೭
• ಮುನಿಯಾಲ ಗಣೇಶ ಶೆಣೈ

ಕಂಪನಿಗಳಿಗೂ ಈಗ ಗೂಢಚಾರರ ಲಗ್ಗೆ ..................... ೮
• 'ಎಂ. ದೀಪಾ'

ಮಾಹಿತಿಯ ರಾಜಮಾರ್ಗ ............. ೧೨
• ಮಂಜನಾಥ ಪೆಂಡಕೂರು

ಕಂಪ್ಯೂಟರ್ ಬಳಸಿ ಕೋಟ್ಯಂತರ ಕದ್ದ! .................. ೨೨
• ನಿವೇದಿತಾ ದೇಸಾಯಿ

ಹೆಸರಿಗೊಂದು ಕೊಸರು (ಹರಟೆ) ..... ೨೮
• ಡಾ. ಎಂ. ಆರ್. ಮಂದಾರವಲ್ಲಿ

ಪ್ರಕೃತಿಯ ವರದಾನ: ಕೇಸರಿ .......... ೩೩
• ಎಚ್.ಸಿ. ಲಕ್ಷ್ಮಣ

ಸಂಜೆ ಮೊಗದ ಮುತ್ತು (ಕವನ) ..... ೩೫
• ಕೆ.ಆರ್. ಆನಂದ್

ಭ್ರಷ್ಟಾಚಾರದ ಮಹಿಮೆ (ಕಾನೂನು) ... ೩೮
• ಎಸ್. ನಾರಾಯಣ ಮೂರ್ತಿ

ತಾಳ್ಮೆ (ನಡವಳಿಕೆ) ........................... ೪೯
• ತ.ಸುಕುಮಾರ್

ಕವಿ-ಕಲಿ ಖಾನ್‌ಖಾನಾ (ಇತಿಹಾಸ) .... ೫೦
• ಆದ್ಯ ರಾಮಾಚಾರ್ಯ

ನಡೆವುದೊಂದೇ ಭೂಮಿ (ವಿಚಾರ) ... ೫೨
• ಕೆ. ಚಂದ್ರಮೌಳಿ

ಅಪರಾಧಿ (ಉರ್ದು ಕಥೆ) ................ ೫೬
• ಪ್ರೊ. ಜಫರ್ ಅಹ್ಮದ್ ನಿಝಾಮಿ

ಕಣ್ಣು ತೆರೆಸಿದ ಕಿವಿ ಒಡವೆ .......... ೬೧
• ತಾರಾ ಎನ್. ಹೆಗಡೆ, ಅಜ್ಜೀಬಳ

ಬೋರ್ಲೆ ರೆಕ್ಟರಿಯ ಪ್ರೇತಾತ್ಮ ಪ್ರಕರಣ (ರಹಸ್ಯ) .......... ೬೬
• ಅರುಣ

ಭೀಕರ ಮಾರಣ ಹೋಮ ............ ೭೦
• ನಾಗರತ್ನಾ ಚಂದ್ರಶೇಖರ್

ಚಾತುರ್ಯ ನೋಡಿದ ಚಿತ್ರಕನ್ಯೆಯರ ಪಡಿನೆಳಲು (ಮದನ ಕಾಮನ ಕಥೆಗಳು–೪) ......... ೭೨

'ಎಂಬಾಮಿಂಗ್' ಅಂದರೇನು? ....... ೭೭
• ಡಾ. ಎಸ್. ಆರ್. ನರಹರಿ

ಕಣ್ಮರೆಯಾದ ಕ್ರಿಕೆಟ್ಟಿಗ: ಪೊನ್ನುಸ್ವಾಮಿ ......................... ೭೯
• ಕೇಶವ ಆದಿ

ವಂಚಕನ ಸೆರೆಗೆ ಶಾಯಿಯ ಪರೀಕ್ಷೆ (ತನಿಖಾ ವಿಜ್ಞಾನ) ........... ೮೩
• ಎ.ಓ. ಆವಲಮೂರ್ತಿ


## ಪುಸ್ತಕ ವಿಭಾಗ


**ಬೇಂದ್ರೆ ಎಷ್ಟೊಂದು ನೆನಪುಗಳು!** ೧೧೮
• ವಿವಿಧ ಲೇಖಕರು

ಕವಿ 'ಕನ್ನಡ ವಾಮನ' .................... ೯೦
• ಬಸವರಾಜ ಪುರಾಣಿಕ

ಚಾನೆಲ್ ಲಾಕ್ ಬಳಸಿ, ಮಕ್ಕಳನ್ನು ಉಳಿಸಿ .................... ೯೪
• ಎಂ.ಆರ್.ಎಸ್. ರಾವ್

ಹೆಂಡಿಂಗ್ಲೆಯಲ್ಲಿ ಚಮತ್ಕಾರ ಮೆರೆದ ಬಾಥಮ್ ಮತ್ತು ವಿಲ್ಲಿಸ್. (ಕ್ರಿಕೆಟ್ ಪುಟ) .................... ೯೬
• ಆದಿಕೇಶವ

ವರಸೆ (ಮನೆ-ಮೋಜು) .................... ೧೦೧
• ರಾಧಿಕಾ

ಸಿಡ್ನಿ ಷೆಲ್ಡನ್ (ಸಂದರ್ಶನ) ............ ೧೦೨
• ಟಾಮ್ ಗ್ರೀನ್

ವ್ಯಾಕ್ಸಿನ್ ಬದಲು ಬಟಾಟೆ (ಆಹಾರೌಷಧಿ) .................... ೧೦೬
• 'ಕಸ್ತೂರಿ ಮೃಗ'

ಪರಾಜಿತ (ಕನ್ನಡ ಕಥೆ) .................... ೧೦೮
• ಫಖ್ರುದ್ದೀನ್ ಇರುವ್ವೈಲ್

ಯಾರು ಈ 'ಹುಬ್ಬಳ್ಳಿಯಾಂವಾ?'... ೧೩೮
• ಪ್ರೊ. ಜಿ.ವಿ. ಕುಲಕರ್ಣಿ

ಆರೋಗ್ಯದಂಗಳ

**ಕ್ರಿಮಿನಾಶಕಗಳ ಬಳಕೆಯ ಆತಂಕಗಳು** ೧೨೧
• ಸೋಮಶೇಖರ ಎಸ್. ರುಳಿ

## ಬೆಳಕಿಂಡಿ

ಜಗತ್ತು ಸತ್ಯವೋ ಮಿಥ್ಯವೋ ಎಂಬ ವಾದದಲ್ಲಿ ಹುರುಳಿಲ್ಲ. ಕಣ್ಣು ಮುಚ್ಚಿದೊಡನೆ ಜಗತ್ತೆಲ್ಲ ಮಿಥ್ಯ. ಅಷ್ಟರಲ್ಲಿ ಯಾರಾದರೂ ಕಪೋಲಕ್ಕೆ ಒಂದೇಟು ಕೊಟ್ಟು ಗಡಬಡಿಸಿ ಕಣ್ತೆರೆಯುವಂತೆ ಮಾಡಿದರೆ ಜಗತ್ತು ಸತ್ಯವೆಂಬ ಅನುಭವ ಬರುತ್ತದೆ.

–ಡಾ. ವಿ.ಕೃ. ಗೋಕಾಕ

ಅನ್ನಕೊಡುವ ವೈರಿನೊಡನೆ ಕಸಕಡ್ಡಿ ಹುಟ್ಟುತ್ತದೆ. ಏನೂ ಕೊಡದ ಕೀರ್ತಿಯೊಡನೆ ಚಿಕ್ಕಪುಟ್ಟ ಶತ್ರುಗಳೂ ಹುಟ್ಟುತ್ತಾರೆ.

–ಬೀChi

ನಮ್ಮಲ್ಲಿ ಕೆಲವರು 'ಶಿಲಾಮಾನವರು' ಇನ್ನು ಕೆಲವರು 'ವನ್ಯಮಾನವರು' ಮತ್ತೆ ಕೆಲವರು 'ಮೃಗಮಾನವರು.' ಮಾನವತೆ ಪಡೆದ ಮಂದಿ ತೀರ ಸ್ವಲ್ಪ. ಈ ಮೂರು 'ಮೆಟ್ಟಲಿನಲ್ಲಿ' ಯಾವ 'ಮೆಟ್ಟಲಿನ ಮೇಲೆ' ನಿಂತಿದ್ದೇವೆಯೋ ಅದಕ್ಕನುಗುಣವಾಗಿ ನಾವು ನಡೆದುಕೊಳ್ಳುತ್ತೇವೆ.

–ಸ್ವಾಮಿ ರಾಮತೀರ್ಥ

ಬಲಿಷ್ಠರನ್ನು ಶಕ್ತಿಹೀನರನ್ನಾಗಿ ಮಾಡುವ ಮೂಲಕ ನೀನು ಶಕ್ತಿಹೀನರನ್ನು ಬಲಿಷ್ಠರನ್ನಾಗಿ ಮಾಡಲಾರೆ.

–ಅಬ್ರಹಾಂ ಲಿಂಕನ್

ಸ್ಥಿರ ಶೀರ್ಷಿಕೆಗಳು

ಮಜಾಶೀರ ಮಜಕೂರು .................... ೨೬
ನೆನಪು ನೆರಳಿನಲ್ಲಿ .................... ೩೬
ಜ್ಞಾನ ನಿಧಿ (ವಿದ್ಯಾರ್ಥಿ ಅಂಕಣ) ........... ೪೧
ಮಾತು-ಮಾಣಿಕ್ಯ .................... ೬೪
ನಿಮ್ಮ ಶಬ್ದಭಂಡಾರ ಬೆಳೆಯಲಿ ....... ೮೧
ಅಚ್ಚಳಿಯದ ಪುಟಗಳು .................... ೮೮

(ಮೂರನೆ ಪುಟದಿಂದ)

ಯವಾಗಿದೆ. ಇಷ್ಟೆಲ್ಲಾ ಅಮಾನವೀಯ ವ್ಯಕ್ತಿಗಳ ನಡುವೆ ಅದನ್ನು ವಿರೋಧಿಸುವಂತಹ ಕೆಲವಾದರೂ ಧರ್ಮಪ್ರಜ್ಞೆಯ ವ್ಯಕ್ತಿಗಳೇ ಆಗ ಇರಲಿಲ್ಲವೆ? ಅಥವಾ ಎಲ್ಲರಲ್ಲೂ ಅತಿರೇಕದ ದೇಶಪ್ರೇಮ ವಿತ್ತೇ?

ಎಸ್. ಉಷಾದೇವಿ

"ಯಾತನಾ ಶಿಬಿರ" ಓದುತ್ತಿದ್ದಂತೆಯೇ ನಮ್ಮ ಕಣ್ಣು ಹನಿಗೂಡಿದವು. ಇಂತಹ ಘೋರ ಇತಿಹಾಸ ಮತ್ತೊಮ್ಮೆ ಮರುಕಳಿಸದಿರಲೆಂದು ಆ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಹೊನ್ನಳ್ಳಿ ನ್ಯಾಮತಬಾಶಾ ಎಂ. ಹುಣಚಾಳ

**ಕೊಂಡು ಓದುವ ಪತ್ರಿಕೆ**

ಕನ್ನಡ ಪತ್ರಿಕೆಗಳಲ್ಲೇ 'ಕಸ್ತೂರಿ' ಹಾಗೂ 'ವಿಕ್ರಮ' ಇವೆರಡು ಮಾತ್ರ ಒಂದೂ ಪದವನ್ನೂ ಬಿಡದೇ ಓದುವಂತಿರುವ ಪತ್ರಿಕೆಗಳು. ಸಾಮಾನ್ಯವಾಗಿ ಪಕ್ಕದ ಮನೆಯ ಪುಸ್ತಕಗಳನ್ನು ತಂದು ಓದುವ ಅಭ್ಯಾಸವಿರುವವರು ಕೂಡ 'ಕಸ್ತೂರಿ'ಯೊಂದನ್ನು ಓದಿ ಸಂಗ್ರಹಿಸಿಡಲು ಸ್ವತಃ ಕೊಂಡುಕೊಳ್ಳುತ್ತಾರೆ. ಪ್ರತಿ ತಿಂಗಳೂ 'ಕಸ್ತೂರಿ'ಯ ಪುಟ ಪುಟವೂ ನವ್ಯವಾಗಿರುತ್ತದೆ. ಯಾವೊಂದು ಬರಹವನ್ನೂ ಬದಿಗಿರಿಸುವಂತಿರುವುದಿಲ್ಲ. ನವೆಂಬರ್ ಸಂಚಿಕೆ ಕೂಡ ಇದಕ್ಕೆ ಅಪವಾದವಲ್ಲ.

ಹಳುವಳ್ಳಿ ಗಾ. ಸು. ಹೊರಟಿಮನೆ.

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: ೪೦ ಡಿಸೆಂಬರ್ ೧೯೯೫ ಸಂಚಿಕೆ: ೪


## ಮಿತ್ರ ಸಂದರ್ಶನ

ಮಲೀಕನಿಗೆ ಒಬ್ಬ ಯುವಕನ ಪರಿಚಯವಿತ್ತು. ಈ ಯುವಕ ಅನೇಕ ದುರ್ಗುಣಗಳಿಂದ ತುಂಬಿದ್ದ. ಬೇರೆ ಯಾರದಾದರೂ ಪ್ರಯತ್ನದಿಂದ ಯುವಕ ಸುಧಾರಿಸಬಹುದೆಂದು ಮಲೀಕ ನಿರೀಕ್ಷಿಸುತ್ತಿದ್ದ. ಆದರೆ ಹೀಗೇನೂ ಆಗದೇ ಸಾರ್ವಜನಿಕರು ಯುವಕನ ಬಗ್ಗೆ ದೂರಲು ಆರಂಭಿಸಿದರು.

ಮಲೀಕ ಆ ಯುವಕನನ್ನು ಸಂಧಿಸಿದ. ದುರ್ಗುಣಗಳನ್ನು ತೊರೆಯಲು ವಿನಂತಿಸಿಕೊಂಡ. ಯುವಕ ಜಂಭದಿಂದ ತಾನು ಸುಲ್ತಾನನ ಮೆಚ್ಚಿನವನೆಂದೂ ಆದ್ದರಿಂದ ತಾನು ಏನು ಮಾಡಿದರೂ ನಡೆಯುತ್ತದೆಂದೂ ಹೇಳಿದ. ಮಲೀಕ ತಾನು ಸುಲ್ತಾನರನ್ನು ಕಂಡು ಈ ಬಗ್ಗೆ ದೂರುವುದಾಗಿ ಹೇಳಿದಾಗ, ಸುಲ್ತಾನರು ಮನಸ್ಸು ಬದಲಿಸಲಾರರು ಎಂದು ಆ ಯುವಕ ಸೊಕ್ಕಿನಿಂದಲೇ ಉತ್ತರಿಸಿದ.

ಮಲೀಕ, “ಹಾಗಾದರೆ ನಾನು ನಿನ್ನ ಬಗೆಗಿನ ದೂರನ್ನು ಆ ಸೃಷ್ಟಿಕರ್ತನಿಗೇ ಹೇಳುತ್ತೇನೆ” ಎಂದ.

ಯುವಕ, “ಸೃಷ್ಟಿಕರ್ತನು ಮಹಾಕ್ಷಮಾಶೀಲನಾದುದರಿಂದ ನನಗೇನೂ ಮಾಡಲಾರ” ಎಂದ.

ಮಲೀಕ ಯುವಕನನ್ನು ಅವನ ಪಾಡಿಗೆ ಬಿಟ್ಟುಬಿಟ್ಟ. ಆದರೆ ದಿನ ಕಳೆದಂತೆ ಯುವಕನ ವರ್ತನೆ ಎಲ್ಲೆ ಮೀರಿತು. ಅವನ ಬಗೆಗಿನ ಸಾರ್ವಜನಿಕ ಆಕ್ರೋಶವೂ ಹೆಚ್ಚಿತು, ಆತನಿಗೆ ಮತ್ತೊಮ್ಮೆ ಬುದ್ಧಿವಾದ ಹೇಳಬೇಕೆಂದು ಯೋಚಿಸಿದ ಮಲೀಕ ಯುವಕನ ಮನೆಯತ್ತ ನಡೆದ. ಮಲೀಕ ಯುವಕನ ಮನೆಯ ಹತ್ತಿರ ಬಂದಾಗ ಅವನಿಗೊಂದು ದನಿ ಕೇಳಿತು- “ನನ್ನ ಗೆಳೆಯನನ್ನು ಮುಟ್ಟಬೇಡ!” ಮಾಲೀಕನಿಗೆ ಆಶ್ಚರ್ಯವಾಯಿತು. ಆತ ಯುವಕನ ಮನೆಯನ್ನು ಪ್ರವೇಶಿಸಿದ. ಯುವಕ ಮಲೀಕ ಬಂದ ಕಾರಣವನ್ನು ಕೇಳಿದ.

ಮಲೀಕ ತಾನು ಯುವಕನನ್ನು ತೆಗಳುವುದಿಲ್ಲವೆಂದು ಹೇಳಿ, ಈಗ ತಾನೇ ತನಗೆ ಕೇಳಿಸಿದ ಅಶರೀರವಾಣಿಯನ್ನು ತಿಳಿಸಿದ. ಯುವಕ “ಆ ದನಿ ನನ್ನ ಸ್ನೇಹಿತನದ್ದಾದರೆ ನನ್ನದೆಲ್ಲವೂ ಆತನಿಗೇ ಸಲ್ಲಬೇಕು,” ಎಂದು ಹೇಳಿ ಎಲ್ಲವನ್ನೂ ತ್ಯಜಿಸಿ ಒಬ್ಬ ತಿರುಕನಾಗಿ ನಡೆದ.

ಎಷ್ಟೋ ಕಾಲದ ನಂತರ ಮಲೀಕ ಆ ಯುವಕನನ್ನು ಮಕ್ಕಾದಲ್ಲಿ ಕಂಡ. ಯುವಕ, “ನಾನು ನನ್ನ ಗೆಳೆಯನನ್ನು ಕಾಣಲು ಬಂದೆ” ಎಂದು ಹೇಳಿ ಪ್ರಾಣವನ್ನು ಬಿಟ್ಟ.

**• ಮುನಿಯಾಲ ಗಣೇಶ ಶೆಣೈ**

# ಕಂಪನಿಗಳಿಗೂ ಈಗ ಗೂಢಚಾರರ ಲಗ್ಗೆ!

• 'ಎಂ. ದೀಪಾ'

(ದಿ ಡೇಲಿ ಟೆಲಿಗ್ರಾಫ್‌ನ ಆಧಾರ)

**ಗೂ**ಢಚರ್ಯೆ ಹಿಂದೆ ಇತ್ತು, ಇಂದೂ ಇದೆ; ಅಲ್ಲದೆ ಮುಂದೆಯೂ ಇರುವಂಥಾದ್ದೆ. ಅದು ಎಂದು ಶುರುವಾಯಿತೆಂದು ಹೇಳುವುದು ಕಷ್ಟ. ಚಾಣಕ್ಯನ ಅರ್ಥಶಾಸ್ತ್ರದಲ್ಲಿಯಷ್ಟೇ ಅಲ್ಲ, ಕ್ರಿಸ್ತಯುಗಕ್ಕಿಂತ ಮೊದಲು ಗ್ರೀಕ್ ನಗರರಾಜ್ಯಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ಅಥೆನ್ಸ್ ಹಾಗೂ ಸ್ಪಾರ್ಟಾಗಳಲ್ಲಿ ಗೂಢಚರ್ಯೆ ನಡೆಯುತ್ತಿದ್ದ ಬಗೆಗೆ ಇತಿಹಾಸಗಳು ಹೇಳುತ್ತಿವೆಯಾದ್ದರಿಂದ ಈ ಕಾರ್ಯ ಬಹಳ ಕಾಲದಿಂದಲೂ ನಡೆದುಕೊಂಡು



ಬಂದಿರಬೇಕು. ಆದರೆ ರಾಜಕಾರಣಕ್ಕೆ ಸಂಬಂಧಿಸಿದ ವಿಷಯಗಳನ್ನು, ಸೈನ್ಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಕಲೆಹಾಕುವ ಕೆಲಸಕ್ಕಷ್ಟೇ ಸೀಮಿತವಾಗಿದ್ದ ಗೂಢಚರ್ಯೆ ಈಗ ಔದ್ಯಮಿಕ ಕ್ಷೇತ್ರಕ್ಕೂ ವಿಸ್ತರಿಸಿದೆ.

ಇದರಲ್ಲೇನೂ ಆಶ್ಚರ್ಯವಿಲ್ಲ. ಇಂದಿನ ಕಾಲದಲ್ಲಿ ಸಂಪತ್ತಿನ ದೃಷ್ಟಿಯಿಂದ ಒಂದೊಂದು ಉದ್ದಿಮೆಯೂ ಒಂದೊಂದು ಸಾಮ್ರಾಜ್ಯವೇ. ಪಶ್ಚಿಮದ ಒಂದೊಂದು ಬೃಹತ್ ಉದ್ದಿಮೆಯ ಉತ್ಪನ್ನವೂ ನಮ್ಮ ರಾಜ್ಯದ ವಾರ್ಷಿಕ ಉತ್ಪನ್ನಕ್ಕಿಂತ ಎಷ್ಟೋಪಟ್ಟು ಹೆಚ್ಚು. ಈ ಉದ್ದಿಮೆಗಳು ಬಂದ ಲಾಭದಲ್ಲಿ ಒಂದು ಪಾಲನ್ನು ಸಂಶೋಧನೆಗಾಗಿಯೆ ತೆಗೆದಿರಿಸುತ್ತವೆ. ಕಂಪನಿಯ ಉತ್ಪನ್ನದ ಗುಣಮಟ್ಟವನ್ನು ಹೆಚ್ಚಿಸಲು ಅಥವಾ ಹೊಸ ಮಾದರಿಯ ಉತ್ಪನ್ನಗಳನ್ನು ತಯಾರಿಸಲು ಕೋಟಿಗಟ್ಟಲೆ ಹಣವನ್ನು ಪ್ರತಿವರ್ಷ ಸುರಿಯುತ್ತವೆ. ಕಂಪನಿಯ ವಿಜ್ಞಾನಿಗಳು ಹೊಸದೇನಾದರೂ ಶೋಧಿಸಿದಾಗ ಅದರ ಪ್ರಯೋಜನ ಪಡೆದು, ಹೊಸ ವಸ್ತುಗಳನ್ನು ಉತ್ಪಾದಿಸಿ ಪೇಟೆಗೆ ತಂದು ಅಪಾರ ಲಾಭ ಮಾಡಿಕೊಳ್ಳುತ್ತವೆ. ಈ ಎಲ್ಲ ಸಂಶೋಧನೆಗಳೂ ಗೌಪ್ಯವಾಗಿಯೆ ನಡೆಯುತ್ತವೆ.

ಆದರೆ ಪ್ರತಿಸ್ಪರ್ಧಿಗಳು ಸುಮ್ಮನಿರಬೇಕಲ್ಲ? ಅವರು ಹೇಗಾದರೂ ಮಾಡಿ ತಮ್ಮ ಜನರನ್ನು ಆ ಕಂಪನಿಗಳಲ್ಲಿ ತೂರಿಸಿ, ಎಷ್ಟೋ ವೇಳೆ ಪ್ರತಿಸ್ಪರ್ಧಿ ಕಂಪನಿಯ ವಿಜ್ಞಾನಿಗಳನ್ನೇ ಬಲೆಗೆ ಹಾಕಿಕೊಂಡು ರಹಸ್ಯಗಳನ್ನು ಕದ್ದು, ಆ ಕಂಪನಿಯು ಹೊಸ ಉತ್ಪನ್ನಗಳನ್ನು ಹೊರತರುವುದಕ್ಕಿಂತ ಮೊದಲೇ ತಾವೇ ಹೊರತಂದು ಲಾಭ ಮಾಡಿಕೊಳ್ಳುವುದಿದೆ. ಸಂಶೋಧನೆಗೆ ಹಣ ಸುರಿದ ಕಂಪನಿ ಹೊಸ ಉತ್ಪನ್ನಗಳನ್ನು ಪೇಟೆಗೆ ತರುವಷ್ಟರಲ್ಲೇ ಪ್ರತಿಸ್ಪರ್ಧಿ ಕಂಪನಿ ಅದೇ ಉತ್ಪನ್ನವನ್ನು ಪೇಟೆಗೆ ತಂದು ಮಾರುಕಟ್ಟೆಯನ್ನು ಹಿಡಿದುಕೊಂಡುಬಿಟ್ಟಿರುವುದರಿಂದ ಮೊದಲಿನ ಕಂಪನಿ ಮಾಡಿದ ಪ್ರಯತ್ನವೆಲ್ಲ ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತಾಗುತ್ತದೆ.

ಮೊನ್ನೆ ಮೊನ್ನೆ ಜಪಾನಿನ ಕೊಮಾಟ್ಸು ಕಂಪನಿಯಲ್ಲಿ ನಡೆದದ್ದೂ ಅದೇ. ಗೃಹನಿರ್ಮಾಣಕ್ಕೆ ಬೇಕಾದ ಯಂತ್ರೋಪಕರಣಗಳನ್ನು ತಯಾರಿಸುವುದೇ ಆ ಕಂಪನಿಯ ಕೆಲಸ. ಕಂಪನಿಯ



ರಹಸ್ಯಗಳನ್ನು ಆ ಕಂಪನಿಯ ಸಲಹೆಗಾರರೇ ೧೫ ಪ್ರತಿಸ್ಪರ್ಧಿ ಕಂಪನಿಗಳಿಗೆ ಮಾರುತ್ತಿದ್ದ ವಿಷಯ ಮೊನ್ನೆತಾನೆ ಅದು ಹೇಗೋ ಹೊರಬಿತ್ತು.

ನಿಜ ಹೇಳಬೇಕೆಂದರೆ ಔದ್ಯಮಿಕವಲಯದಲ್ಲಿ ನಡೆಯುವಷ್ಟು ಗೂಢಚರ್ಯೆ ಇನ್ನೆಲ್ಲೂ ನಡೆಯು ವುದಿಲ್ಲ. ಗೂಢಚರ್ಯೆ ನಡೆಸುವ ಕಂಪನಿ ಸ್ವಾಭಾ ವಿಕವಾಗಿಯೆ ತಾನು ಹಾಗೆ ಮಾಡುತ್ತಿದ್ದೇನೆಂದು ಹೇಳಿಕೊಳ್ಳಲು ಇಚ್ಛಿಸುವುದಿಲ್ಲ. ಗೂಢಚರ್ಯೆಗೆ ಒಳಗಾದ ಕಂಪನಿ ಆ ಸುದ್ದಿ ಪ್ರಕಟವಾದರೆ ಶೇರುಧಾರಕರಲ್ಲಿ ಕಂಪನಿಯ ಮೇಲಿನ ವಿಶ್ವಾಸ ಕುಗ್ಗುವುದಲ್ಲದೆ ಸಾರ್ವಜನಿಕರ ದೃಷ್ಟಿಯಲ್ಲಿಯೂ ಕಂಪನಿಯ ಪ್ರತಿಷ್ಠೆ ಕಡಿಮೆಯಾಗುವುದರಿಂದ ತನ್ನ ಮೇಲೆ ಗೂಢಚರ್ಯೆ ನಡೆದರೂ ಆ ಸುದ್ದಿ ಹೊರಬಾರದಹಾಗೆ ನೋಡಿಕೊಳ್ಳುವ ಸಂಭವವೇ ಹೆಚ್ಚು. ಹೀಗಾಗಿ ನಿತ್ಯ ಗೂಢಚರ್ಯೆಯ ಕೆಲಸ ನಡೆಯುತ್ತಿದ್ದರೂ ಅವು ಸಾರ್ವಜನಿಕರ ಮುಂದೆ ಪ್ರಕಟಗೊಳ್ಳುವ ಸಂಭವ ತೀರಾ ಕಡಿಮೆ.

ಒಂದಾನೊಂದು ಕಾಲದಲ್ಲಿ ಔದ್ಯಮಿಕ ಗೂಢ ಚರ್ಯೆಗೆ ಅಮೇರಿಕ ಹೆಸರಾಗಿತ್ತು. ಅದೆಲ್ಲ ಹಳೆಯ ಮಾತು. ವಾಸ್ತವವಾಗಿ ಈಗ ಜಪಾನೀ ಕಂಪನಿಗ ಳಲ್ಲಿ ನಡೆಯುವಷ್ಟು ಗೂಢಚರ್ಯೆ ಬೇರೆಲ್ಲೂ ನಡೆಯುವುದಿಲ್ಲ.

ಒಮ್ಮೆ ಲೆನಿನ್ ಭಾಷಣ ಮಾಡುತ್ತಾ, "ಇವ ತ್ತಿಲ್ಲ ನಾಳೆ ಬಂಡವಾಳಶಾಹೀ ಅಮೇರಿಕಕ್ಕೆ ಉರುಲು ಹಾಕಿಯೇ ಬಿಡುತ್ತೇನೆ" ಎಂದು ಗರ್ಜಿ ಸಿದಾಗ ಒಬ್ಬಾತ ತಟಕ್ಕನೆ ಎದ್ದು, "ಆದರೆ ಉರುಲು ಹಾಕಲು ಹಗ್ಗವನ್ನೆಲ್ಲಿಂದ ತರುತ್ತೀರಿ ಸ್ವಾಮಿ?" ಎಂದನಂತೆ. "ಓಹ್ ಅದೇ! ಆ ಬಂಡವಾಳಶಾಹೀ ಅಮೇರಿಕವೇ ಹಗ್ಗವನ್ನೂ ಮಾರುತ್ತದೆ ಬಿಡಿ. ಹೇಗೂ ವ್ಯಾಪಾರವೊಂದೇ ಮುಖ್ಯವಲ್ಲವೆ ಅಮೇರಿಕಕ್ಕೆ?" ಎಂದರಂತೆ ಲೆನಿನ್.

ಜಪಾನಿನ ಸ್ಥಿತಿಯೇನೂ ಇದಕ್ಕಿಂತ ಭಿನ್ನವಾ ಗಿಲ್ಲ. ಅತಿ ಹೆಚ್ಚು ಗೂಢಚರ್ಯೆ ನಡೆಯುತ್ತಿರು ವುದೂ ಜಪಾನೀ ಕಂಪನಿಗಳಲ್ಲೆ, ಗೂಢಚರ್ಯೆಗೆ ಅನುಕೂಲವಾದ ಸಾಧನಗಳನ್ನು ನಿರ್ಮಿಸುತ್ತಿರು ವುದೂ ಜಪಾನೀ ಕಂಪನಿಗಳೇ.

ಇಂಥಾ ಸಲಕರಣೆಗಳು ಜಪಾನಿನಲ್ಲಿಂದು ಎಲ್ಲಿ ಬೇಕೆಂದಲ್ಲಿ ದೊರೆಯುತ್ತವೆ. ನೀವು ಬ್ಯಾಟರಿ ಷೆಲ್ಲನ್ನು ಕೊಂಡಷ್ಟೇ ಸುಲಭವಾಗಿ ಅವುಗಳನ್ನು ಕೊಳ್ಳಬಹುದು. ಅಂಗೈಯಲ್ಲಿ ಹಿಡಿಯಬಹುದಾದ ರೇಡಿಯೋದ ಪಕ್ಕದಲ್ಲೆ ಅದಕ್ಕಿಂತಲೂ ಚಿಕ್ಕದಾದ ಟ್ರಾನ್ಸ್‌ಮೀಟರನ್ನು ಜಪಾನಿನ ಅಂಗಡಿಗಳಲ್ಲಿ ಕಾಣ ಬಹುದು.

ಇದಕ್ಕಿಂತಲೂ ಸೂಕ್ಷ್ಮವಾದ ಉಪಕರಣಗಳು ಬೇಕೆಂದರೆ ಅಲ್ಲಿನ ಗಿಂಝಾ ಜಿಲ್ಲೆಯಲ್ಲಿರುವ ಕೋನಿ ಎಲೆಕ್ಟ್ರಾನಿಕ್ಸ್ ಸರ್ವೀಸ್ ಕಂಪನಿಗೆ ಹೋಗ ಬೇಕು. ಅಲ್ಲಿ ಕಂಪನಿಯ ಉತ್ಪಾದನೆಗಳನ್ನು ಗ್ರಾಹ ಕರಿಗೆ ತೋರಿಸಲೆಂದೇ ಒಂದು ವಿಭಾಗವಿದೆ.

ಅಲ್ಲಿಗೆ ಬಂದವರಿಗೆ ಮೂರು ಪಿನ್ನುಗಳ ಅಡಾಪ್ಟರ್ ಒಂದನ್ನು ತೋರಿಸುತ್ತಾ ಕಂಪನಿಯ ಪ್ರತಿನಿಧಿ ವಿವರಿಸುತ್ತಾನೆ, "ಇದರಲ್ಲಿ ಪ್ಲಗ್ ಹಾಕಿ ದೀಪ ಉರಿಸಬಹುದು. ರೇಡಿಯೋ ಅಥವಾ ಸ್ಟೀರಿಯೋ ಹಾಕಬಹುದು. ಇದೂ ಬೇಡವಾದರೆ ಟೆಲಿವಿಜನ್ನಿಗೆ ಜೋಡಿಸಬಹುದು. ಫ್ಯಾನ್ ಹಾಕ ಬಹುದು. ಆದರೆ ಲಕ್ಷ್ಯವಿಡಿ, ಅದು ಅಂತಿಂತಹ ಅಡಾಪ್ಟರ್ ಅಲ್ಲ. ಒಳಗೆ ಶಕ್ತಿಶಾಲಿಯಾದ ಮೈಕ್ರೋ ಫೋನ್ ಇದೆ. ಟ್ರಾನ್ಸ್‌ಮಿಟರ್ ಇದೆ. ಮಹತ್ವ ದ್ದೆಂದರೆ ಅಡಾಪ್ಟರನ್ನು ಹಾಕಿಸಿಕೊಂಡಾತ ಪ್ಲಗ್ ಹಾಕಿ ಅದರ ಉಪಯೋಗ ಪಡೆಯಲಿ, ಪಡೆ ಯದೇ ಇರಲಿ, ಒಳಗಿರುವ ಟ್ರಾನ್ಸ್‌ಮಿಟರ್ ಹಾಗೂ ಮೈಕ್ರೋಫೋನ್ ಸದಾ ಆಫೀಸಿನ ಅಥವಾ ಮನೆಯ ವಿದ್ಯುಚ್ಛಕ್ತಿಯನ್ನು ಉಪಯೋ ಗಿಸುತ್ತಲೇ ಇರುತ್ತವೆ. ಹೀಗಾಗಿ ನೀವು, ನಾವು ಇದರೊಟ್ಟಿಗೆ ಕೊಡುವ ಪುಟ್ಟ ರೇಡಿಯೋದಿಂದ ಆರುನೂರು ಅಡಿ ದೂರದಲ್ಲಿ ಕುಳಿತು ಒಳಗೆ ನಡೆಯುತ್ತಿರುವುದನ್ನೆಲ್ಲಾ ಕೇಳಿಸಿಕೊಳ್ಳಬಹುದು.

"ಈ ಅಡಾಪ್ಟರ್ ಬೇಡವೆಂದರೆ ಕ್ಯಾಲ್ಕುಲೇ ಟರ್ ಕೊಳ್ಳಬಹುದು. ಒಳ್ಳೆಯ ಮಾದರಿ. ಸ್ವಲ್ಪವೂ ಲೆಕ್ಕ ತಪ್ಪುವುದಿಲ್ಲ. ಮಾಡಿದ ಲೆಕ್ಕವನ್ನು ನೆನಪಿಟ್ಟು ಕೊಳ್ಳಲು ಸ್ಮರಣಕೋಶಗಳಿವೆ. ಆದರೆ ಆ ಸ್ಮರಣ ಕೋಶಗಳೊಟ್ಟಿಗೆ ಟ್ರಾನ್ಸ್‌ಮಿಟರ್ ಹಾಗೂ ಮೈಕ್ರೋಫೋನುಗಳೂ ಇವೆ. ಇದೂ ಬೇಡವೆನ್ನು ತ್ತೀರಾ? ಹಾಗಾದರೆ ಬಾಲ್‌ಪಾಯಿಂಟ್

ಪೆನ್ನನ್ನೋ ಗೋಡೆಗಡಿಯಾರವನ್ನೋ, ರಿಸ್ಟ್‌ವಾಚನ್ನೋ ರೇಡಿಯೋವನ್ನೋ ಅದೂ ಬೇಡವಾದರೆ ಸೊಂಟಕ್ಕೆ ಕಟ್ಟಿಕೊಳ್ಳುವ ಬಕಲ್ ಅನ್ನೋ ತೆಗೆದುಕೊಳ್ಳಿ. ದೂರದಲ್ಲಿ ಕುಳಿತೇ ಮಾತಾಡುವುದನ್ನೆಲ್ಲ ಸುಲಭವಾಗಿ ಕೇಳಿಸಿಕೊಳ್ಳಬಹುದು. ಉಡುಗರೆಯಾಗಿ ಕೊಡುವ ಯಾವ ವಸ್ತುವೂ ಬೇಡ. ಆದರೆ ಒಳಗಿನದನ್ನು ಕೇಳಿಸಿಕೊಳ್ಳಲು ಸಾಧ್ಯವಾಗುವಂತಹ ಉಪಕರಣಬೇಕು ಎನ್ನುವವರಿಗಾಗಿ ಮೈಕ್ರೋವೇವ್ ಸಾಧನವಿದು. ಐದಾರು ಅಂತಸ್ತುಗಳ ಮೇಲೆ ಕೋಣೆಯಲ್ಲಿ ಕುಳಿತು ಮಾತನಾಡಿದರೂ ಧ್ವನಿತರಂಗಗಳನ್ನು ಬಿತ್ತರಿಸುವ ಸಾಧನ ಇದು."

ಇಂತಹ ಗೂಢಚರ್ಯೆಯ ಸಾಧನಗಳನ್ನು ಉತ್ಪಾದಿಸುವ ಹಲವಾರು ಕಂಪನಿಗಳು ಜಪಾನಿನಲ್ಲಿದ್ದರೂ ಕೋನಿ ಎಲೆಕ್ಟ್ರಾನಿಕ್ಸ್‌ಗೇ ಅಗ್ರಸ್ಥಾನ. ಐವತ್ತುಕೋಟಿ ರೂಪಾಯಿಗಳಷ್ಟು ಮೊತ್ತದ ಸಲಕರಣೆಗಳನ್ನದು ಪ್ರತಿವರ್ಷ ಉತ್ಪಾದಿಸಿ ಅದರ ಪೈಕಿ ಶೇಕಡಾ ನಾಲ್ವತ್ತರಷ್ಟನ್ನು ಹೊರದೇಶಗಳಿಗೆ ಮಾರುತ್ತಿದೆ. ಬೇರೆ ಬೇರೆ ಕಂಪನಿಗಳು ಹಾಗೂ ರಾಯಭಾರಿ ಕಚೇರಿಗಳೇ ಇಂಥ ಸಲಕರಣೆಗಳಿಗೆ ಮುಖ್ಯ ಗ್ರಾಹಕರು.

ಕಂಪನಿಯ ತಜ್ಞರು ಪ್ರತಿಸ್ಪರ್ಧಿಗಳ ರಹಸ್ಯವನ್ನು ಕದಿಯಲೆಂದೇ ಪರದೇಶಗಳಿಗೇ ಹೋಗುವುದೂ ಉಂಟು. ಅಂಥವರ ಮೇಲೆ ಸರಕಾರಿ ಅಥವಾ ಖಾಸಗಿ ಗುಪ್ತಚಾರರು ನಿಗಾ ಇಟ್ಟಿರುವುದು ಅಸಹಜವೇನಲ್ಲ. ೧೯೮೨ರಲ್ಲಿ ಜಪಾನಿನ ಹಿಟಾಚಿ ಹಾಗೂ ಮಿತ್ಸುಬಿಶಿ ಸಂಸ್ಥೆಗಳ ತಜ್ಞರು ಕ್ಯಾಲಿಫೋರ್ನಿಯದಲ್ಲಿ ಐಬಿಎಂ ಕಂಪನಿಯಿಂದ ಕಂಪ್ಯೂಟರ್ ರಹಸ್ಯವನ್ನು ಕದಿಯುವಾಗ ಸರಕಾರಿ ಗುಪ್ತಚಾರರ ಕೈಲಿ ಸಿಕ್ಕುಬಿದ್ದು ದೊಡ್ಡ ರಾದ್ಧಾಂತವೇ ಆಗಿತ್ತು.

ಕಂಪನಿಗಳಲ್ಲಿ ಸಹಕಾರ-ಸಹಯೋಗಿತ್ವಗಳು ಹೆಚ್ಚಿದಷ್ಟೂ ಪ್ರತಿಗೂಢಚರ್ಯೆ ನಡೆಯುವ ಸಂಭವ ಹೆಚ್ಚು. ಹಾಗಾಗಿಯೆ ವಿದೇಶಗಳಲ್ಲಿ ಕಂಪನಿಗಳಲ್ಲಿ ಕೆಲಸ ಮಾಡುವವರ ಮೇಲೆ ಅವರಿಗೆ ಗೊತ್ತಾಗದ ಹಾಗೆ ನಿಗಾ ಇಡಲಾಗುತ್ತದೆ. ಕಂಪನಿಯ ಉಚ್ಚ ಅಧಿಕಾರಿಗಳು ವಿದೇಶಪ್ರಯಾಣ ಕೈಗೊಳ್ಳುವಾಗಲೆಲ್ಲ ಗೂಢಚಾರರನ್ನು ಮುಂಚಿತವಾಗಿಯೆ ಕಳಿಸಿ ಅಧಿಕಾರಿಗಳು ಇಳಿದುಕೊಳ್ಳುವ ಸ್ಥಳಗಳನ್ನೆಲ್ಲಾ ಪರೀಕ್ಷಿಸಲಾಗಿರುತ್ತದೆ. ಅಷ್ಟಾದರೂ ಗೂಢಚರ್ಯೆ ನಡೆಯದೆ ಇರುವುದಿಲ್ಲ.

ವಿದೇಶಗಳಲ್ಲಿ ಪತ್ತೇದಾರಿ ಸಂಸ್ಥೆಗಳಿಗೆ ಈಗ ಉಚ್ಛ್ರಾಯದ ಕಾಲ. ನಿಯಮಿಸಿಕೊಂಡ ಕಂಪನಿಯ ಪರವಾಗಿ ಗೂಢಚರ್ಯೆ ನಡೆಸುವುದಲ್ಲದೆ ಆ ಕಂಪನಿಗಳಲ್ಲಿ ಪ್ರತಿಸ್ಪರ್ಧಿ ಕಂಪನಿಗಳಿಂದ ಗೂಢಚರ್ಯೆಯ ಕೆಲಸ ನಡೆಯದಹಾಗೆ ನೋಡಿಕೊಳ್ಳುವುದೂ ಈ ಪತ್ತೇದಾರಿ ಸಂಸ್ಥೆಗಳ ಕರ್ತವ್ಯ. ಅದಕ್ಕಾಗಿ ಕಂಪನಿಗಳು ಭಾರೀ ಶುಲ್ಕವನ್ನೇ ತೆರಬೇಕಾಗುತ್ತದೆ. ರಹಸ್ಯಗಳು ಬಯಲಾದರೆ ಇನ್ನಷ್ಟು ಹಾನಿಯನ್ನನುಭವಿಸಬೇಕಾಗುವುದರಿಂದ ಕಂಪನಿಗಳು ಈ ಕೆಲಸಕ್ಕಾಗಿ ಅಷ್ಟು ಹಣ ತೆರಲು ಹಿಂದೆ ಮುಂದೆ ನೋಡುವುದೂ ಇಲ್ಲ. "ಕಂಪನಿಗಳಲ್ಲಿ ಕದ್ದುಕೇಳುವ ಉಪಕರಣಗಳನ್ನು ಅಳವಡಿಸಲಾಗಿದೆಯೆ? ಎನ್ನುವುದನ್ನು ಪರೀಕ್ಷಿಸಲು ವರ್ಷದಲ್ಲಿ ೩೦ ಸಲ ದಾಳಿಯಿಡುವ ಪ್ರಸಂಗ ಬರುತ್ತದೆ. ಒಂದೊಂದು ಸಲ ದಾಳಿಯಿಟ್ಟಾಗಲೂ ಸುಮಾರು ೨೨,೦೦೦ ರೂಪಾಯಿಗಳಷ್ಟು ವೆಚ್ಚ ತಗಲುತ್ತದೆ. ಕಂಪನಿಗಳು ಆ ವೆಚ್ಚವನ್ನು ಸಂತೋಷದಿಂದಲೇ ಭರಿಸುತ್ತವೆ," ಎಂದು ತಾಕೆಯುಷಿ ಎಂಬ ಪ್ರಖ್ಯಾತ ಜಪಾನೀ ಪತ್ತೇದಾರ ಹೇಳಿದಾಗ, ಅಲ್ಲಿಯೇ ಇದ್ದ ಒಬ್ಬರು, "ಇಷ್ಟೆಲ್ಲ ಮುಂಜಾಗ್ರತೆ ತೆಗೆದುಕೊಳ್ಳುತ್ತೀರೆಂದಮೇಲೆ ನೀವು ನೋಡಿಕೊಳ್ಳುವ ಕಂಪನಿಗಳಲ್ಲಿ ಗೂಢಚರ್ಯೆ ನಡೆಯಲು ಸಾಧ್ಯವೇ ಇಲ್ಲ ಅಲ್ಲವೆ?" ಎಂದು ಕೇಳಿದರು. ತಾಕೆಯುಷಿ ಅವರಿಂದ ಸಕಾರಾತ್ಮಕ ಉತ್ತರ ಬರಲಿಲ್ಲ. ●






ಮಾಹಿತಿಯ ರಾಜಮಾರ್ಗ ಎಂಬ ಪದ ಸಮುಚ್ಚಯಕ್ಕೆ ಸಾಕಷ್ಟು ಪ್ರಚಾರ ಶಕ್ತಿಯಿದೆ. ಈ ಮಾತು ಕೇಳಿದೊಡನೆ ವೇಗ, ದಕ್ಷತೆ ಮತ್ತು ಎಲ್ಲರಿಗೂ ಸ್ವಾತಂತ್ರ್ಯ ಎಂಬ ಮಾತುಗಳು ನೆನಪಾಗುತ್ತವೆ. ಈ ಎಲ್ಲಾ ಪ್ರಭಾವೀ ಶಬ್ದಗಳು ಸಾಮಾನ್ಯ ಅಮೇರಿಕನ್ನರಿಗೆ ಅತ್ಯಂತ ಆಕರ್ಷಕವಾಗುತ್ತವೆ. ಮಾಹಿತಿಯ ರಾಜಮಾರ್ಗದಲ್ಲಿ ನಿತ್ಯದ ಜಂಜಾಟದಿಂದ ಬಹುದೂರ, ಕೆಲಸ-ರಾಜಕೀಯಗಳ ಗೊಂದಲದಿಂದ ದೂರ, ಅತ್ಯಂತ ವೇಗದಲ್ಲಿ ಚಲಿಸಬಹುದಾದ ಸಾಧ್ಯತೆಗಳು ತಮ್ಮ ಮಕ್ಕಳ ಬದುಕಿನ ಬಗ್ಗೆ ಯೋಚಿಸುವ ಅಮೇರಿಕನ್ನರಿಗೆ ಅತ್ಯಂತ ಚೇತೋಹಾರಿ ಭಾವಲೋಕದ ವಿಷಯಗಳಾಗಿವೆ. ಮಾಹಿತಿಯ ರಾಜಮಾರ್ಗ ಎಂಬ ಈ ಮಾತು ಅಮೇರಿಕೆಯ ಬೇರೆ ಬೇರೆ ರಂಗದಲ್ಲಿ ಬೇರೆ ಬೇರೆ ಅರ್ಥಗಳನ್ನು ಪಡೆಯುತ್ತದೆ. ಎರಡು ವರುಷಗಳ ಕೆಳಗೆ ನನ್ನ ಕೆಲ ವಿದ್ಯಾರ್ಥಿಗಳು ಸದಾ ಈ ಬಗ್ಗೆ ಪ್ರಚಾರ ನಡೆಸಿದ್ದ ದೊಡ್ಡ ಕಂಪನಿಗಳಿಗೆ ಈ ಬಗ್ಗೆ ಏನನಿಸುತ್ತದೆಂದು ಕಂಡುಹಿಡಿಯಲು ಪ್ರಯತ್ನಿಸಿದರು. ವಾರ್ನರ್ ಬ್ರದರ್ಸ್‌ನಂತಹ ರಾಕ್ಷಸ ಸಂಸ್ಥೆಯ ಸಾಮಾನ್ಯ ಅಧಿಕಾರಿಗಳು ಈ ಬಗ್ಗೆ ಏನೂ ಹೇಳಲಾರದಾದರು. ಅವರು ತಮ್ಮ ಕಂಪನಿಯ ಅಧ್ಯಕ್ಷರಿಗೇ ನಮ್ಮ ಪ್ರಶ್ನಾವಳಿಯನ್ನು ಕಳಿಸುತ್ತಿದ್ದರು. ಹೋದ ವರ್ಷ ಅಮೇರಿಕೆಯ ಉಪಾಧ್ಯಕ್ಷ ಅಲ್ ಗೋರ್ 'ನ್ಯಾಶನಲ್ ಇನಫರ್ಮೇಷನ್ ಇನ್ಫ್ರಾಸ್ಟ್ರಕ್ಚರ' ಅನ್ನು ಉದ್ಘಾಟಿಸಿದರು. ಈ ಸಂಸ್ಥೆಯು ಖಾಸಗಿ ದೂರವಾಣಿ ಕಂಪನಿಗಳ ದೂರವಾಣಿ ಸಂಪರ್ಕಗಳನ್ನು ಮನರಂಜನೆಗಾಗಿ, ಮಾಹಿತಿಗಾಗಿ, ಮನೆ ಮತ್ತು ಕಂಪನಿಗಳ ಸೇವೆಗಾಗಿ ಉಪಯೋಗಿಸಲು ಉದ್ದೇಶಿಸುತ್ತದೆ. ಈ ಕಂಪನಿಗೆ ಆರ್ಥಿಕ ಮತ್ತು ಕಾನೂನಿನ ಆಧಾರವನ್ನು ಅಮೇರಿಕದ ಸರಕಾರವೇ ನೀಡುತ್ತದೆ. ಐವತ್ತು ವರುಷಗಳ ಹಿಂದೆ ಸರಕಾರದ ಹಣದಿಂದ ರಾಷ್ಟ್ರೀಯ ಹೆದ್ದಾರಿಗಳನ್ನು ನಿರ್ಮಿಸಿ ಕಾರು, ಲಾರಿ, ಉಕ್ಕು, ಅಲ್ಯುಮಿನಿಯಂ ಉದ್ಯಮಗಳಿಗೆ ಚಾಲನೆ ನೀಡಿದಂತೆ ಅಲ್ ಗೋರ್ ಯೋಜನೆಯಿಂದ ಸಾರ್ವಜನಿಕ ಹಣವನ್ನು ಬಳಸಿ ದೊಡ್ಡ ಕಂಪನಿ

ಗಳಿಗೆ ಮತ್ತು ಶ್ರೀಮಂತರಿಗೆ ಅನುಕೂಲ ಮಾಡಿ ಕೊಡಲಾಗುತ್ತದೆ.

ಮಾಹಿತಿಯ ರಾಜಮಾರ್ಗದ ಇನ್ನಷ್ಟು ವಿವರವಾದ ವಿಶ್ಲೇಷಣೆ ಮಾಡೋಣ. ಇದು ಯಥಾರ್ಥವಾಗಿ ಒಂದು ಸಂಘಟಿತ ಸಂಪರ್ಕಜಾಲ. ಮನೆಗಳನ್ನು, ಕಾರ್ಪೊರೇಶನ್‌ಗಳನ್ನು, ವಿಶ್ವವಿದ್ಯಾಲಯಗಳನ್ನು, ಸರಕಾರಿ ಕಛೇರಿಗಳನ್ನು ಸಂಶೋಧನ ಸಂಸ್ಥೆಗಳನ್ನು ಹೀಗೆ ಹಲವಾರು ಸಂಸ್ಥೆಗಳನ್ನು ಒಂದೇ ಸಂಪರ್ಕಜಾಲದಲ್ಲಿ ತರಬಹುದು. ಈ ಜಾಲವು ಸ್ಥಳೀಯವಾಗಿ ಪ್ರಾಂತೀಯವಾಗಿ, ರಾಷ್ಟ್ರ ಮಟ್ಟದಲ್ಲಿ ಅಥವಾ ಅಂತಾರಾಷ್ಟ್ರೀಯ ಮಟ್ಟದಲ್ಲಿ ಇರಬಹುದು. ಈ ಜಾಲದ ಮೂಲಕ ಸಂದೇಶಗಳನ್ನು ಅಂಕಿ ಸಂಖ್ಯೆಗಳನ್ನು, ಚಿತ್ರಗಳನ್ನು, ಮತ್ತೆಲ್ಲ ತರಹದ ಧ್ವನಿಸಂಕೇತಗಳನ್ನು ಕಳಿಸಬಹುದು ಮತ್ತು ತರಿಸಬಹುದು.

ಈ ಎಲ್ಲಾ ತಾಂತ್ರಿಕತೆಯ ಮೂಲವಸ್ತು ಚಿಕ್ಕದಾದ, ಬಲಾಢ್ಯವಾದ ಕಂಪ್ಯೂಟರ್. ಜೊತೆ ಜೊತೆಗೆ ಸುಧಾರಿತವಾದ ಅನೇಕ ಚಾನೆಲ್‌ಗಳಿಗೆ ಅವಕಾಶ ನೀಡಬಲ್ಲ ವಾಹಕ ತಂತಿಗಳು ಸಂಪರ್ಕ ಏರ್ಪಡಿಸುತ್ತವೆ. ಕೂದಲೆಳೆ ಗಾತ್ರದ ಆಪ್ಟಿಕಲ್ ಫೈಬರ್ ವಾಹಕವು ೪೦ ಸಾವಿರ ಚಾನಲ್‌ಗಳನ್ನು ನಿರ್ವಹಿಸಬಲ್ಲದು. ಸದ್ಯ ಅಮೇರಿಕೆಯಲ್ಲಿ ಖಂಡ ತುಂಡವಾದ ಸಂಪರ್ಕಜಾಲವಿದೆ. ಕೇಬಲ್ ಟಿ.ವಿ., ಉಪಗ್ರಹ ಟಿ.ವಿ. ಮತ್ತು ಪ್ರಸಾರ ಮಾಧ್ಯಮಗಳು ಅನೇಕ ದೃಕ್ ಶ್ರವಣ ಕಾರ್ಯಕ್ರಮಗಳನ್ನು ಮನೆಗಳಿಗೆ, ಕಛೇರಿಗಳಿಗೆ ಮತ್ತು ಸೈನಿಕರ ನೆಲೆಗಳಿಗೆ ತಲುಪಿಸುತ್ತವೆ. ಅಮೇರಿಕೆಯ ೯೪.೭ ಮಿಲಿಯ ಮನೆಗಳ ಪೈಕಿ ಶೇಕಡಾ ೯೮ರಷ್ಟು ಮನೆಗಳಿಗೆ ಕೇಬಲ್ ಟಿ.ವಿ. ಸಂಪರ್ಕ ಕಲ್ಪಿಸಬಹುದು. ಸುಮಾರು ಶೇಕಡಾ ೭೦ರಷ್ಟು ಮನೆಗಳಿಗೆ ಈಗಾಗಲೇ ಸಂಪರ್ಕವಿದೆ. ಜರ್ಮನಿ, ಫ್ರಾನ್ಸ್, ಜಪಾನ್ ಮತ್ತು ಬ್ರಿಟನ್‌ಗಿಂತ ಈ ಸಂಖ್ಯೆ ಹೆಚ್ಚೇ ಇದೆ. ಅಮೇರಿಕೆಯಲ್ಲಿ ಈಗ ಎಲ್ಲ ಮನೆಗಳಿಗೆ ದೂರವಾಣಿ ಸಂಪರ್ಕವಿದೆ. ಕಂಪ್ಯೂಟರ್ ಬೆಲೆಗಳು ಇಳಿಯುತ್ತಿದ್ದಂತೆ ಮನೆಗೊಂದು ಕಂಪ್ಯೂಟರ್ ಬರುತ್ತಿದೆ. ಈಗಾಗಲೇ ಎಷ್ಟೊಂದು ಕಂಪನಿಗಳು ಮನೆಮನೆಗೆ ಆನ್ ಲೈನ್ ಸರ್ವಿಸ್ ಕೊಡುತ್ತಿದ್ದಾರೆ. ಈ ಸೇವೆಗಳೆಂದರೆ ಮನೆಯಲ್ಲಿಯೇ ಕೂತು ಖರೀದಿ ಮಾಡುವುದು, ಬ್ಯಾಂಕ್ ವ್ಯವಹಾರ, ಸಂಶೋಧನೆ, ಎಲೆಕ್ಟ್ರಾನಿಕ್ ಅಂಚೆ, ಬುಲೆಟಿನ್ ಬೋರ್ಡ್ಸ್, ವಿಡಿಯೋ ಸೆಕ್ಸ್ ಇತ್ಯಾದಿ. ಈ ಬಗ್ಗೆ ಮತ್ತೆ ಕೂಲಂಕಷವಾಗಿ ಚರ್ಚಿಸೋಣ. ಅಲ್ ಗೋರ್ ಅವರ ಯೋಜನೆ ಏನೆಂದರೆ ಈಗಿರುವ ಎಲ್ಲಾ ಸಂಪರ್ಕ ಜಾಲಗಳನ್ನು ಖಾಸಗಿ ಕಂಪನಿಗಳ ಮೂಲಕ ಒಂದು ರಾಷ್ಟ್ರೀಯ ಜಾಲದಲ್ಲಿ ಸಂಘಟಿಸುವುದು. ಹೊಸ ಕೇಬಲ್ ಹಾಕುವುದು ತುಂಬಾ ದುಬಾರಿ ಕೆಲಸ. ಈಗಾಗಲೇ ಅಸ್ತವ್ಯಸ್ತವಾಗಿರುವ ಅಮೇರಿಕೆಯ ಆರ್ಥಿಕ ಸ್ಥಿತಿಯಲ್ಲಿ ಖಾಸಗಿ ಕಂಪನಿಗಳು ದುಬಾರಿ ವೆಚ್ಚದ ಆಪ್ಟಿಕಲ್ ಫೈಬರ್ ವಾಹಕಜಾಲ ನಿರ್ಮಿಸಲು ಮುಂದೆ ಬರಲಿಕ್ಕಿಲ್ಲ. ಆದ್ದರಿಂದ ರಾಷ್ಟ್ರೀಯ ಕಾರಣ ಹೇಳಿ ಸರಕಾರದ ಹಣವನ್ನು ಉಪಯೋಗಿಸಿ ಈ ದೊಡ್ಡ ಕಂಪನಿಗಳಿಗೆ ಸಹಾಯ ಮಾಡುವುದೇ ಅಲ್ ಗೋರ್ ಯೋಜನೆಯ ಉದ್ದೇಶ. ಕೆಲ ಸಾರ್ವಜನಿಕ ಸಂಪರ್ಕಜಾಲಗಳನ್ನು ಈ ಕಾರಣಕ್ಕಾಗಿ ಖಾಸಗೀಕರಣ ಮಾಡುವ ಯೋಜನೆಯೂ ಇದೆ.

ಕಳೆದ ಹದಿನೈದು ವರುಷಗಳಲ್ಲಿ ಅಮೇರಿಕಾ

'ಮಾಹಿತಿಯ ರಾಜಮಾರ್ಗ' ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿದ ಪುಸ್ತಿಕೆ. ಇದನ್ನು ಇಂಗ್ಲೀಷಿನಲ್ಲಿ ಬರೆದವರು ಮಂಜುನಾಥ ಪೆಂಡಕೂರ ಅವರು. ಅಮೆರಿಕದ ಎವಾನ್‌ಸ್ಟನ್‌ನಲ್ಲಿರುವ ನಾರ್ಥ್‌ವೆಸ್ಟರ್ನ್ ಯುನಿವರ್ಸಿಟಿಯ 'ಸಂಪರ್ಕ ಹಾಗೂ ಅಭಿವೃದ್ಧಿಪರ ಅಧ್ಯಯನ ಯೋಜನೆ' ವಿಭಾಗದಲ್ಲಿ ಪ್ರೊಫೆಸರ್ ಮತ್ತು ವಿಭಾಗ ಮುಖ್ಯಸ್ಥರಾಗಿರುವ ಮಂಜುನಾಥ ಪೆಂಡಕೂರರು ಮೂಲತಃ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯವರು.

# ರೋಗ ಪರಿಹಾರಕ್ಕೂ ಇಂಟರ್‌ನೆಟ್

ನೀವು ಈ ಲೇಖನವನ್ನೋದುವ ಹೊತ್ತಿಗೆ ಭಾರತವೂ ಅಂತಾರಾಷ್ಟ್ರೀಯ ಸಂಪರ್ಕಜಾಲಕ್ಕೆ ಸೇರಿದೆ. ಆದರೆ ಬೆಂಗಳೂರಿಗೆ ಈ ಸೌಲಭ್ಯ ದೊರೆಯುವಂತಾಗಲು ಇನ್ನೂ ಕೆಲವು ಕಾಲ ಬೇಕು.

ಭಾರತೀಯರೂ ಇದರ ಪ್ರಯೋಜನವನ್ನು ಈಗಾಗಲೇ ಪಡೆಯುತ್ತಿದ್ದಾರೆ. ಆದರೆ ಅಂಥವರ ಸಂಖ್ಯೆ ಕಡಿಮೆ. ಈ ಸಂಪರ್ಕ ವ್ಯವಸ್ಥೆ ಹೇಗೆ ಉಪಯೋಗಕ್ಕೆ ಬರುತ್ತದೆಯೆಂಬ ಬಗ್ಗೆ ಒಂದು ಉದಾಹರಣೆ:

ಹೃಷಿಕೇಶ್ ಆನಂದ್ ಹರೇಕೃಷ್ಣ ಪಂಥಕ್ಕೆ ಸೇರಿದವರು. ಸ್ವಿಟ್ಸರ್‌ಲಂಡಿನಲ್ಲಿ ವಾಸ. ಕಣ್ಣಿನಿಂದ ಬಿಳಿಯಾದ ದ್ರವ ಸೋರತೊಡಗಿದಾಗ ಸ್ವಿಟ್ಸರ್ ಲಂಡ್ ಡಾಕ್ಟರರಿಗೆ ತೋರಿಸಿದರು. ಪ್ರಯೋಜನವಾಗಲಿಲ್ಲ. ಭಾರತದಲ್ಲಿ ಪ್ರತಾಪ ಚೌಹಾಣ ಎಂಬ ಆಯುರ್ವೇದ ತಜ್ಞರು ಈ ರೋಗವನ್ನು ಗುಣಪಡಿಸಬಲ್ಲರು; ಅಲ್ಲದೆ ಅವರು ಇಂಟರ್‌ನೆಟ್ ಸಂಪರ್ಕ ಪಡೆದಿದ್ದಾರೆ ಎಂಬುದು ತಿಳಿದ ಕೂಡಲೇ ಹೃಷಿಕೇಶ ಆನಂದ್ ಅಂತಾರಾಷ್ಟ್ರೀಯ ಸಂಪರ್ಕಜಾಲದ ಮೂಲಕ ಅವರನ್ನು ಸಂಪರ್ಕಿಸಿದರು. ರೋಗ ಲಕ್ಷಣ, ಈವರೆಗೆ ತೆಗೆದುಕೊಂಡ ಔಷಧಗಳು, ಆಹಾರಾಭ್ಯಾಸ ಇತ್ಯಾದಿಗಳನ್ನು ಪಡೆದ ಚೌಹಾಣ ಕೂಡಲೆ ರೋಗ ನಿಧಾನವನ್ನು ಸೂಚಿಸಿದರು. ಇಷ್ಟೆಲ್ಲ ಆಗಲಿಕ್ಕೆ ಐದಾರು ನಿಮಿಷಗಳೂ ತಗುಲಲಿಲ್ಲ. ಹೃಷಿಕೇಶ ಆನಂದರ ರೋಗ ಕೆಲವೇ ದಿನಗಳಲ್ಲಿ ಮಂಗಮಾಯ. ವಾಸ್ತವವಾಗಿ ಈ ವ್ಯವಸ್ಥೆಯ ಮೂಲಕ ರೋಗಿ ಇಂತಹುದೇ ವ್ಯವಸ್ಥೆಯಿರುವ ಡಾಕ್ಟರರನ್ನು ಅವರು ಜಗತ್ತಿನ ಯಾವ ಭಾಗದಲ್ಲಿದ್ದರೂ ನಿಮಿಷಾರ್ಧದಲ್ಲೆ ಸಂಪರ್ಕಿಸಬಹುದು.

ಲಂಡನ್ ಬಳಿಯ ವೂರ್ಲೆಬಿಯ ಒಂಬತ್ತು ವರ್ಷದ ಹುಡುಗ ಮ್ಯಾಥ್ಯೂ ಫೆಲ್ ಅತ್ಯಂತ ಅಪರೂಪದ್ದೆನಿಸಿದ ವಿಲಕ್ಷಣ ತಲೆನೋವಿನಿಂದ ಬಳಲುತ್ತಿದ್ದ. ಆತನಿಗೆ ಇಲಾಜು ಮಾಡುವುದು ತಮ್ಮಿಂದ ಸಾಧ್ಯವೇ ಇಲ್ಲ ಎಂದು ಅಲ್ಲಿಯ ಡಾಕ್ಟರುಗಳು ಕೈ ಚೆಲ್ಲಿದರು. ಬೇರೆ ಯಾರಾದರೂ ಆಗಿದ್ದರೆ ಇಂಥ ಸಂದರ್ಭದಲ್ಲಿ ಎದೆಗೆಡುತ್ತಿದ್ದರೇನೋ. ಆದರೆ ಆ ಬಾಲಕನಿಗೆ ಇಂಟರ್‌ನೆಟ್ ನೆರವಿಗೆ ಬಂತು. ಜಗತ್ತಿನಾದ್ಯಂತದ ಡಾಕ್ಟರುಗಳಿಗೆ ಆತನ ತಂದೆ-ತಾಯಿ ಮಗನ ತಲೆನೋವು ನಿವಾರಿಸಿ, ಎಂದು ಇಂಟರ್‌ನೆಟ್ ಮೂಲಕ ವಿನಂತಿಸಿಕೊಂಡರು. ಆತನಿಗಿರುವ ತೊಂದರೆಗಳನ್ನೂ ಆ ಮನವಿಯಲ್ಲಿ ಹೇಳಿಕೊಂಡರು.

ಪರಿಣಾಮವಾಗಿ ಅಮೆರಿಕದ ವೈದ್ಯಕೀಯ ಸಂಸ್ಥೆಯೊಂದು ಆತನಿಗೆ ನೆರವಾಗಲು ಮುಂದೆ ಬಂದಿತು. ಅಷ್ಟೇ ಅಲ್ಲ, ಮೊನ್ನೆ ಮೊನ್ನೆ ಮ್ಯಾಥ್ಯೂನ ಮಿದುಳಿನ ಶಸ್ತ್ರಕ್ರಿಯೆಯನ್ನು ಯಶಸ್ವಿಯಾಗಿ ನಡೆಯಿಸಿ ಆತನನ್ನು ಆ ಶೂಲೆಯ ಶೂಲದಿಂದ ಪಾರು ಮಾಡಿತು.

ಈವರೆಗೆ ಯುರೋಪಿನಲ್ಲಿ ಇಂಥ ವಿಲಕ್ಷಣ ತಲೆನೋವಿನ ಪ್ರಕರಣಗಳು ಕೇವಲ ೧೪ ಎಂದು ವೈದ್ಯಲೋಕ ಹೇಳುತ್ತದೆ. ಈ ಪೀಡೆ ಮುಖ ಹಾಗೂ ತಲೆಯಲ್ಲಿಯ ಪ್ರಮುಖ ನರವೊಂದನ್ನು ಅಪ್ಪಿಕೊಳ್ಳುತ್ತದೆ. ನಂತರ ನಿರಂತರ ತಲೆನೋವು ಕಾಡತೊಡಗುತ್ತದೆ. ಇದೇ ಜನವರಿಯಲ್ಲಿ ಮ್ಯಾಥ್ಯೂನನ್ನಿದು ಕಾಡಲು ಶುರುಮಾಡಿತು.

ಇಂಥದೇ ತೊಂದರೆಯಿಂದ ನಲುಗಿದ್ದ ಬಾಲಕಿಯೊಬ್ಬಳ ಮೂಲಕ ಪೆನ್‌ಸಿಲ್ವೇನಿಯದ ಡಾ. ಪೀಟರ್ ಜೆನ್ನೆಟ್ಟಾ ಅವರನ್ನು ಸಂಪರ್ಕಿಸಲು ಮ್ಯಾಥ್ಯೂನ ತಂದೆತಾಯಿಗಳಿಗೆ ಸಾಧ್ಯವಾದದ್ದೇ ತಡ ಮುಂದಿನ ಕೆಲಸವೆಲ್ಲ ಸುಗಮವಾಯಿತು.

ನಮ್ಮ ದೇಶದಲ್ಲಿನ್ನೂ ಆ ವ್ಯವಸ್ಥೆ ಬಳಕೆಯಲ್ಲಿ ಬಂದಿಲ್ಲ ನಿಜ- ಮಕ್ಕಳು ಮನೆಯಲ್ಲೆ ಕುಳಿತು ಪಾಠ ಹೇಳಿಸಿಕೊಳ್ಳಬಹುದು. ಯಾವುದಾದರೂ ಭಾಗ ಅರ್ಥವಾಗದಿದ್ದಾಗ ಆಗಿಂದಾಗ ಗುರುಗಳನ್ನು ಸಂಪರ್ಕಿಸಿ ತೊಂದರೆಯನ್ನು ಪರಿಹರಿಸಿಕೊಳ್ಳಬಹುದು.

ಈ ಬಗೆಯ ವ್ಯವಸ್ಥೆಯಿಂದ ಮಕ್ಕಳಿಗೆ ಶಾಲೆಯಲ್ಲಿ ದೊರೆಯುವುದಕ್ಕಿಂತ ಹೆಚ್ಚಿನ ಮಟ್ಟದ ವಿದ್ಯಾಭ್ಯಾಸ ಮಾಡಿಸಬಹುದು ಎಂಬುದು ಅನೇಕ ತಂದೆ ತಾಯಿಗಳ ಅಭಿಪ್ರಾಯ ಎಂದು ವಾಯಿಸ್ ಆಫ್ ಅಮೇರಿಕದ ಇತ್ತೀಚಿನ ವರದಿ.

ನಿಜ. ಪರ್ಸನಲ್ ಕಂಪ್ಯೂಟರ್, ಮೋಡೆಮ್ ಹಾಗೂ ಟೆಲಿಫೋನಿಗೆ ಸಂಪರ್ಕ ಕಲ್ಪಿಸಿಕೊಳ್ಳಲು ಅಮೇರಿಕದಲ್ಲಿ ಶುಲ್ಕ ತೆರಬೇಕಾಗಿಲ್ಲ. ಟೆಲಿಫೋನ್ ಬಾಡಿಗೆಯನ್ನು ಹೊರತುಪಡಿಸಿ ಬೇರಾವುದೇ ಫೀ ಕೊಡಬೇಕಾಗಿಲ್ಲ. ಇಂಟರ್‌ನೆಟ್ ಉಪಯೋಗಿಸಲೂ ಹಣ ತೆರಬೇಕಾಗಿಲ್ಲ.

ಆದರೆ ಇಲ್ಲಿಯ ಮಾತು ಹಾಗಲ್ಲ. ಇದನ್ನು ವಿದ್ಯಾರ್ಥಿಗಳು ಉಪಯೋಗಿಸುವುದಾದರೆ ವರ್ಷಕ್ಕೆ ೫೦೦ ರೂಪಾಯಿ ಶುಲ್ಕ ಕಟ್ಟಬೇಕು. ಕಂಪ್ಯೂಟರ್, ಮೋಡೆಮ್ ಕೊಳ್ಳುವ ಶಕ್ತಿಯಿರುವವರಿಗೆ ನಮಗೆ ಇಷ್ಟು ವೆಚ್ಚ ಮಾಡುವುದೇನೂ ಕಷ್ಟದ್ದಲ್ಲ. ಆದರೆ ಟೆಲಿಫೋನ್, ಮೋಡೆಮ್ ಮಾನಿಟರ್ ಹಾಗೂ ಕಂಪ್ಯೂಟರ್‌ಗಳಿಗೆ ಪುಕ್ಕಟೆಯಾಗಿ ಸಂಪರ್ಕ ಏರ್ಪಡಿಸಲಾಗುವುದಿಲ್ಲ. ಸ್ಥಾನಿಕ ಕರೆಗಳಷ್ಟು ಮಾತ್ರ ಶುಲ್ಕವನ್ನು ಭರಿಸಿಕೊಳ್ಳಬೇಕಾಗುತ್ತದೆಂದು ಭಾವಿಸಿದರೂ ವಿದ್ಯಾರ್ಥಿಯೊಬ್ಬ ಒಂದು ದಿನಕ್ಕೆ ಒಂದು ಗಂಟೆಯಷ್ಟು ಈ ಸಂಪರ್ಕ ವ್ಯವಸ್ಥೆಯ ಪ್ರಯೋಜನ ಪಡೆಯುತ್ತಾನೆಂದುಕೊಂಡ ಆತ ತಿಂಗಳಿಗೆ ಅಂದಾಜು ಮೂರು ಸಾವಿರ ರೂಪಾಯಿಗಳಷ್ಟು ವೆಚ್ಚವನ್ನು ಭರಿಸಬೇಕಾಗುತ್ತದೆ. ಈ ವ್ಯವಸ್ಥೆಯಿಂದ ಸಾಕಷ್ಟು ಪ್ರಯೋಜನವಿದೆಯಾದರೂ ಜನಸಾಮಾನ್ಯರಿಂದ ಇದು ಸದ್ಯಕ್ಕೆ ಗಾವುದದಷ್ಟು ದೂರ.

● ಸಂಪಾದಕ

ಸರಕಾರವು ಮಾಹಿತಿವಲಯದಲ್ಲಿ ನಿರ್ವಹಿಸುತ್ತಿರುವ ಪಾತ್ರದ ಬಗ್ಗೆ ಎರಡು ಮಾತು. ೧೯೮೦ರಲ್ಲಿ ರೋನಾಲ್ಡ್ ರೇಗನ್ ಅಧ್ಯಕ್ಷರಾದೊಡನೆ ಅಮೇರಿಕೆಯ ಆರ್ಥಿಕ ರಂಗದ ಕೆಲ ವಲಯಗಳಲ್ಲಿ ಸರಕಾರದ ಪಾತ್ರವನ್ನು ಕಡಿಮೆಗೊಳಿಸುವ ಕೆಲಸ ಸುರುವಾಯಿತು. ಸರ್ಕಾರಿ ಹತೋಟಿಯ ರದ್ದತಿಯ ಕ್ರಮವೆಂದು ಆರಂಭವಾದ ಈ ಕ್ರಿಯೆಯಿಂದ ಖಾಸಗೀ ಕಂಪನಿಗಳ ಲಾಭಕೋರತನಕ್ಕೆ ಹಾಕಿದ್ದ ಕಡಿವಾಣಗಳು ಸಡಿಲಿದವು. ಕಾರ್ಮಿಕರ, ಬಡವರ ಮತ್ತು ಅಮೇರಿಕಾದ ದುರ್ಬಲರ ಬಗ್ಗೆ ಅವರು ವಹಿಸಬೇಕಾಗಿದ್ದ ಕಾಳಜಿಯನ್ನು ರದ್ದುಗೊಳಿಸಲಾಯಿತು. ಈ ಎಲ್ಲಾ ಕ್ರಮಗಳಿಂದ ಮಾಹಿತಿ ಮತ್ತು ಸಂಪರ್ಕವಲಯವು ಖಾಸಗೀ ಬಂಡವಾಳದ ಅನುಕೂಲಕ್ಕೆ ಮಾರ್ಪಟ್ಟು ಅಮೇರಿಕೆಯ ಔದ್ಯೋಗಿಕ ರಂಗವು ದೊಡ್ಡ ಗಲಿಬಿಲಿಗೆ ಬಲಿಯಾಯಿತು. ಬಂಡವಾಳ ರಂಗದಲ್ಲಿ ಪ್ರಾರಂಭವಾದ 'ಲಿವರೇಜ ಬಯಔಟ್' ವಿಧಾನದಿಂದ ಅನೇಕ ಸಣ್ಣ ಮತ್ತು ಮಧ್ಯಮಗಾತ್ರದ ಕಂಪನಿಗಳು ಮುಳುಗಿಹೋದರೆ, ಕೆಲ ದೊಡ್ಡ ಕಾರ್ಪೋರೇಷನ್‌ಗಳು ತಮ್ಮ ಅಮೂಲ್ಯ ಆಸ್ತಿಗಳನ್ನು ಕಳೆದುಕೊಂಡವು. ಚಾಣಾಕ್ಷರಾದ ಷೇರ್ ಬ್ರೋಕರ್‌ಗಳು, ವಕೀಲರು ಯಾವುದೇ ಕಾನೂನನ್ನು ಮುರಿಯದೇ ಎಲ್ಲವನ್ನೂ ಸಾಧಿಸಿ ಜೀವಮಾನವೆಲ್ಲ ಒಂದು ಕಂಪನಿಗಾಗಿ ದುಡಿದ ಅನೇಕರನ್ನು ನಿರ್ಗತಿಕರನ್ನಾಗಿ ಮಾಡಿದರು. ಅಮೇರಿಕೆಯ ಬಂಡವಾಳಶಾಹಿ ಸ್ಮಶಾನದಲ್ಲಿ ಭಾರತದ ಹರ್ಷದ್ ಮೆಹತಾನಂತೆ ಐವಾನ್ ಬಾಸ್ಕಿ ಮತ್ತು ಕಾರ್ಲ್ ಮಿಲ್ಲಿಕೆನ್ ಜೈಲು ಅನುಭವಿಸಿ ಚಿರಸ್ಮರಣೀಯರಾಗಿದ್ದಾರೆ. ರೇಗನ್ ಸರಕಾರ ಕೈಗೊಂಡ ನಿಬಂಧನೆಗಳನ್ನು ಸಡಿಲಗೊಳಿಸುವ ಕಾರ್ಯಕ್ರಮದ ಮತ್ತೊಂದು ಮಗ್ಗುಲೇ ಬೇರೆ ಬೇರೆ ಬಂಡವಾಳಶಾಹಿ ಗುಂಪುಗಳು ಸ್ಪರ್ಧೆಯಿಂದ ಸಂಪರ್ಕಜಾಲಗಳನ್ನು ನಿರ್ಮಿಸುವ ಸಾಧ್ಯತೆಗಳನ್ನು ಹೆಚ್ಚಿಸಿದೆ. ಉದಾಹರಣೆಗೆ ಶಿಕಾಗೋದಲ್ಲಿ ಪ್ರಾಯೋಗಿಕವಾಗಿ ಸ್ಥಳೀಯ ಕೇಬಲ್, 'ದೂರವಾಣಿ' ಮತ್ತಿತರ ಮನೋರಂಜನ ಮಾಧ್ಯಮಗಳನ್ನು ಒಂದೇ ಜಾಲದಲ್ಲಿ ತಂದು ೫೦೦ ಚಾನಲ್‌ಗಳ ಮೂಲಕ ಆಟಪಾಟ, ಮನೋರಂ



ಜನೆ, ಟಪಾಲು ಕೊಡುಕೊಳ್ಳುವಿಕೆ, ಭದ್ರತೆ ಮುಂತಾದ ಸೇವೆಗಳನ್ನೊದಗಿಸುವ ಪ್ರಯತ್ನ ನಡೆದಿದೆ.

ಈ ಎಲ್ಲಾ ಸೇವೆಗಳ ಹಿಂದಿರುವ ಯೋಜನೆಗಳು ತೀರಾ ಸರಳ ಮತ್ತು ಉಪಯೋಗಕಾರಿ. ಉದಾಹರಣೆಗೆ ಆನ್‌ಲೈನ್ ಸರ್ವಿಸ್. ನಮ್ಮ ಮನೆಯ ಕಂಪ್ಯೂಟರ್ ವಿಶ್ವವಿದ್ಯಾಲಯಕ್ಕೆ ಮೋಡಮ್ ಮೂಲಕ ಮುಖ್ಯ ಕಂಪ್ಯೂಟರ್ ದ್ವಾರ ಸಂಪರ್ಕ ಪಡೆದಿದೆ. ಮೋಡಮ್ ದೂರವಾಣಿ ಸಂಪರ್ಕದ ಮೂಲಕ ಕಂಪ್ಯೂಟರ್ ಭಾಷೆಯಲ್ಲಿ ೦ ಯಿಂದ ೧ರವರೆಗೆ ಮಾಹಿತಿಯನ್ನು ಸ್ವೀಕರಿಸುತ್ತದೆ ಮತ್ತು ನೀಡುತ್ತದೆ. ವಿಶ್ವವಿದ್ಯಾಲಯದ ಮುಖ್ಯ ಕಂಪ್ಯೂಟರ್ ನಾನಾ ವಿಧವಾದ ಸೇವೆಗಳನ್ನು ಪಡೆಯಲು ಹೆಬ್ಬಾಗಿಲಾಗುತ್ತದೆ. ಈ ಮುಖಾಂತರ ವಿಶ್ವವಿದ್ಯಾಲಯದ ಗ್ರಂಥಾಲಯ, ಬೇರೆ ಬೇರೆ ಪತ್ರಿಕೆಗಳು, ಕಾಂಗ್ರೆಸ್‌ನ ಗ್ರಂಥಾಲಯ ಮತ್ತು ದೇಶದ ಪ್ರಮುಖ ಸಂಪರ್ಕ ಜಾಲಗಳಾದ 'ಇಂಟರ್‌ನೆಟ್ ಮತ್ತು ಪೀಸ್‌ನೆಟ್'ಗೆ ನಾವು ಸಂಪರ್ಕ ಪಡೆಯುತ್ತೇವೆ. ಪ್ರಪಂಚದಾದ್ಯಂತ ಸಾವಿರಾರು ವಿಶ್ವವಿದ್ಯಾಲಯಗಳು, ಭಾರತದ ಐಐಟಿಗಳು ಇಂಟರ್‌ನೆಟ್ ಜಾಲದಲ್ಲಿ ಸೇರಿಕೊಂಡಿವೆ. 'ಪೀಸ್ ನೆಟ್' ಲಾಭೋದ್ದೇಶವಿಲ್ಲದ ಸಂಸ್ಥೆ. ಈ ಸಂಪರ್ಕಜಾಲದ ಮೂಲಕ ಅಂಚೆ ಸೇವೆ, ಪರಸ್ಪರ ಮಾಹಿತಿ ವಿನಿಮಯ, ಮತ್ತು ಅನೇಕ ವಿಷಯಗಳ ಬಗ್ಗೆ ತಜ್ಞರು ಮತ್ತು ಕ್ರಿಯಾಶೀಲರು ಚರ್ಚೆ ನಡೆಸಬಹುದಾಗಿದೆ. 'ಇಂಟರ್‌ನೆಟ್' ನೀಡುವ ಎಲೆಕ್ಟ್ರಾನಿಕ್ ಮೇಲ್ ಸೇವೆಯಿಂದ ನಾನು ಬೇರೆ ಬೇರೆ ದೇಶಗಳಲ್ಲಿರುವ ಐವತ್ತಕ್ಕೂ ಹೆಚ್ಚು ತಜ್ಞರೊಂದಿಗೆ ಸದಾ ಸಂಪರ್ಕದಲ್ಲಿರುತ್ತೇನೆ. ಈ ಅನುಕೂಲದ ಮೂಲಕ ಇಂಟರ್‌ನ್ಯಾಶನಲ್ ಅಸೋಸಿಯೇಷನ್ ಫಾರ್ ಮಾಸ್ ಕಮ್ಯುನಿಕೇಷನ್ ರಿಸರ್ಚ್ ಸಂಸ್ಥೆಯ ಹಿರಿಯರನ್ನು ಸಂಪರ್ಕಿಸಬಹುದಾಗಿದೆ. **IAMOR** ಸಂಸ್ಥೆಯು ಇಂಟರ್‌ನೆಟ್ ಮೂಲಕ ತನ್ನ ಸದಸ್ಯರಿಗಾಗಿ ಪ್ರತ್ಯೇಕ ಟಪಾಲು ಪೆಟ್ಟಿಗೆಯನ್ನು ಇರಿಸಿದೆ.

ಮನೆಯಲ್ಲಿ ಕೂತು ಸಾಮಾನು ಖರೀದಿಸುವುದು ಅಮೇರಿಕೆಯಲ್ಲಿ ತುಂಬಾ ಪ್ರಚಾರದಲ್ಲಿ ಬರುತ್ತಿದೆ. ನನ್ನ ಮಗಳು ಸುಮನ್ (೧೮ ವರ್ಷ) ಪೀಪಾಡ್ ಎಂಬ ಸಂಸ್ಥೆಯಲ್ಲಿ ಅರೆಕಾಲಿಕ ಕೆಲಸ ಮಾಡುತ್ತಾಳೆ. ಪೀಪಾಡ್ ಸಂಸ್ಥೆ ಮನೆಯಲ್ಲೇ ಕೂತು ಖರೀದಿಸುವ ಸೇವೆ ನೀಡುತ್ತದೆ. ಸ್ವಲ್ಪ ಪ್ರವೇಶಧನ ನೀಡಿ ಈ ಸಂಸ್ಥೆಗೆ ಸದಸ್ಯರಾಗಬಹುದು. ಪೀಪಾಡ್ ಸಂಸ್ಥೆ 'ಜ್ಯೂವೆಲ್' ಎಂಬ ಕಿರಾಣಿ ಅಂಗಡಿಗೆ ಸಂಪರ್ಕ ಹೊಂದಿದೆ. ಪೀಪಾಡ್ ನೀಡುವ ಕಂಪ್ಯೂಟರ್ ಪ್ರೋಗ್ರಾಮ್ ಹಾಕಿ ನಮ್ಮ ಕಂಪ್ಯೂಟರ್ ಪರದೆಯ ಮೇಲೆ ಜೂವೆಲ್ ಸ್ಟೋರಿನ ಮೂಲೆ ಮೂಲೆಯ ಅಲಮಾರುಗಳಲ್ಲಿ ಏನೇನು ವಸ್ತುಗಳು ಸಿಗುತ್ತವೆ ಎಂದು ನೋಡಬಹುದು. ಅಲ್ಲಿರುವ ನೂರಾರು ತರಹ ಬ್ರೆಡ್‌ಗಳನ್ನು ಅವುಗಳ ಆಕಾರ, ಬ್ರಾಂಡ್ ನೋಡಿ ನಮಗೆ ಬೇಕಾದ ಹಾಲು, ಕಾಯಿಪಲ್ಯ, ಅಕ್ಕಿ, ಟೂತ್ ಪೇಸ್ಟ್, ಔಷಧಿ, ಮಾಂಸ, ಪೆಪ್ಪರ್‌ಮಿಂಟ್, ಪತ್ರಿಕೆ, ಹೂವು, ದಿನ ಪತ್ರಿಕೆ ಮತ್ತು ಪಾನೀಯಗಳನ್ನು ಆರಿಸಬಹುದು. ಈ ರೀತಿ ಆಯ್ಕೆಯನ್ನು ಕಾಲುಗಂಟೆ ಸಮಯದಲ್ಲಿ ಮುಗಿಸಬಹುದು. ಇದರಿಂದ ನಾನು ಕಾರಿನಲ್ಲಿ ಸ್ಟೋರಿಗೆ ಹೋಗುವುದು, ವಸ್ತುಗಳನ್ನು ಆರಿಸುವುದು, ಬಿಲ್ ಮಾಡಿಸುವಲ್ಲಿ ಸರದಿ ಕಾಯುವುದು ಮುಂತಾಗಿ ಸಾಕಷ್ಟು ಸಮಯ ಮತ್ತು ತಲೆನೋವು

ತಪ್ಪುತ್ತದೆ. ನಾನು ತಿಳಿಸಿದ ವಸ್ತುಗಳನ್ನು ಸುಮನ್ ನಂತಹ ಕೆಲಸಗಾರರು ಆರಿಸಿ ಸರದಿಯಲ್ಲಿ ಕಳಿಸುತ್ತಾರೆ. ಅನಂತರ ಡಿಲೆವರಿ ವಾಹನದಲ್ಲಿ ಸರಕುಗಳು ನನ್ನ ಮನೆಗೆ ಬಿಲ್ ಸಮೇತ ತಲುಪುತ್ತವೆ. ಈ ತರಹದ ಸೇವೆಯಿಂದ ವೃದ್ಧರಿಗೆ, ಸಮಯವಿಲ್ಲದ ಕೆಲಸಸ್ಥರಿಗೆ, ವಾಹನ ನಡೆಸಲಾರದವರಿಗೆ ಮತ್ತನೇಕಾನೇಕರಿಗೆ ತುಂಬಾ ಸಹಾಯವಾಗಿದೆ.

ಅನೇಕ ಬ್ಯಾಂಕುಗಳು ಟೆಲಿಬ್ಯಾಂಕಿಂಗ್ ಪದ್ಧತಿ ಪ್ರಾರಂಭಿಸಿವೆ. ಸಿಟಿಬ್ಯಾಂಕ್ ಈ ಸೇವೆಯಲ್ಲಿ ಅಗ್ರಗಣ್ಯ. ನಾನೊಮ್ಮೆ ಫೋನ್ ಮಾಡಿದರೆ ಬ್ಯಾಂಕಿನ ಕಂಪ್ಯೂಟರ್ ನನ್ನ ಸೆಕ್ಯೂರಿಟಿ ನಂಬರ್, ನನ್ನ ತಾಯಿಯ ಹೆಸರು ಮುಂತಾದ ವಿವರಗಳನ್ನು ತಿಳಿದು ನನ್ನ ಖಾತೆಗಳಿಗೆ ಸಂಪರ್ಕ ನೀಡುತ್ತದೆ. ನಾನಾಗ ಒಂದು ಖಾತೆಯಿಂದ ಇನ್ನೊಂದು ಖಾತೆಗೆ ಹಣ ವರ್ಗಾಯಿಸಬಹುದು. ಲೆಕ್ಕಗಳ ವಿವರ ತಿಳಿಯಬಹುದಲ್ಲದೇ ಹಿಂದಿನ ಐದು ಚೆಕ್ಕುಗಳ ಪಾವತಿ ಬಗ್ಗೆ ಕಂಡುಕೊಳ್ಳಬಹುದು. ಕಂಪ್ಯೂಟರ್‌ನಿಂದ ಸರಿಯಾದ ಪರಿಹಾರ ದೊರೆಯದಿದ್ದರೆ ಮನುಷ್ಯ ಸಂಪರ್ಕ ಪಡೆಯಬಹುದು. ಆದರೆ ಸದ್ಯಕ್ಕೆ ಈ ಸಂಪರ್ಕದ ಮೂಲಕ ಡ್ರಾಫ್ಟ್‌ಗಳನ್ನಾಗಲಿ ಮನಿ ಆರ್ಡರ್ ಆಗಲಿ, ಟ್ರಾವಲರ್ಸ್ ಚೆಕ್ ಮುಂತಾದ ಸೌಲಭ್ಯಗಳನ್ನಾಗಲಿ ಪಡೆಯಲು ಸಾಧ್ಯವಿಲ್ಲ. ಆದರೆ ಸಣ್ಣಪುಟ್ಟ ವಿಚಾರಗಳನ್ನು ಈ ಸಂಪರ್ಕ ಸಾಧನವು ಪರಿಹರಿಸುವುದರಿಂದ ಬ್ಯಾಂಕಿಗೆ ಸಾಕಷ್ಟು ತಲೆನೋವು ಕಡಿಮೆಯಾಗುತ್ತದೆ.

ಬುಲೆಟಿನ್ ಬೋರ್ಡನ್ನು ನಾನಾವಿಧ ಕೆಲಸಗಳಿಗೆ ಉಪಯೋಗಿಸಬಹುದು. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಕ್ರಿಕೆಟ್ ಆಸಕ್ತರು ಇಂತಹ ಬುಲೆಟಿನ್ ಬೋರ್ಡು ಸ್ಥಾಪಿಸಬಹುದು. ಒಂದು ಕಂಪ್ಯೂಟರ್, ಮೋಡೆಮ್ ಮತ್ತು ಟೆಲಿಫೋನ್ ಇದ್ದವರು ಬುಲೆಟಿನ್ ಬೋರ್ಡ್ ಸಂಪರ್ಕಿಸಿ ಕ್ರಿಕೆಟ್ ಬಗ್ಗೆ ಮಾಹಿತಿ ಪಡೆಯಬಹುದು. ಜಾಹೀರಾತು ಹಾಕಬಹುದು. ಕ್ರಿಕೆಟ್ ಬಗ್ಗೆ ಚರ್ಚೆ ನಡೆಸಬಹುದು. ಈ ಸೌಲಭ್ಯಕ್ಕೆ ತಕ್ಕ ನಿಯಮಗಳನ್ನು ರಚಿಸಬಹುದು ಮತ್ತು ಅದಕ್ಕಾಗಿ ಫೀ ನಿರ್ಧರಿಸಬಹುದು. ನನ್ನ ಮಗ ವಿಜಯ (೧೬ ವರ್ಷ) ಹಲವಾರು ಬುಲೆಟಿನ್ ಬೋರ್ಡುಗಳಿಗೆ ಸದಸ್ಯನಾಗಿದ್ದಾನೆ. ಈ ಎಲ್ಲಾ ಬೋರ್ಡುಗಳು ವಿಶೇಷ ಕ್ರಿಯೆಗಳಿಗೆ ಮಾತ್ರ ಮೀಸಲಾಗಿವೆ. ಮತ್ತು ಸದಸ್ಯತ್ವವೂ ಕಂಪ್ಯೂಟರ್ ಕ್ರೀಡೆಗಳಲ್ಲಿ ಆಸಕ್ತರಿಗೆ ಮೀಸಲಾಗಿರುತ್ತದೆ. ಸದಸ್ಯರು ಹೊಸ ಆಟಗಳ ಬಗ್ಗೆ ತಿಳಿದುಕೊಳ್ಳುತ್ತಾರೆ. ಆಟದ ಸಮಸ್ಯೆಗಳನ್ನು ತೀರ್ಮಾನಿಸಿಕೊಳ್ಳುತ್ತಾರೆ ಮತ್ತು ಬೇರೆ ಬೇರೆ ಆಟಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಒಂದು ಡಿಸ್ಕೆಟ್ ಮೂಲಕ ಆಟವನ್ನು ಕಲಿಸುವ ಬದಲಾಗಿ ಮೋಡೆಮ್ ಮೂಲಕ ಆಟವನ್ನು ತಿಳಿಸುತ್ತಾರೆ. ಈ ಅನುಕೂಲದಿಂದ ಆಟಗಳನ್ನು ಕೊಳ್ಳುವ (ಪ್ರತಿ ಆಟದ ಬೆಲೆ ೧೦೦ ಡಾಲರ್) ಬದಲು ವಿನಿಮಯ ಮಾಡಿಕೊಳ್ಳುತ್ತಾರೆ ಮತ್ತು ಹೆಚ್ಚು ಆಟಗಳನ್ನು ಆಡುತ್ತಾರೆ.

## ಈ ಮಾಹಿತಿಯ ರಾಜಮಾರ್ಗದಲ್ಲಿ ಯಾರು ಸವಾರಿ ಮಾಡಬಹುದು?

ನಿಮ್ಮಲ್ಲೊಂದು ಕಂಪ್ಯೂಟರ್, ಮೋಡೆಮ್, ಮಾನಿಟರ್ ಮತ್ತು ಟೆಲಿಫೋನ್ ಇದ್ದರೆ ಅಮೇರಿಕೆಯಲ್ಲಿ ಸದ್ಯ ಬರಲಿರುವ ಮಾಹಿತಿಯ ರಾಜಮಾರ್ಗದಲ್ಲಿ ಸವಾರಿ ಮಾಡಬಹುದು. ನಿಮ್ಮ ನಿಮ್ಮ ಬಳಕೆಯ ಪ್ರಮಾಣ ನಿಮ್ಮ ವ್ಯವಹಾರದ ಸ್ವರೂಪದ ಮೇಲೆ ನೀವು ಹಾಕಬೇಕಾದ ಬಂಡವಾಳ ಮತ್ತು ವಾರ್ಷಿಕ ವೆಚ್ಚ ನಿರ್ಭರವಾಗುತ್ತವೆ.

ಸದ್ಯ ಭಾರತದಲ್ಲಿ ಒಂದು ಸಾಧಾರಣ ಕಂಪ್ಯೂಟರ್ (ಎಟಿ ೨೮೬ ೪ ಮೆಗಾ ರಾಮ್ ಮತ್ತು ಸಾಕಷ್ಟು ಹಾರ್ಡ್ ಡಿಸ್ಕ್ ಮೆಮೊರಿ) ಬೆಲೆ ರೂ. ೩೮,೦೦೦. ಟೆಲಿಫೋನ್ ಸಂಪರ್ಕ ವೆಚ್ಚ ವಾರ್ಷಿಕ ರೂ. ೩೦೦ ಆದೀತು. ಭಾರತದಲ್ಲಿ ಅನೇಕ ಕಂಪನಿಗಳು ಎಲೆಕ್ಟ್ರಾನಿಕ್ ಅಂಚೆ ಸೇವೆ ನೀಡುತ್ತವೆ. ಅವರು ನೀಡುವ ಸೇವೆ ಮತ್ತು ದರಗಳು ಭಿನ್ನವಾಗಿವೆ. ಇಂಡಿಯಾ ಅನ್‌ಲೈನ್ ರೂ. ೫೦೦೦ ವಾರ್ಷಿಕ ಚಂದಾ ಮತ್ತು ರೂ. ೫೦೦೦ ಸೇವೆಗೆ ಮುಂಗಡ ಎಂದು ತೆಗೆದುಕೊಳ್ಳುತ್ತದೆ. ಈ ಸಂಪರ್ಕ ಜಾಲದಲ್ಲಿ ಭಾಗಿಯಾಗುವವರು ಹೆಚ್ಚಿನ ವಿದ್ಯುತ್ ಬಿಲ್ಲು, ಟೆಲಿಫೋನ್ ಬಿಲ್ಲು ಕೊಡಲು ಸಿದ್ಧರಿರಬೇಕು. ಅದರ ಜೊತೆಗೆ

ನಿಮ್ಮ ಕಂಪ್ಯೂಟರನ್ನು ಧೂಳು, ಬಿಸಿ ಮತ್ತು ತಾಪದಿಂದ ಕಾಪಾಡಬೇಕಾದರೆ ಹವಾ ನಿಯಂತ್ರಣ ವ್ಯವಸ್ಥೆ ಇರಬೇಕು. ವಿದ್ಯುತ್ ನಿಲುಗಡೆ ಮತ್ತು ವೋಲ್ಟೇಜ್‌ನ ಹೆಚ್ಚು ಕಡಿಮೆಯಿಂದ ಕಂಪ್ಯೂಟರ್‌ಗೆ ಅಥವಾ ಅದರ ಹಾರ್ಡ್ ಡಿಸ್ಕ್‌ಗೆ ಏನಾದರೂ ಆದರೆ ಭಾರೀ ವೆಚ್ಚ ಭರಿಸಬೇಕಾಗುವುದು. ಈ ಎಲ್ಲ ಆತಂಕಗಳನ್ನು ಗಮನಿಸಿದರೆ ಭಾರತದಲ್ಲಿ ಕಾರ್ಪೊರೇಶನ್‌ಗಳು, ಸರಕಾರಿ ಕಛೇರಿಗಳು, ವಿಶ್ವವಿದ್ಯಾಲಯಗಳು ಮತ್ತು ಕೆಲ ಶ್ರೀಮಂತರು ಮಾತ್ರ ಈ ಮಾಹಿತಿಯ ರಾಜಮಾರ್ಗದಲ್ಲಿ ಸವಾರಿ ಮಾಡಬಹುದು. ಅಮೇರಿಕೆಯಲ್ಲಿ ಕೂಡ ಎಲ್ಲ ಸಂಪರ್ಕಜಾಲಗಳು ಏಕತ್ರವಾದ ಮೇಲೆ ದೊರೆಯಬಹುದಾದದ್ದು ಮನೋರಂಜನೆ ಮತ್ತು ವ್ಯಾಪಾರ ಎಂದು ಈ ನಿಗಮಗಳು ಹೇಳುತ್ತವೆ. ಕೇಬಲ್ ಕಂಪನಿಗಳು ಸೂಕ್ತ ದರದಲ್ಲಿ ಮನೆಗಳಿಗೆ ೫೦೦ ಟಿ.ವಿ. ಚಾನೆಲ್‌ನ ಭರವಸೆ ನೀಡುತ್ತಿವೆ.

ನೀವು ಟಿ.ವಿ. ಕಾರ್ಯಕ್ರಮಗಳನ್ನು ನೋಡಿ ಮನರಂಜನೆ ಪಡೆಯುವುದರ ಜೊತೆಗೆ ಕೆಲ ಸಂಬಂಧಿತ ವಸ್ತುಗಳನ್ನು ಖರೀದಿಸಬಹುದು. ಉದಾಹರಣೆಗೆ ಡಿಸ್ನಿಯವರ 'ದಿ ಲಯನ್ ಕಿಂಗ್' ಚಿತ್ರವನ್ನು ಡಿಸ್ನಿ ಚಾನೆಲ್‌ನಲ್ಲೂ ನೋಡುತ್ತಾ ಅದರ ವಿಡಿಯೋ ಟೇಪ್, ಪುಸ್ತಕ, ಸಂಗೀತದ ಟೇಪ್, ಟೀಷರ್ಟ್, ಪೋಸ್ಟರ್ಸ್, ಆಟಿಗೆ ಸಾಮಾನು, ವಿಡಿಯೋ ಆಟ ಇತ್ಯಾದಿಗಳನ್ನು ಖರೀದಿಸಬಹುದು. ಇನ್ನೊಂದು ಸಾಧ್ಯತೆಯೆಂದರೆ ನಿಮಗೆ ಬೇಕಾದ ವಿಡಿಯೋ ನೋಡುವುದು. ವಾರ್ನರ್ ಕಮ್ಯುನಿಕೇಷನ್ಸ್ ಸಂಸ್ಥೆಯಲ್ಲಿ ವಾರ್ನರ್ ಚಿತ್ರಗಳ ಮತ್ತು ಟಿ.ವಿ. ಕಾರ್ಯಕ್ರಮಗಳ ಅಗಾಧ ಸಂಗ್ರಹವಿದೆ. ನಿಮಗೆ ಬೇಕೆನಿಸಿದರೆ ಅವರ ಕ್ಯಾಟಲಾಗ್‌ನಿಂದ ೧೯೩೫ರಲ್ಲಿ ತಯಾರಾದ ಒಂದು ಚಿತ್ರವನ್ನು ಆರಿಸಿ ಕೆಲ ಗುಂಡಿಗಳನ್ನು ಒತ್ತುವುದರಿಂದ ಆ ಚಿತ್ರವನ್ನು ನೋಡಬಹುದು. ನೀವು ಇದಕ್ಕೆ ವಿಶೇಷ ಹಣ ನೀಡಬೇಕಾಗಬಹುದು. ಆದರೆ ನಿಮಗೆ ಬೇಕಾದದ್ದು ನಿಮ್ಮ ಬೆಚ್ಚನೆಯ ಮನೆಯಲ್ಲಿಯೇ ಸಿಗುತ್ತದೆ. ಸದ್ಯಕ್ಕೆ ಈ ಸೌಲಭ್ಯಗಳು ಸಿಗಬಹುದು. ಆಪ್ಟಿಕ್ ಫೈಬರ್ ವಾಹಕಗಳು, ಕಂಪ್ಯೂಟರ್, ವಿಸ್ತಾರವಾದ ಮಾರುಕಟ್ಟೆ ವ್ಯವಸ್ಥೆ ಮತ್ತು ದೊಡ್ಡ ಆಸಕ್ತ ಸಮುದಾಯವನ್ನು ಉಪಯೋಗಿಸಿ ಹಾಲಿವುಡ್‌ನವರು ಅಗಾಧ ಲಾಭಗಳಿಸುವ ಸಾಧ್ಯತೆಗಳಿವೆ.

## ವಿಷಯಗಳು ಮತ್ತು ಸಮಸ್ಯೆಗಳು

ಒಟ್ಟಿನಲ್ಲಿ ಈ ಮಾಹಿತಿಯ ರಾಜಮಾರ್ಗವು ಜನರ ಹೃದಯಗಳಿಗೆ, ಮನಸ್ಸುಗಳಿಗೆ, ಮತ್ತವರ ಜೇಬುಗಳಿಗೆ ವಿಲಾಸದ ಸೂತ್ರವಾಗಲಿದೆ. ಪ್ರಪಂಚದ ಸುತ್ತಮುತ್ತ ಶ್ರೀಮಂತರು ಮಾತ್ರ ಈ ವಿಲಾಸೀ ರಾಜಮಾರ್ಗದಲ್ಲಿ ಸವಾರಿ ಮಾಡುತ್ತಾರೆ. ದೊಡ್ಡ ನಿಗಮಗಳು ಮತ್ತು ಅವರ ಬೆನ್ನಿಗಿರುವ ಪಶ್ಚಿಮದ ಸರಕಾರಗಳು ಈ ಸಂಪರ್ಕ ಜಾಲವನ್ನು ಜಗತ್ತಿನಲ್ಲಿ ಎಲ್ಲ ಕಡೆ ಹರಡುವ ಹುನ್ನಾರದಲ್ಲಿವೆ. ಈ ಶೋಷಕರ ಪ್ರಪಂಚದಲ್ಲಿ ಬಲ್ಲವರ ಮತ್ತು ಬಲ್ಲಿದರ ಕೈಯಲ್ಲಿ ಈ ದುಬಾರಿ ತಂತ್ರಜ್ಞಾನವು ಒಂದು ಹೊಸ ಆಯುಧವೆಂಬುದನ್ನು ಗಮನಿಸಬೇಕು. ಭಾರತೀಯ ಕಂಪನಿಗಳ ಮತ್ತು ವಿದೇಶೀ ಕಂಪನಿಗಳ ನಡುವೆ ವಿದ್ಯುತ್ ಉತ್ಪಾದನೆಗಾಗಲಿ ಉಪಗ್ರಹ ಟಿವಿಗಾಗಲಿ ಆಗುವ ಒಪ್ಪಂದಗಳಂತೆಯೇ ಈ ವ್ಯಾಪಾರವನ್ನೂ ಪರಿಗಣಿಸಬಹುದು. ಎಟಿ ಮತ್ತು ಟಿ., ವಾರ್ನರ್ ಕಮ್ಯುನಿಕೇಶನ್ಸ್, ರೂಪರ್ಟ ಮರ್ಡೋಕ್‌ರ ನಿವ್ಸ್ ಕಾರ್ಪೊರೇಶನ್ ಸಂಸ್ಥೆಗಳು ಭಾರತದ ಅಂತರ್ಯಕ್ಕೆ ತಾಂತ್ರಿಕವಾಗಿ ಮತ್ತು ಬೌದ್ಧಿಕವಾಗಿ ದಾಳಿ ನಡೆಸಿವೆ.

ಮನುಕುಲದ ಅಭಿವೃದ್ಧಿಗೆ ತೊಂದರೆಯಾಗಿರುವುದು ಸಂಪನ್ಮೂಲಗಳ ಕೊರತೆಯಿಂದಲ್ಲ, ಆದರೆ ಸಂಪನ್ಮೂಲಗಳ ಸಮಾನ ವಿತರಣೆಯ ಅಭಾವದಿಂದ. ಔದ್ಯೋಗಿಕವಾಗಿ ಮುಂದುವರೆದ ಮತ್ತು ರಾಜಕೀಯವಾಗಿ ಬಲಿಷ್ಠವಾದ ಉತ್ತರದ ದೇಶಗಳಿಗೂ ದಕ್ಷಿಣದ ದೇಶಗಳಿಗೂ ನಡುವೆ ಅಗಾಧ ಕಂದಕಗಳಿವೆ. ಕೊಂಚ ಪರಿಶೀಲಿಸಿದರೆ ಉತ್ತರದಲ್ಲಿಯೂ ನಿರುದ್ಯೋಗ, ಅರ್ಧ ಉದ್ಯೋಗ ಮತ್ತು ಬಡತನ ದಿನೇ ದಿನೇ ಹೆಚ್ಚುತ್ತಿದೆ. ದಕ್ಷಿಣದಲ್ಲಿಯೂ ಅಗಾಧ ಜನಸಂಖ್ಯೆಯು ನಿಕೃಷ್ಟ ಬಡತನದಲ್ಲಿದೆ. ಈಗ ದೊಡ್ಡ ದೊಡ್ಡ ಲಾಭಕೋರ ಕಂಪನಿಗಳು ಹಂಚಿಕೆ ಹಾಕಿದಂತೆ ಸಾಧ್ಯವಾಗುವ ಮಾಹಿತಿಯ ರಾಜಮಾರ್ಗದಿಂದ ಬೆಳೆಯುತ್ತಿರುವ ಬಡತನವ

ನ್ನಾಗಲಿ ಹೆಚ್ಚುತ್ತಿರುವ ಅಸಮಾನತೆಯನ್ನಾಗಲಿ ಸುಧಾರಿಸಲು ಸಾಧ್ಯವಿಲ್ಲ. ವಾಸ್ತವಿಕವಾಗಿ ಈ ಕಂದರಗಳು ಹೆಚ್ಚುತ್ತವೆ. ಪರಿಣಾಮವಾಗಿ ಅನೇಕ ಕೋಟ್ಯಂತರ ಜನ ಮಾಹಿತಿಯೇ ಇಲ್ಲದ ಬಡವ ರಾಗುತ್ತಾರೆ.

ರಾಷ್ಟ್ರೀಯ ಸರಕಾರಗಳು ಇಂತಹ ಸಂಪರ್ಕ ಜಾಲಗಳನ್ನು ನಿರ್ಮಿಸುವ ನಿರ್ಧಾರ ಮಾಡುವ ಮೊದಲು ಎರಡು ಮೂಲಭೂತ ವಿಷಯಗಳ ಬಗ್ಗೆ ಚಿಂತಿಸಬೇಕು. ಮೊದಲನೆಯದಾಗಿ ನಮ್ಮ ಗಡಿಗಳಿಂದ ಆಚೆ ಈಚೆ ಪ್ರವಹಿಸುವ ಮಾಹಿತಿಯ ನಿಯಂತ್ರಣ. ಎರಡನೆಯದು ವೈಯಕ್ತಿಕ ರಹಸ್ಯ. ಈ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸೋಣ.

ಅಗಾಧವಾದ ಮಾಹಿತಿಯನ್ನು ಸಂಗ್ರಹಿಸಿ ಎಲ್ಲ ಗಡಿಗಳಿಂದಾಚೆ ಮಾಹಿತಿ ಕಳಿಸಲು ಶಕ್ತವಾದ ಕಂಪ್ಯೂಟರುಗಳಿಂದ ಕ್ಲಿಷ್ಟ ರಾಜಕೀಯ ಸಮಸ್ಯೆ ಗಳು ಸೃಷ್ಟಿಯಾಗುತ್ತವೆ. ಆರ್ಥಿಕ ವಿಷಯಗಳ ಬಗ್ಗೆ ಸಂಗ್ರಹಿಸಿದ ಮಾಹಿತಿಯನ್ನು ಸರಕಾರಗಳು ಸೈನಿಕ ಮತ್ತು ಆರ್ಥಿಕ ಸಹಾಯದ ವಿಷಯದಲ್ಲಿ ಉಪ ಯೋಗಿಸಬಹುದಾಗಿದೆ. ೧೯೭೯ರಲ್ಲಿ ಇರಾನಿನ ಷಾ ಅವರನ್ನು ಕ್ರಾಂತಿಕಾರಿಗಳು ಆಯಾತುಲ್ಲಾ ಖೋಮೇನಿಯವರ ನೇತೃತ್ವದಲ್ಲಿ ಪದಭ್ರಷ್ಟರನ್ನಾಗಿ ಮಾಡಿದರು. ಪ್ರೆಸಿಡೆಂಟ್ ಕಾರ್ಟರ್ ಆಗ ಅಮೇ ರಿಕೆಯ ಬ್ಯಾಂಕುಗಳಲ್ಲಿ ಮತ್ತು ಅವುಗಳ ಪ್ರಪಂ ಚದಾದ್ಯಂತದ ಶಾಖೆಗಳಲ್ಲಿದ್ದ ಇರಾನಿನ ಹಣ ಹಾಗೂ ಆಸ್ತಿಯನ್ನು ಜಪ್ತು ಮಾಡಿದರು.

ಎಲ್ಲಾ ಬ್ಯಾಂಕು ಲೆಕ್ಕಗಳು ಕಂಪ್ಯೂಟರೀಕರಣ ವಾಗಿದ್ದರಿಂದಲೂ ಅತ್ಯಂತ ವೇಗದಿಂದ ಎಲ್ಲ ಶಾಖೆಗಳಿಗೆ ಸುದ್ದಿ ತಲುಪಿಸಲು ಸಾಧ್ಯವಾದ್ದರಿಂ ದಲೂ ಅಧ್ಯಕ್ಷರ ಆಜ್ಞೆಯು ತಕ್ಷಣ ಜಾರಿಗೆ ಬಂದು ಇರಾಣೀಯರು ಎಲ್ಲೂ ತಮ್ಮ ಹಣ ತೆಗೆಯಲು ಸಾಧ್ಯವಾಗಲಿಲ್ಲ. ಇದಕ್ಕಿಂತ ಇಕ್ಕಟ್ಟಿನ ಪ್ರಸಂಗ ಟೆಲಿಫೋನಿನಿಂದಾಗಬಹುದು. ವಿದೇಶೀ ಕಂಪನಿ ಗಳು ನಿಮ್ಮ ದೂರವಾಣಿ ಜಾಲವನ್ನು ನಿರ್ವಹಿ ಸುತ್ತಿದ್ದರೆ ರಾಷ್ಟ್ರೀಯ ಭದ್ರತೆಗೆ ಸುಲಭವಾಗಿ ಧಕ್ಕೆ ಬರಬಹುದು. ಮುಂದುವರಿದ ಅರ್ಥವ್ಯವಸ್ಥೆಯಲ್ಲಿ ದೂರವಾಣಿಯೇ ಸಂಪರ್ಕದ ಕೇಂದ್ರ. ಇಂತಹ ಸಂಪರ್ಕ ಜಾಲದ ಹತೋಟಿಯು ವಿದೇಶೀಯರ




ಕೈಯಲ್ಲಿದ್ದರೆ ಯಾವ ಕ್ಷಣದಲ್ಲಾದರೂ ನಿಮ್ಮ ದೇಶದ ವ್ಯಾಪಾರ, ಅರ್ಥವ್ಯವಸ್ಥೆಗೆ ಧಕ್ಕೆ ಒದಗು ವಂತೆ ಕೆಲಕಾಲ ಇಡೀ ಸಂಪರ್ಕ ವ್ಯವಸ್ಥೆಯನ್ನೇ ನಿಲ್ಲಿಸಬಹುದು. ಉದಾಹರಣೆಗೆ ೧೯೭೦ರಲ್ಲಿ ಚಿಲಿ ದೇಶದಲ್ಲಿ ಸಮಾಜವಾದಿ ನಾಯಕ ಅಲೆಂಡೆ ಅಧಿಕಾರಕ್ಕೆ ಬಂದರು. ಆ ದೇಶದಲ್ಲಿ ಟೆಲಿಫೋನ್ ವ್ಯವಸ್ಥೆಯು ವಿದೇಶೀ ಕಂಪನಿಯಾದ IT ಮತ್ತು T ಅವರ ಕೈಯಲ್ಲಿತ್ತು. ಅಲೆಂಡೆ ಅವರು ಈ ಕಂಪನಿಯ ವ್ಯವಹಾರವನ್ನು ಮೊಟಕುಗೊಳಿಸಿ ಟೆಲಿಫೋನ್ ವ್ಯವಸ್ಥೆಯನ್ನು ಸ್ವದೇಶೀಕರಣ ಮಾಡಲು ಯೋಚಿಸಿದರು. ಇದರಿಂದ ಅಮೇರಿ ಕೆಗೆ ಕೋಪ ಬಂದಿತಲ್ಲದೆ ಮುಂದಿನ ಮೂರು ವರುಷಗಳಲ್ಲಿ ಸಿಐಎ ಬೆಂಬಲದಿಂದ ರಕ್ತ ಕ್ರಾಂತಿಯ ಮೂಲಕ ಅಲೆಂಡೆ ಅಧಿಕಾರವನ್ನು ಅಂತ್ಯಗೊಳಿಸಲಾಯಿತು.

ದೂರವಾಣಿ ತಂತ್ರಜ್ಞಾನದಲ್ಲಿ ಆಗಿರುವ ಸಾಧ ನೆಗಳಿಂದ ಕೇಳುವ ವಿಧಾನಗಳು ತುಂಬಾ ಸುಧಾ ರಿಸಿವೆ. ಒಂದು ಕಟ್ಟಡದ ಇಪ್ಪತ್ತೈದನೆಯ ಅಂತ ಸ್ತಿನಲ್ಲಿ ನಡೆಯುತ್ತಿರುವ ಸಂಭಾಷಣೆಯನ್ನು ಕೆಳಗೆ



ಬೀದಿಯಲ್ಲಿ ನಿಲ್ಲಿಸಿದ ವಾಹನದಲ್ಲಿ ಕುಳಿತು ಕೇಳ ಬಹುದಾಗಿದೆ. ಇದಕ್ಕಾಗಿ ತಂತ್ರಜ್ಞಾನ ಸಿದ್ಧವಾಗಿದೆ. ಒಂದು ಸುಧಾರಿತ ಸಾಧನದ ಮೂಲಕ ಗಾಜಿನ ಕಿಟಕಿಗಳಿಗೆ ಬಡಿಯುತ್ತಿರುವ ಧ್ವನಿ ತರಂಗಗಳನ್ನು ಹಿಡಿಯುತ್ತಾರಷ್ಟೆ. ಇತ್ತೀಚೆಗೆ ಸಿಐಎದವರು ಅಮೇರಿಕದಲ್ಲಿ ಪ್ರತಿ ದೂರವಾಣಿ'ಯಲ್ಲಿ ಒಂದು ಮೈಕ್ರೋಚಿಪ್ ಹಾಕಲು ಯೋಚಿಸಿದ್ದರು. ಇದರಿಂದ ಅಮೇರಿಕೆಯ ಪ್ರತಿ ಮನೆ, ಅಂಗಡಿಯಲ್ಲೂ ಒಬ್ಬ ಬೇಹುಗಾರನಿರುತ್ತಿದ್ದ. ಆದರೆ ಈ ಸಲಹೆಗೆ ವಿಸ್ತೃತ ವಿರೋಧ ದೇಶದೆಲ್ಲಾ ಕಡೆಯಿಂದ ಬಂದ ಕಾರಣ ಈ ಸಲಹೆ ಕಡತದಲ್ಲಿಯೇ ಸಮಾಧಿಯಾಯಿತು. ಎಲ್ಲಾ ಸಂಪರ್ಕ ಸಾಧನಗಳ ಅಭಿವೃದ್ಧಿ ಮತ್ತು ಸುಧಾರಣೆಯಿಂದ ಮನೆ ಮನೆಯ ಗೌಪ್ಯಕ್ಕೆ ಧಕ್ಕೆಯಾಗಿದೆ. ಪಶ್ಚಿಮದಲ್ಲಿ ಟೆಲಿಫೋನ್ ಮೂಲಕ ಕಾಮಶಾಸ್ತ್ರದ ರಂಜನೆ ಪಡೆಯಬಹುದಾಗಿದೆ. ಇದಕ್ಕೆ 'ಫೋನ್ ಸೆಕ್ಸ್' ಎಂದು ಜಾಹೀರಾತು ಮಾಡಲಾಗುತ್ತಿದೆ. ಸುಂದರ ತರುಣ ತರುಣಿಯರು ಟಿ.ವಿ. ಮತ್ತು ರೇಡಿಯೋ ಜಾಹೀರಾತುಗಳ ಮೂಲಕ ಅವರಿಗೆ ಫೋನ್ ಮಾಡಲು ಪುಸಲಾಯಿಸುತ್ತಾರೆ. ಇದಕ್ಕೂ ಹಣ ತೆರಬೇಕು. ೧೯೮೦ರಲ್ಲಿ ಇಂತಹ ಸೇವೆಗಳು ಪ್ರಾರಂಭವಾದಾಗ ತಂದೆ ತಾಯಿಗಳಿಗೆ ತಿಳಿಯದಂತೆ ಮಕ್ಕಳು ಫೋನ್ ಮಾಡಿದರು. ಇದರಿಂದ ಹಿರಿಯರು ನೊಂದುಕೊಂಡರಲ್ಲದೇ ಹೊರಲಾರದ ಟೆಲಿಫೋನ್ ಬಿಲ್‌ತೆತ್ತರು. ಸದ್ಯ ಕಂಪ್ಯೂಟರ್ ಆಟಗಳಲ್ಲಿ ಲೈಂಗಿಕ ರೂಪಗಳನ್ನು ಕಾಣಬಹುದಾಗಿದೆ. ಈ ರೂಪಗಳನ್ನು ದೊಡ್ಡದು ಸಣ್ಣದು ಮಾಡಿ ಬೇರೆ ಬೇರೆ ತರಹದ ಸಂಯೋಜನೆಯನ್ನು ಮಾಡಬಹುದು. ಕೆಲವರಿಗೆ ವಿನೋದವೆನಿಸಿದರೆ ತಂದೆ ತಾಯಿಗಳಿಗೆ ಇದು ಅನೇಕ ಸಮಸ್ಯೆಗಳಿಗೆ ಕಾರಣವಾಗುತ್ತದೆ. ಯಾವ ವಯಸ್ಸಿನ ಮಕ್ಕಳಿಗೆ ಈ ಆಟಗಳು ಸರಿ? ಇಂತಹ ಆಟಗಳು ಅವಶ್ಯವೆ? ಮನೆಗಳಲ್ಲಿ ನಿರ್ಬಂಧಿಸಿದರೆ ಮಕ್ಕಳು ಹಿರಿಯರಿಗೆ ತಿಳಿಯದಂತೆ ಈ ಆಟಗಳನ್ನಾಡಲಾರರೆ? ಅರಿಯದ ಮಕ್ಕಳು ಕಳ್ಳತನದಿಂದ 'ಪ್ಲೇಬಾಯ್' ಅಥವಾ ಬೇರಾವುದೇ ಲೈಂಗಿಕ ವಿಷಯಗಳನ್ನು ಓದುವದಕ್ಕಿಂತ ಇದೇನೂ ಬೇರಲ್ಲ. ಆದರೆ ಕುಟುಂಬದಲ್ಲಿ ಇದರಿಂದ ಸಮಸ್ಯೆಗಳು ಹುಟ್ಟುತ್ತವೆ ಮತ್ತು ಹಿರಿಯರ ಮೌಲ್ಯಗಳು ಪ್ರಶ್ನಿಸಲ್ಪಡುತ್ತವೆ.

## ಸಮಾರೋಪ

ಬಂಡವಾಳಶಾಹಿ ಪದ್ಧತಿಯಲ್ಲಿ ಯಾವಾಗಲೂ ಬಿಕ್ಕಟ್ಟು ವ್ಯವಸ್ಥಿತವಾಗಿ ಉದ್ಭವಿಸುತ್ತಲೇ ಇರುತ್ತದೆ. ಈ ಬಿಕ್ಕಟ್ಟಿಗೆ ಉತ್ತರವೆಂದರೆ ಸಂಶೋಧನೆ. ಮಾರ್ಕ್ಸ್‌ನು ನೂರಾಐವತ್ತು ವರುಷಗಳ ಹಿಂದೆಯೇ ಇದನ್ನು ಗುರುತಿಸಿದ್ದ. ಕಳೆದ ಇಪ್ಪತ್ತು ವರುಷಗಳಿಂದ ಸಂಪರ್ಕ ಸಾಧನಗಳು ಸಾಕಷ್ಟು ಸುಧಾರಿಸಿವೆ. ಈಗ ಕಂಪ್ಯೂಟರ್ ಮತ್ತು ಸಂಪರ್ಕ ಸಾಧನಗಳು ಎಲ್ಲಾ ಸಂಶೋಧನೆಗಳನ್ನು ಬಳಸಿ ನಿರ್ಮಿಸಬಹುದಾದ ಬೃಹತ್ ಸಂಪರ್ಕಜಾಲದ ಕಲ್ಪನೆ ಪಶ್ಚಿಮದಲ್ಲಿ ಆವಿರ್ಭವಿಸಿದೆ. ಈ ಎಲ್ಲಾ ಜಾಲಗಳ ನಿರ್ಮಾಣಕ್ಕೆ ಕೋಟಿ ಕೋಟಿ ಡಾಲರುಗಳ ಅವಶ್ಯಕತೆ ಇದೆ. ಅಷ್ಟೊಂದು ಬಂಡವಾಳ ದೊರೆಯುವ ಸಾಧ್ಯತೆಗಳು ಕಾಣುತ್ತಿಲ್ಲ. ಅಮೇರಿಕೆಯಲ್ಲಿ ಸದ್ಯದ ಕನಸೇನೆಂದರೆ ಒಂದು ಮಹಾತಾಂತ್ರಿಕ ಸಂಪರ್ಕ ಜಾಲದ ಮೂಲಕ ಅಮೇರಿಕೆಯ ಪ್ರತಿ ಮನೆ, ಕಛೇರಿ, ಗ್ರಂಥಾಲಯ, ಶಾಲೆಗಳನ್ನು ತಲುಪುವುದು. ಅದಕ್ಕೆ ರಾಜಮಾರ್ಗ ಎಂಬ ಹೆಸರು. ಆದರೆ ಈ ರಾಜಮಾರ್ಗದಲ್ಲಿ

ಪರ್ಯಟಿಸಲು ನೀಡಬೇಕಾದ ಸುಂಕದ ಬಗ್ಗೆ ಯಾರೂ ಚಿಂತಿಸುತ್ತಿಲ್ಲ. ಸಮಾನತೆ, ಸಮತೂಕ, ಸಮಭಾಗ ಮತ್ತು ಸಾರ್ವಜನಿಕ ಒಳಿತಿಗಾಗಿ ಸಂಪರ್ಕ ಎಂಬ ತತ್ವಗಳನ್ನು ಮೂಟೆಕಟ್ಟಿ ನಾಗೊಂದಿಗೆ ಕಳಿಸಲಾಗಿದೆ. ಆದರೆ ಈ ರಾಜ ಮಾರ್ಗದ ಬಗ್ಗೆ ಸಮೂಹ ಮಾಧ್ಯಮಗಳಲ್ಲಿ ನಿತ್ಯ ಕಾಣಬರುವುದು, ಕೇಳುವುದು ಶುದ್ಧ ಪ್ರಚಾರ ಮಾತ್ರ. ಈ ರಾಜಮಾರ್ಗದ ನಿರ್ಮಾಣಕ್ಕೆ ತಗ ಲುವ ವೆಚ್ಚವೇನು? ಯಾರಿಗಾಗಿ ಈ ಎಲ್ಲ ಖಜೀತಿ? ಈ ಪ್ರಶ್ನೆಗಳಿಗೆ ಉತ್ತರವೇ ಇಲ್ಲ. ಈ ಹೊಸ ವ್ಯವಸ್ಥೆಯಿಂದ ಮತ, ಅಂತಸ್ತು, ಬಣ್ಣ, ದೇಶ, ಲಿಂಗ ಭೇದವಿಲ್ಲದೆ ಎಲ್ಲರೂ ಲಾಭ ಪಡೆಯುವಂತಾಗಬೇಕು. "ಆದರೆ ಈ ಪ್ರಪಂಚ ದಲ್ಲಿ ಅನುಕೂಲಗಳು ಎಲ್ಲರಿಗೂ ಸಮಾನವಾಗಿ ಸಿಗುವುದಿಲ್ಲ. ಎಲ್ಲರೂ ಹೇಳುವುದೊಂದು, ಮಾಡುವುದೊಂದು. ಸದ್ಯದ ವ್ಯವಸ್ಥೆಯಲ್ಲಿ ಅಸ ಮಾನತೆ ತಾನೇ ತಾನಾಗಿ ಪ್ರತಿಫಲಿತವಾಗುತ್ತದೆ," ಎಂದು ಎಲ್ಲ ಬಲ್ಲ ನಾಗರಿಕರಿಗೆ ಗೊತ್ತು. ನಿಜವೇನೆಂದರೆ ಕೊಳ್ಳಬಲ್ಲವನು ಪ್ರಪಂಚದಲ್ಲಿ ಎಲ್ಲೇ ಇರಲಿ, ಈ ಶತಮಾನದ ಅಂತ್ಯದ ವೇಳೆಗೆ ಈ ರಾಜಮಾರ್ಗದ ಅನೇಕ ಮುಖ್ಯ ಉಪಯೋ ಗಗಳನ್ನು ಪಡೆಯಬಲ್ಲ.

ಭಾರತವೀಗ ಸಂಪರ್ಕ ವ್ಯವಸ್ಥೆಯನ್ನು ಖಾಸ ಗೀಕರಣ ಮಾಡುವ ಕಡೆ ಧಾವಿಸುತ್ತಿದೆ. ಇಲ್ಲಿರುವ ಭ್ರಷ್ಟಾಚಾರ, ಆರ್ಥಿಕ ವ್ಯವಸ್ಥೆಯ ಕೊಳಕುತನ ಮತ್ತು ಸರಕಾರದ ಅನೇಕ ಮುಖ್ಯ ಪತನಗಳಿಗೆ ತಾಂತ್ರಿಕ ನಿವಾರಣೆಗಳು ಲಭ್ಯವಿಲ್ಲ. ಈಗ ಯೋಚಿಸಿರುವಂತೆಯೇ ನಡೆದರೆ ಮುಂಬರುವ ಶತಮಾನದಲ್ಲಿ ಈ ದೇಶದ ನೂರು ಕೋಟಿ ಜನರಲ್ಲಿ ದೊಡ್ಡ ಸಂಖ್ಯೆಯ ಜನ ಎತ್ತಿನ ಗಾಡಿ ಗಳಲ್ಲಿಯೇ ಉಳಿಯುತ್ತಾರೆ. ಕೇವಲ ಕೆಲವೇ ವರ್ಗದ ಜನರು ಮಾಹಿತಿಯ ರಾಜಮಾರ್ಗದ ವೇಗ, ಆನಂದ ಮತ್ತು ಅನುಕೂಲಗಳನ್ನು ಪಡೆ ಯುತ್ತಾರೆ. ಆಪ್ಟಿಕಲ್ ಫೈಬರ್ ತಂತ್ರಜ್ಞಾನದಿಂದ ಕೆಲ ವರ್ಗದ ಜನ ಲಾಭಕೋರತನ, ಅತಿ ಆಸೆ, ಸ್ವಂತ ಸುಖದ ಲೋಲುಪತೆಯಲ್ಲಿ ಮುಳುಗಿದರೆ ಈ ನಾಡಿನ ಈ ಸಮಾಜದ ರಾಷ್ಟ್ರೀಯವಾದ ಅನನ್ಯಭಾವಕ್ಕೆ ಧಕ್ಕೆಯೊದಗಬಹುದಾಗಿದೆ.

ಹಾವು ನಾಲಿಗೆಯಿಂದ ಹಾಲನ್ನು ಕುಡಿಯುವಂತೆಯೇ ಶಬ್ದ ತರಂಗಗಳನ್ನೂ ಗ್ರಹಿಸಬಲ್ಲದು. ಅದಕ್ಕೆ ಕಿವಿಯಿಲ್ಲ.

ನೀರ್ಗುದುರೆಯೆಂದರೆ ನೀರ್ಗುದುರೆಯೆ. ನೀರಿನಲ್ಲಿ ಅದು ವೇಗವಾಗಿ ಓಡಬಲ್ಲದು; ನೆಲದ ಮೇಲಲ್ಲ.

ಗರುಡದ ದೃಷ್ಟಿ ತುಂಬಾ ಸೂಕ್ಷ್ಮ ಮೇಲೆ ಆಕಾಶದಲ್ಲಿ ಎರಡು ಮೈಲಿನಷ್ಟು ದೂರದಿಂದಲೇ ನೆಲದ ಮೇಲೆ ಓಡಾಡುತ್ತಿರುವ ಚಿಕ್ಕನ್ನದು ಗಮನಿಸಬಲ್ಲದು.

ಹದಿನೆಂಟನೆಯ ಶತಮಾನದಲ್ಲಿ ತುರ್ಕಸ್ತಾನವನ್ನಾಳಿದ ಮುಸ್ತಾಫಾ ದೊರೆಗೆ ಹೇಗಾದರೂ ಮಾಡಿ ಹೆಣ್ಣು ಮಗುವನ್ನು ಪಡೆಯುವ ಆಶೆ. ಆತ ಹಲವಾರು ಮದುವೆಗಳಿಂದ ೫೮೨ ಮಕ್ಕಳನ್ನು ಪಡೆದರೂ ಒಂದೂ ಗಂಡು ಮಗುವಾಗಲಿಲ್ಲ. ಕೊನೆಗೆ ಬೇಸತ್ತು ಹೆಣ್ಣು ಮಗುವನ್ನು ಪಡೆಯುವ ರಾಣಿಗೆ ಪಟ್ಟಮಹಿಷಿಯ ಸ್ಥಾನವನ್ನು ಕೊಡುವುದಾಗಿ ಘೋಷಿಸಿದ. ನೂರಾರು ರಾಣಿಯರಲ್ಲಿ ಒಬ್ಬಳಿಗೂ ಪಟ್ಟಮಹಿಷಿಯ ಸ್ಥಾನವನ್ನು ಪಡೆಯಲಾಗಲಿಲ್ಲ.

'ಇಂಟರ್ ನೆಟ್'ನ ದುರುಪಯೋಗ

# ಕಂಪ್ಯೂಟರ್ ಬಳಸಿ ಕೋಟ್ಯಂತರ ಕದ್ದ!

• ನಿವೇದಿತಾ ದೇಸಾಯಿ

ಕಂಪ್ಯೂಟರನ್ನು ಕದ್ದರೇನೇ ಅದೊಂದು ಸುದ್ದಿ. ಏಕೆಂದರೆ ಅದೇ ಲಕ್ಷಾಂತರ ರೂಪಾಯಿ ಬೆಲೆ ಬಾಳುವಂಥದ್ದು. ಆದರೆ ಕಂಪ್ಯೂಟರನ್ನು ಬಳಸಿ ಕೋಟ್ಯಂತರ ಡಾಲರುಗಳನ್ನು ಕದ್ದರೆ? ಅದಂತೂ ಎಲ್ಲಿಲ್ಲದ ಸುದ್ದಿ!

ಈಗ ಜಗತ್ತನ್ನು ಕಿರಿದಾಗಿಸಿ ಬಹುತೇಕ ರಾಷ್ಟ್ರಗಳನ್ನು ಏಕ ಸಂಪರ್ಕಜಾಲದಲ್ಲಿ ಬಂಧಿಸುತ್ತಿರುವ 'ಇಂಟರ್‌ನೆಟ್'ನಂಥ ಅಂತಾರಾಷ್ಟ್ರೀಯ ಸಂಪರ್ಕ ವ್ಯವಸ್ಥೆಯ ಇನ್ನೊಂದು ಮುಖ ಇಲ್ಲಿದೆ. ಇದನ್ನು 'ಕರಾಳ ಮುಖ' ಎನ್ನದೇ ವಿಧಿಯಿಲ್ಲ.

ಮೊನ್ನೆ ಮೊನ್ನೆ ಸಪ್ಟಂಬರ್ ತಿಂಗಳಲ್ಲಿ ರಶಿಯದ ಸಿಟಿ ಬ್ಯಾಂಕ್‌ನಲ್ಲಿ ದಿಗಿಲು ಹುಟ್ಟಿಸುವಂಥ 'ಹಣ ಎಗರಿಸುವ' ಪ್ರಕರಣವೊಂದು ಬೆಳಕಿಗೆ ಬಂತು. ಮುಂಬರುವ ಅಪರಾಧ ವಿಧಾನಗಳು ಯಾವ ಯಾವ ರೂಪ ಪಡೆಯಬಹುದು ಎಂಬುದಕ್ಕೆ ಈ ಪ್ರಕರಣ ಒಂದು ಮುನ್ಸೂಚನೆ ಅಷ್ಟೆ.

ಸೋವಿಯತ್ ಒಕ್ಕೂಟ ಪತನಾನಂತರದ ರಶಿಯ ಹಲವಾರು ಸಾವಿರ ಮೈಗಳ ಪ್ರೋಗ್ರಾಮರ್‌ಗಳ ಬೀಡಾಗಿ ಪರಿಣಮಿಸಿದೆ. ಇವರಲ್ಲಿ ಬಹ್ವಂಶ ಜನ ತಮ್ಮ ಪ್ರತಿಭೆಯನ್ನು ದುರುಪಯೋಗಪಡಿಸಿಕೊಂಡು ಜಗತ್ತಿನ ಅತಿದುಷ್ಟ ಅಪರಾಧಿಗಳ ತಂಡಗಳೊಂದಿಗೆ ಶಾಮೀಲಾಗುತ್ತಿದ್ದಾರೆ.

"ಈಗಷ್ಟೆ ಇದರ ಆರಂಭ" ಎಂದು ಅಭಿಪ್ರಾಯಪಡುತ್ತಾರೆ ಅಮೆರಿಕನ್ ವಿಶ್ವವಿದ್ಯಾಲಯದ (ವಾಶಿಂಗ್ಟನ್) 'ರಶಿಯನ್ ಸಂಘಟಿತ ಅಪರಾಧಿಜಾಲ' ವಿಷಯದ ತಜ್ಞ ಲೂಯಿಸ್ ಶೆಲ್ಲಿ.

ಸಿಟಿ ಬ್ಯಾಂಕ್ ಹಣ ಹಗರಣದ ಕುರಿತು, "ರಶಿಯನ್ನರು ತುಂಬ ನಿಪುಣರು, ಅದರಲ್ಲೂ ವಿಶೇಷವಾಗಿ ಇಂಥ ಕ್ಷೇತ್ರದಲ್ಲಿ ಕೆಲಸ ಮಾಡಲಂತೂ ನಿಷ್ಣಾತರು," ಎಂದು ಹೇಳಲು ಲೂಯಿಸ್ ಹಿಂದೆ ಮುಂದೆ ನೋಡುವುದಿಲ್ಲ.

ಈ ಬ್ಯಾಂಕಿನ ಕಂಪ್ಯೂಟರೀಕೃತ ನಗದು ನಿರ್ವಹಣಾ ವ್ಯವಸ್ಥೆಯಲ್ಲಿ ಪ್ರತಿನಿತ್ಯ ೫೦೦ ಕೋಟಿ (ಅರ್ಧ ಟ್ರಿಲಿಯನ್) ಡಾಲರ್‌ಗಳಷ್ಟು ವ್ಯವಹಾರ ನಡೆಯುತ್ತಿದೆ. ಅತ್ಯಂತ ಬಿಗಿಯಾದ ರಕ್ಷಣಾ ವ್ಯವಸ್ಥೆ ಅದರದು. ಇತ್ತೀಚಿನವರೆಗೂ ಇದನ್ನು ಭೇದಿಸಿ 'ಒಳನುಗ್ಗುವ' ಸಾಹಸವನ್ನು ಯಾರೂ ಮಾಡಿರಲಿಲ್ಲ.

ಆದರೆ ಸೆಂಟ್ ಪೀಟರ್ಸ್‌ಬರ್ಗ್‌ನ ಪೀಚಲು ಪೀಚಲಾದ ಕನ್ನಡಕಧಾರಿ ಯುವಕನೊಬ್ಬ ತನ್ನ ಪುಟ್ಟ ಕಂಪ್ಯೂಟರ್ ನೆರವಿನೊಂದಿಗೆ ಈ ದುಸ್ಸಾಹಸಕ್ಕೆ ಕೈ ಹಾಕಿಯೇಬಿಟ್ಟ.

ಕೇವಲ ಐದು ತಿಂಗಳು. ಇಷ್ಟು ಅಲ್ಪಾವಧಿಯಲ್ಲಿ ಹಲವಾರು ಬಾರಿ ಈ ಅನಾಮಧೇಯ ವ್ಯಕ್ತಿ ಸಿಟಿಬ್ಯಾಂಕ್ ಖಾತೆಗಳನ್ನು ಕಂಪ್ಯೂಟರ್ ಮೂಲಕ ತಿರುವಿಹಾಕಿದ. ಅಷ್ಟೇ ಅಲ್ಲ, ಗ್ರಾಹಕ ಗುಪ್ತ ಸಂಕೇತಗಳನ್ನು ಬಳಸಿ ಸುಮಾರು ಒಂದು

(ಆಧಾರ: 'ಅಸೋಸಿಯೇಟೆಡ್ ಪ್ರೆಸ್'ನ ಒಂದು ವರದಿ)

ಕೋಟಿ ಡಾಲರ್‌ಗಳಷ್ಟು ಮೊತ್ತವನ್ನು ವಿದೇಶಗಳಲ್ಲಿನ ಖಾತೆಗಳಿಗೆ ವರ್ಗಾಯಿಸಿದ.

ಹೀಗೆ ಹಣ ಎಗರಿಸಿದಾತ 'ಯಾರು' ಎಂಬುದರ ಅಂದಾಜು ಬ್ಯಾಂಕಿನ ಕಾನೂನು ಮತ್ತು ಸುವ್ಯವಸ್ಥೆಯ ಅಧಿಕಾರಿಗಳಿಗೆ ಇದೆಯಾದರೂ ಇದನ್ನು 'ಹೇಗೆ' ಮಾಡಲಾಯಿತೆಂಬ ಬಗ್ಗೆ ಅವರಿಗೆ ಇನ್ನೂ ಸ್ಪಷ್ಟವಾಗಿಲ್ಲ. ಸಿಟಿ ಬ್ಯಾಂಕ್ ಆಡಳಿತವರ್ಗ ಮಾತ್ರ ಈ ಬಗ್ಗೆ ಚಕಾರವೆತ್ತಿಲ್ಲ. ಮತ್ತೆ ಮತ್ತೆ ಅದು ಹೇಳುವುದೊಂದೇ ಮಾತು- "ಬ್ಯಾಂಕಿನ ಹಣ ವಿಭಾಗದ ಸುರಕ್ಷಾ ವ್ಯವಸ್ಥೆಯನ್ನು ಸಾಕಷ್ಟು ಬಿಗಿಗೊಳಿಸಲಾಗಿತ್ತು." ತನಿಖೆಯಲ್ಲಿ ತೊಡಗಿದವರ ಆಪ್ತ ವಲಯದ ಕೆಲವರು, "ಈ ಪ್ರಕರಣದ ಆರೋಪಿಗಳು ಖಂಡಿತ ರಶಿಯನ್ ಅಪರಾಧಿ ಜಾಲದವರಲ್ಲ. ಒಂದು ವೇಳೆ ಈ ಗುಂಪಿಗೆ ಸೇರಿದವರೇನಾದರೂ ಇದರಲ್ಲಿ ತೊಡಗಿದ್ದಿದ್ದರೆ ಪರಿಸ್ಥಿತಿಯೇ ಬೇರೆಯಾಗುತ್ತಿತ್ತು" ಎನ್ನುತ್ತಾರೆ.

ಅಭಿಮನ್ಯುವಿನ ಕಥೆ ಗೊತ್ತಲ್ಲ. ಚಕ್ರವ್ಯೂಹವನ್ನು ಭೇದಿಸಿಕೊಂಡು ಒಳಪ್ರವೇಶಿಸುವುದು ಮಾತ್ರ ಗೊತ್ತಿದ್ದ ಅವನಿಗೆ ಹೊರಬರುವ ವಿದ್ಯೆ ಬೋಧಿಸಲ್ಪಟ್ಟಿರಲಿಲ್ಲ. ಇಲ್ಲಿ, ಈ ಸಿಟಿಬ್ಯಾಂಕ್ ಪ್ರಕರಣದಲ್ಲಿನ ಅಪರಾಧಿಗಳನ್ನು ಅಭಿಮನ್ಯುವಿನಂಥ ಪರಾಕ್ರಮಿಗೆ ಹೋಲಿಸುವುದು ತಪ್ಪಾಗುತ್ತದಾದರೂ ಇವರ ಸ್ಥಿತಿಯೂ ಹಾಗೆಯೇ ಇತ್ತು ಎಂದು ಹೇಳುವುದಕ್ಕಾಗಿ ಮಾತ್ರ ಕುರುಕ್ಷೇತ್ರ ಪ್ರಸಂಗವನ್ನು ಉಲ್ಲೇಖಿಸಿದ್ದೇನೆ. ಈ ಜನಕ್ಕೆ 'ಸೈಬರ್‌ಸ್ಪೇಸ್' ಎಂದು ಕರೆಯಲ್ಪಡುವ ಕಂಪ್ಯೂಟರ್, ಮೋಡೆಮ್ ಮತ್ತು ಟೆಲಿಫೋನು ಸಂಪರ್ಕದ ಒಟ್ಟಾರೆ ವ್ಯವಸ್ಥೆಯ ಮೂಲಕ ಹಣವನ್ನು ವರ್ಗಾಯಿಸುವ ಪ್ರಾಥಮಿಕ ಜ್ಞಾನವಿತ್ತೇ ವಿನಾ ತದನಂತರ ವಿದೇಶೀ ಬ್ಯಾಂಕಿಗೆ ಹೋಗಿ ಅಲ್ಲಿನ ಖಾತೆಗಳಿಂದ ಆ ಹಣವನ್ನು ನಗದಾಗಿಸಿಕೊಳ್ಳುವ ಚಾತುರ್ಯ ಸಾಧಿಸಿರಲಿಲ್ಲ. ಅದಕ್ಕೆ ಪ್ರತ್ಯೇಕವಾದ ತರಬೇತಿಯೇ ಬೇಕಾಗುತ್ತದೆ. ಇಂಟರ್‌ನೆಟ್‌ನಂಥ ಸಂಪರ್ಕಜಾಲದ ಮೂಲಕ ಹೀಗೆ ಬೇರೆ ಬೇರೆ ದೇಶಗಳಲ್ಲಿ ಬ್ಯಾಂಕು ಖಾತೆ ಹೊಂದಿದವರಿಗೆ ವಿದ್ಯುನ್ಮಾನ ಮಾರ್ಗದ ಮೂಲಕ ಸಾಗಿಸಲ್ಪಟ್ಟ ಆ ಹಣವನ್ನು ನಗದಾಗಿಸಿಕೊಳ್ಳುವುದು ಹೇಗೆಂದು ತಿಳಿಸಲ್ಪಟ್ಟಿರುತ್ತದೆ. ಇದಕ್ಕಾಗಿ ಪ್ರತಿ ಸದಸ್ಯನಿಗೂ ಪ್ರತ್ಯೇಕ ಗುಪ್ತ ಸಂಕೇತಗಳು ನೀಡಲ್ಪಟ್ಟಿರುತ್ತವೆ.

ಸಿಟಿಬ್ಯಾಂಕು ಹಣಗಳ್ಳರಿಂದ ೪೦ ಲಕ್ಷ ಡಾಲರುಗಳನ್ನು ವಶಪಡಿಸಿಕೊಂಡಿತಲ್ಲದೆ, ಎಫ್‌ಬಿಐ ಮತ್ತು ರಶಿಯನ್ ಪೊಲೀಸರ ನೆರವಿನಿಂದ ಈ ಯುವ ಅಪರಾಧಿಯನ್ನೂ ಅವನ ಕೆಲ ಸಂಗಡಿಗರನ್ನೂ ಪತ್ತೆ ಮಾಡಿತು. ಇಂಥವರು ಇನ್ನೂ ಅನೇಕರಿದ್ದಾರೆ ಎಂದು ರಶಿಯನ್ ಪೊಲೀಸರ ಅಂಬೋಣ.

ಮಾಸ್ಕೋ ಹಾಗೂ ಜಗತ್ತಿನ ಇನ್ನಿತರೆಡೆಯ ಕಂಪ್ಯೂಟರ್ ತಜ್ಞರು ಸಿಟಿಬ್ಯಾಂಕಿನ ವ್ಯವಸ್ಥೆಯ ಚಕ್ರವ್ಯೂಹವನ್ನು ಭೇದಿಸಿಕೊಂಡು ಒಳಹೊಕ್ಕವ

**ಅತಿ ಶೀಘ್ರದಲ್ಲೇ ಈ ರಶಿಯನ್ 'ತಜ್ಞ'ರು ಅಂತಾರಾಷ್ಟ್ರೀಯ ಕಂಪ್ಯೂಟರ್ ಕಳ್ಳರ ಜಾಲದಲ್ಲಿ ಸೇರ್ಪಡೆಯಾಗುವುದರಲ್ಲಿ ಸಂಶಯವೇ ಇಲ್ಲ.**

ಒಬ್ಬ ರಶಿಯನ್ನನೇ ಎಂಬುದರ ಬಗ್ಗೆ ಅಚ್ಚರಿಯನ್ನೇನೂ ವ್ಯಕ್ತಪಡಿಸಿಲ್ಲ.

ರಶಿಯ ಜಗತ್ತಿನ ಶ್ರೇಷ್ಠ ಕಂಪ್ಯೂಟರ್ ತಂತ್ರಜ್ಞರನ್ನು ಹೊಂದಿದಂಥ ದೇಶ. ಆದರೆ ಈ ಪ್ರಕರಣದ ಹಿಂದೆ ಅಂಥ 'ತಜ್ಞ ತಲೆ' ಯೇನೂ ಇಲ್ಲ. ಹಾಗೆ ನೋಡಿದರೆ ಕಂಪ್ಯೂಟರ್ ತಜ್ಞರ ವಲಯದಲ್ಲಿ ಆ ಕೃಶಕಾಯ ಏನೇನೂ ಅಲ್ಲ.

ಇದೆಲ್ಲದರ ಅರ್ಥ ಏನು? ಪ್ರತಿಭೆಗಳು ಅಪಮಾರ್ಗದಲ್ಲಿ ಸಾಗುತ್ತಿರುವುದೇಕೆ?

ಇದರಲ್ಲಿ ಕೆಲ ಮಟ್ಟಿಗಾದರೂ ಅಲ್ಲಿನ ವ್ಯವಸ್ಥೆಯನ್ನೇ ಜವಾಬ್ದಾರ ಎಂದು ಆರೋಪಿಸಬೇಕಾಗುತ್ತದೆ. ಕಲಿಕೆಯಲ್ಲಿ ಗಣಿತಕ್ಕೇ ಹೆಚ್ಚಿನ ಒತ್ತು ನೀಡುವುದು ರಶಿಯನ್ನರ 'ಜಾಯಮಾನ.' ಕಂಪ್ಯೂ

ಟರ್‌ನೊಂದಿಗೆ ಕೆಲಸಮಾಡುವ ಯಾರೇ ಆದರೂ ಇಲ್ಲಿ ಪ್ರೋಗ್ರಾಮಿಂಗ್ ಕಲಿತಿರಲೇಬೇಕು. ಆದರೆ ತಾಂತ್ರಿಕವಾಗಿ ತೀರ ಹಿಂದುಳಿದಿರುವ ರಶಿಯದಲ್ಲಿ ಜಾಣ್ಮೆಯ ಅಳತೆಗೋಲು ಎಂದರೆ ವ್ಯಕ್ತಿಯೊಬ್ಬ ಆ ಸಂದರ್ಭದಲ್ಲಿ ಗೈಯುವ ಸಾಧನೆಯೆಂಬುದೂ ಚೋದ್ಯದ ಸಂಗತಿಯೆ.

ಅಂದಿನ ಸೋವಿಯತ್ ರಶಿಯ ಉತ್ತಮ ಗುಣಮಟ್ಟದ ಕಂಪ್ಯೂಟರ್‌ಗಳನ್ನೆಂದೂ ತಯಾರಿಸಲಿಲ್ಲ. ಪ್ರೋಗ್ರಾಮರ್‌ಗಳು ಲಭ್ಯವಿದ್ದಷ್ಟರಲ್ಲೇ ಮಹತ್ತನ್ನು ಸಾಧಿಸಬೇಕಾಗುತ್ತಿತ್ತು. ಇಂಥ ಪರಿಸ್ಥಿತಿಯಲ್ಲಿ ಕೆಲಸ ಮಾಡಲು ಅವರು ವೇಳೆ ಮತ್ತು ಉಪಕರಣ ಬಳಕೆಯ ಅವಕಾಶ ಹಂಚಿಕೆಗಾಗಿ ಹೆಣಗಾಡಬೇಕಾಗುತ್ತಿತ್ತು.

"ಹೀಗೆ 'ಹಂಚಿಕೊಳ್ಳು'ವ ಸಂದರ್ಭಗಳಲ್ಲಿಯೇ ಅವರು ಒಬ್ಬರಿನ್ನೊಬ್ಬರ ವ್ಯಾವಹಾರಿಕ ಗುಟ್ಟುಗಳತ್ತ ಒಂದು ಕಣ್ಣಿಟ್ಟು ಗಮನಿಸುತ್ತ ಅವನ್ನೆಲ್ಲ ಅರಿತುಕೊಂಡರು," ಎನ್ನುತ್ತಾರೆ ಮಾಸ್ಕೋದ ಸಾಫ್ಟ್‌ವೇರ್ ಕಂಪನಿಯಾದ 'ಡೈಲಾಗ್‌ಸೈನ್ಸ್'ನ ಮುಖ್ಯಸ್ಥ ಸರ್ಗೆಯ್ ಆಂಟಿಮೋನೋವ್. "ಆದರೆ ಅಮೇರಿಕದಲ್ಲಿ ಇಂಥ ಪರಿಸ್ಥಿತಿ ಎಂದೂ ಬರಲಿಲ್ಲ. ಏಕೆಂದರೆ ಅಲ್ಲಿ ಎಲ್ಲರಿಗೂ ಸ್ವಂತದ ಪ್ರತ್ಯೇಕ ಕಂಪ್ಯೂಟರ್‌ಗಳಿವೆ," ಎಂದೂ ಅವರು ವಿವರಿಸುತ್ತಾರೆ. ಕೊನೆಗೊಮ್ಮೆ ಸೋವಿಯತ್ ಪ್ರೋಗ್ರಾಮರ್‌ಗಳಿಗೆ ಕ್ಷಿಪ್ರ ಹಾಗೂ ಶಕ್ತಿಶಾಲಿಯಾದ ಪಾಶ್ಚಾತ್ಯ ಕಂಪ್ಯೂಟರ್‌ಗಳನ್ನು ಬಳಸುವ ಅವಕಾಶ ಒದಗಿ ಬಂದಾಗ ಅವರು ಅದರಲ್ಲೂ ವೇಗ ಸಾಧಿಸಿದರು, ಚಾತುರ್ಯ ಮೆರೆದರು. ಹಾಗೆಯೇ ಅಲ್ಲಿಯೂ ತಮ್ಮ 'ಕೈ ಚಳಕ' ತೋರಿಸಹತ್ತಿದರು. ಇದವರಿಗೆ ನಿಜಕ್ಕೂ 'ಹಬ್ಬ'ವಾಗಿಬಿಟ್ಟಿತು. ವಿದೇಶೀ ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್‌ಗಳ ರಹಸ್ಯವನ್ನು ಬಯಲುಗೊಳಿಸುವ ಕಾಯಕಕ್ಕೆ ಇಳಿಯಲು ಅವರು ತಡಮಾಡಲಿಲ್ಲ.

"ಪ್ರೋಗ್ರಾಮರ್‌ಗಳ ಒಂದು ತಂಡವಂತೂ ವಿದೇಶಿ ಪಠ್ಯಗಳನ್ನು ಬಹಿರಂಗಪಡಿಸಿ ವಿರೂಪಗೊಳಿಸುವುದರಲ್ಲೇ ತೊಡಗಿತ್ತು" ಎನ್ನುತ್ತಾರೆ ರಶಿಯದ ಖ್ಯಾತ ಗಣಿತಜ್ಞ ದ್ಮಿತ್ರಿ ಲೊಝಿನ್‌ಸ್ಕಿ. ಇವರು ಆ ದೇಶದ ಸುಪ್ರಸಿದ್ಧ ಕಂಪ್ಯೂಟರ್ ಪ್ರೋಗ್ರಾಮರ್‌ಗಳಲ್ಲೊಬ್ಬರಲ್ಲದೇ ಹಲವು ಪ್ರತಿಷ್ಠಿತ ಆ್ಯಂಟಿ-ವೈರಸ್ ಪ್ರೋಗ್ರಾಂಗಳ ಲೇಖಕರೂ ಹೌದು. "ಹಾಗೆ ನೋಡಿದರೆ ಮೇಲೆ ಹೇಳಿದಂಥ ತಂಡದವರಿಗೆ ಕೆಲವು ದಶಕಗಳಿಂದ ಅನ್ಯರ ವ್ಯವಹಾರಗಳಲ್ಲಿ ತಲೆಹಾಕುವುದೇ ಮುಖ್ಯ ಕೆಲಸ" ಎಂದೂ ಲೊಝಿನ್‌ಸ್ಕಿ ಹೇಳುತ್ತಾರೆ.

ಸೋವಿಯತ್ ಒಕ್ಕೂಟ ಹಠಾತ್ತನೇ ಒಡೆದು ಹೋದಾಗ ಹಲವಾರು ಉದ್ಯಮ-ಸಂಸ್ಥೆಗಳು ಅನಾಥವಾದವು, ಬಾಗಿಲು ಮುಚ್ಚಿದವು. ಅಲ್ಲೆಲ್ಲ ಕೆಲಸ ಮಾಡುತ್ತಿದ್ದ ಇಂಥ ಪ್ರೋಗ್ರಾಮರ್‌ಗಳಿಗೂ ಆಪತ್ತಿನ ಕಾಲ ಅದು. ಇದರೊಂದಿಗೆ ಅವರು ನಂಬಿಕೊಂಡಿದ್ದ 'ತಾಂತ್ರಿಕ ಸಾಮ್ರಾಜ್ಯ'ವೂ ಉರುಳಿ ಹೋಯಿತು. ಒಕ್ಕೂಟದಿಂದ ಸಿಡಿದು ಸ್ವತಂತ್ರವಾಗಿ ಸ್ವಯಂಮಾಡಳಿತ ನಡೆಸತೊಡಗಿದ ಕಜಖಿಸ್ತಾನ, ತಾಜಿಕಿಸ್ತಾನ ಮುಂತಾದ ದೇಶಗಳಿಂದ ಲಕ್ಷಾಂತರ ಮಂದಿ ರಶಿಯಕ್ಕೆ ಮರಳಿ ಬಂದರು.

"ಬಂದರೇನೋ ನಿಜ. ಆದರೆ ಇವರಲ್ಲಿ ಬಹುತೇಕರಿಗೆ ವಾಸಿಸಲು ಮನೆಯಿರಲಿಲ್ಲ, ಸ್ವತಂತ್ರ ಉದ್ಯೋಗ ಪ್ರಾರಂಭಿಸಬೇಕೆಂದರೆ ಕೈಯಲ್ಲಿ ಕಾಸಿರಲಿಲ್ಲ, ನ್ಯಾಯಯುತವಾಗಿ ದುಡಿಯುವ ಮಾರ್ಗವೂ ಗೊತ್ತಿರಲಿಲ್ಲ. ಹೀಗಾಗಿ ಈ ಜನ ಬೇರೆ ದಾರಿಕಾಣದೆ ಕಾನೂನು ಬಾಹಿರ ವ್ಯವಹಾರಗಳಲ್ಲಿ ತೊಡಗಿದರು," ಎಂದು ಅಮೆರಿಕನ್ ವಿಶ್ವವಿದ್ಯಾಲಯದ ಲೂಯಿಸ್ ಶೆಲ್ಲಿ ವಿಶ್ಲೇಷಿಸುತ್ತಾರೆ.

ಸ್ವತಂತ್ರ ರಶಿಯದ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಏರುಪೇರುಗಳಿಂದಲೂ ಅರಾಜಕತೆಯಿಂದಲೂ ತಪ್ಪಿಸಿಕೊಳ್ಳಲು ಕೆಲವು ಉನ್ನತ ಕಂಪ್ಯೂಟರ್ ತಜ್ಞರಂತೂ ಪಾಶ್ಚಾತ್ಯ ರಾಷ್ಟ್ರಗಳಿಗೆ ಹೋಗಿ ನೆಲೆಸಿದರು. ಇನ್ನು ಕೆಲವರು ವ್ಯಾಪಾರ ರಂಗಪ್ರವೇಶಿಸಿದರು. ಆದರೆ ಮುಂದೇನು ಮಾಡುವುದೆಂದು ತಿಳಿಯದೇ ಪೇಚಿಗೆ ಸಿಲುಕಿದವರೇ ಬಹಳ. ಬಹುದೊಡ್ಡ ಸೈನ್ಯದ ಭಾಗವಾಗಿ ಕೆಲಸ ಮಾಡುತ್ತಿದ್ದ ತಜ್ಞರೂ ಕೆಲವರಿದ್ದರು. ಅವರಿಗೆ ಈ ಸಂದರ್ಭದಲ್ಲಿ ಅಕ್ಷರಶಃ ಕೆಲಸವೇ ಇರಲಿಲ್ಲ. ಇಂಥವರು ಅನಿವಾರ್ಯವಾಗಿ ಅಣುಬಾಂಬು

ನಿರ್ಮಾಣದಿಂದ ಹಿಡಿದು ವಿದ್ಯುದಾಗಾರಗಳ ಹಾಟ್ ವೈರಿಂಗ್ ಮದರ್ ಬೋರ್ಡ್‌ಗಳ ತಯಾರಿವರೆಗಿನ ವಿವಿಧ ಕ್ಷೇತ್ರಗಳಲ್ಲಿ ದುಡಿಯಬೇಕಾಯಿತು.

ಸದ್ಯಕ್ಕೆ ಈ ಪರಿಣತರ ಸೇವೆಯು ಅವಶ್ಯಕತೆ ರಶಿಯಕ್ಕಿಲ್ಲದಿದ್ದರೂ, ಅಲ್ಲಿಯ ಅಪರಾಧ ಲೋಕಕ್ಕೆ ಮಾತ್ರ ಈ ತಜ್ಞರು ಬೇಕಾದವರಾಗಿದ್ದಾರೆ. "ಅಪರಾಧಲೋಕದ ಮಂದಿ ಅಲ್ಲಿಯ ವ್ಯವಹಾರ ಕ್ಷೇತ್ರವನ್ನು ಕಲುಷಿತಗೊಳಿಸಿದ್ದಾರಲ್ಲದೆ ತಮ್ಮ ಪರವಾಗಿ ಕೆಲಸ ಮಾಡುವಂತೆ ಜನರನ್ನು ಒತ್ತಾಯದಿಂದ ಎಳೆದು ತರುತ್ತಿದ್ದಾರೆ" ಎಂದು 'ಕಾಮರ್ಸಂಟ್' ಎಂಬ ರಶಿಯದ ವಾಣಿಜ್ಯ-ವ್ಯವಹಾರ ದಿನಪತ್ರಿಕೆ ವರದಿ ಮಾಡಿದೆ.

ಇಂತಹ ದುಷ್ಕೃತ್ಯಗಳಲ್ಲಿ ತೊಡಗಿರುವ ರಶಿಯನ್ ತಂತ್ರಜ್ಞರ ಸಂಖ್ಯೆ ಎಷ್ಟೆಂಬುದು ನಿಖರವಾಗಿ ಯಾರಿಗೂ ತಿಳಿದಿಲ್ಲ. ಆದರೆ ಮೋಸಜಾಲದ ವ್ಯಾಪ್ತಿ ಮಾತ್ರ ಸಾಕಷ್ಟು ವಿಸ್ತೃತಗೊಂಡಿದೆ.

"ರಶಿಯದ ಈ ವಂಚಕರ ಇಂಥ ಕ್ರಮಗಳಿಂದ, ಅವರ ಧನದಾಹದಿಂದ ನಿಜಕ್ಕೂ ಎಲ್ಲರೂ ಆಘಾತಗೊಂಡಿದ್ದಾರೆ" ಎಂದು ಸಿಟಿ ಬ್ಯಾಂಕ್ ಪ್ರಕರಣದ ಕುರಿತು 'ಮಾಸ್ಕೊ ನ್ಯೂಸ್' ಕಟುವಾಗಿ ಟೀಕಿಸಿದೆ.

ಇನ್ನು ರಶಿಯದ ಬ್ಯಾಂಕ್‌ಗಳು ಕಂಪ್ಯೂಟರ್‌ಗಳನ್ನೇ ಹೆಚ್ಚೆಚ್ಚು ಅವಲಂಬಿಸತೊಡಗಿದರಂತೂ ಪರಿಸ್ಥಿತಿ ಇನ್ನೂ ಹದಗೆಟ್ಟು ಹೋಗುವ ಸಂಭವವಿದೆ.

ಮತ್ತೊಬ್ಬರ ಟೆಲಿಫೋನು ಸಂಪರ್ಕವನ್ನು ಬಳಸಿಕೊಂಡು ತಾವು ಮಾತ್ರ ಅದರ ಆರ್ಥಿಕ ಭಾರವನ್ನು ಹೊರದೆಂಯೇ ಹಾಯಾಗಿರುವ ಜನ ಎಷ್ಟಿಲ್ಲ? ಹಾಗೆಯೇ ಕಂಪ್ಯೂಟರ್ ಮೂಲಕ ಆರ್ಥಿಕ ಅಪರಾಧ ಕೃತ್ಯಗಳಲ್ಲಿ ತೊಡಗುವಂಥ ಜನ ಈಗ ಸಾಲುಗಟ್ಟಿ ಬರುತ್ತಿರುವಂಥ ಅತ್ಯಾಧುನಿಕ ಕಂಪ್ಯೂಟರುಗಳನ್ನೂ ತೀರ ಇತ್ತೀಚಿನ ಸಾಫ್ಟ್‌ವೇರ್‌ಗಳನ್ನೂ ಖರೀದಿಸಿಬಿಟ್ಟರೆ ಮುಗಿದೇ ಹೋಯಿತು. ಇಂಟರ್‌ನೆಟ್‌ನಲ್ಲಿ ಅವರು ತಲೆ ತೂರಿಸಲು ಶ್ರಮಪಡಲೇಬೇಕಾಗಿಲ್ಲ. ಅನುದಿನವೂ ಪ್ರತಿಕ್ಷಣವೂ ಸುಧಾರಣೆಯ ಹಾದಿಯಲ್ಲಿ ಹೆಜ್ಜೆಯಿಕ್ಕುತ್ತಿರುವ ದೂರ ಸಂಪರ್ಕ ವಿದ್ಯುನ್ಮಾನ ತಾಂತ್ರಿಕತೆಯೊಂದಿಗೆ ಈ ಜನ ಸಮವೇಗದಲ್ಲಿ, ನಡೆಯುವ 'ಸಾಮರ್ಥ್ಯ'ವನ್ನು ಪಡೆಯಲು ಹಗಲಿರುಳೂ ಬುದ್ಧಿ ಖರ್ಚು ಮಾಡುತ್ತಿದ್ದಾರೆ.

ಅವರು ಇದನ್ನು 'ತಾವು ಸಾಧಿಸುತ್ತಿರುವ ಪ್ರಗತಿ' ಎಂದು ಕರೆದುಕೊಳ್ಳುವುದಾದರೆ ಅದರಿಂದ ಎಂಥೆಂಥ ಅವಘಡಗಳು ಸಂಭವಿಸಬಹುದೆಂದು ಊಹಿಸುವುದೂ ಕಷ್ಟ.

'ಮೆಡ್‌ವೆಡ್' ಎಂಬ ನಿಯತಕಾಲಿಕೆಯೊಂದು ಈ ಕುರಿತು ಬರೆಯುತ್ತ, "ಅತಿ ಶೀಘ್ರದಲ್ಲೇ ಈ ರಶಿಯನ್ 'ತಜ್ಞ'ರು ಅಂತಾರಾಷ್ಟ್ರೀಯ ಕಂಪ್ಯೂಟರ್ ಕಳ್ಳರ ಜಾಲದಲ್ಲಿ ಸೇರ್ಪಡೆಯಾಗುವುದರಲ್ಲಿ ಸಂಶಯವೇ ಇಲ್ಲ" ಎಂದು ಕಣಿ ನುಡಿದಿದೆ. ●

---

**ಗೋ**ರಿಯನ್ನು ತೋಡುವುದೇ ಗಿಮ್ಸ್‌ಬಿಯನೆಡ್ ಪಿಯರ್ಸನ್ನನ ಕೆಲಸ. ೨೪ ಗಂಟೆಗಳ ಮೊದಲೆ ಮುಂದಿನ 'ಗಿರಾಕಿ'ಗೆ ಆತ ಮುನ್ಸೂಚನೆಕೊಟ್ಟು ಬರುತ್ತಿದ್ದನಂತೆ. ಗೋರಿ ತೋಡುವ ಕೆಲಸವನ್ನಾತ ೨೨ ವರ್ಷಗಳ ವರೆಗೆ ಮಾಡಿದ.

---

ಸಿಸಿಲಿಯ ಆ್ಯಂಟೋನಿಯೋ ಪಾರ್ಸೆಲ್ಲಿ ೫೬ನೇ ವರ್ಷದಲ್ಲಿ 'ಸತ್ತ.' ಆವನನ್ನು ದಫನಗೊಳಿಸಬೇಕೆಂದು ಶವಪೆಟ್ಟಿಗೆಯನ್ನು ಸ್ಮಶಾನಕ್ಕೆ ಒಯ್ದಾಗ ಒಳಗೆ ಏನೋ ಅಲುಗಾಡಿದಂತಾಯಿತು. ಕುತೂಹಲದಿಂದ ಪೆಟ್ಟಿಗೆಯನ್ನು ತೆಗೆಯುತ್ತಲೇ ನಿದ್ದೆಯೆಂಬಂತೆ ಪಾರ್ಸೆಲ್ಲಿ ಎದ್ದು ಕುಳಿತ. ಭಯಾಶ್ಚರ್ಯಗಳಿಂದ ಶವವನ್ನು ತಂದವರು ಓಡಿ ಹೋದರೆ ಆಘಾತವನ್ನು ತಾಳಲಾರದೆ ಅವನ ಅತ್ತೆ ಅಲ್ಲಿಯೆ ಕುಸಿದು ಪ್ರಾಣಬಿಟ್ಟಳು. ಈಗ ಅತ್ತೆಯ ಹೆಣವನ್ನು ಶವಪಂಪುಟದಲ್ಲಿರಿಸಿ ದಫನ ಮಾಡುವ ಕಾರ್ಯ ಅಳಿಯನದಾಗಿತ್ತು.

# ಮಜಾಶೀರ ಮಜಕೂರು

## ಎಂಥಾ ನಾಯಿ!

ಕಳ್ಳನ್ನ ಹಿಡಿದು ಕಚ್ಚಬೇಕಾದ ಪೊಲೀಸು ನಾಯಿ ಆತನ ಬದಲು ಪೊಲೀಸು ಅಧಿಕಾರಿಯನ್ನೇ ಕಚ್ಚಿಬಿಡ್ತಂತೆ ಟೊರೆಂಟೋದಲ್ಲಿ. ಅದೂ, ಆತನ ಮೀನಖಂಡದಲ್ಲಿ ಬಲವಾಗಿ ಕಚ್ಚಿ ನೆತ್ತರು ಹರಿಯೋ ಹಾಗೆ ಮಾಡ್ತು.

ಹೀಗಾದದ್ದಕ್ಕೇನು ಕಾರಣ ಗೊತ್ತೆ? ನಾಲ್ಕು ವರ್ಷದ ಆ ಜರ್ಮನ್ ಶೇಫರ್ಡ್ ಜಾತಿಯ ಶ್ವಾನ ಪಾಲಕ ಹೇಳ್ತಾನೆ: "ಅಂಗಡಿಯೊಂದರಲ್ಲಿ ಕದಿಯೋಕೆ ಪ್ರಯತ್ನ ಪಟ್ಟ ವ್ಯಕ್ತಿ ತೊಟ್ಟಿದ್ದ ಡ್ರೆಸ್ಸೂ, ನಾಗರಿಕ ದಿರಿಸಿನಲ್ಲಿದ್ದ ಆ ಪೊಲೀಸು ಅಧಿಕಾರಿಯ ಬಟ್ಟೆಗಳೂ ಒಂದೇ ಥರ ಇದ್ದದ್ದೇ ಇದಕ್ಕೆ ಕಾರಣ."

ಮೋಸ ಹೋಗೋದು ಮನುಷ್ಯನಿಗಷ್ಟೇ ಸೀಮಿತ ಅಲ್ಲ, ಅಲ್ವೆ?

## ನದಿಗೆಸೆದ ನಗದು

ಹಾಗೆಲ್ಲಾ ಪೋಲು ಮಾಡ್ಬೇಡ, ಹೀಗೆಲ್ಲಾ ಖರ್ಚು ಮಾಡ್ಬೇಡ, ಹಣಾನ ಜೋಪಾನ್ವಾಗಿಟ್ಕೊ ಅಂತ ನೀವು ನಿಮ್ಮಕ್ಕಳಿಗೆ ಹೇಳೇ ಹೇಳ್ತೀರಿ. ಅದ್ರಲ್ಲೂ ಅದು ನೀವು ಗಳಿಸಿ ಅವರಿಗೆ ಪಾಕೆಟ್ ಮನಿ ಅಂತ ಕೊಟ್ಟಿದ್ದಿದ್ರಂತೂ ಮುಗ್ದೇ ಹೊಯ್ತು. ಅವರೇ ಗಳಿಸಿದ್ದಾದ್ರೆ? ಆಗ್ಲೂ ಅದನ್ನ ಹ್ಯಾಗೆ ಸದ್ಬಳಕೆ ಮಾಡ್ಬೇಕು, ಎಷ್ಟು ಉಳಿಸಿಡಬೇಕು ಅಂತೆಲ್ಲಾ ಮಾರ್ಗದರ್ಶನಾ ಮಾಡೇಮಾಡ್ತೀರಿ.

ಆದ್ರೆ ಹೀಗೆ ಮಾರ್ಗದರ್ಶನ ಮಾಡಿದ್ರಿಂದ ಹ್ಯಾಮೆಲಿನ್(ಜರ್ಮನಿಯ) ವಿಲಿ ಗ್ರಂಡೆಮಾನ್ ಅನ್ನೋ ಹೆಸರಿನ ಹುಡುಗ ಸಿಟ್ಟಿಗೆದ್ದು ಏನು ಮಾಡಿದ ಗೊತ್ತೆ? ಭಾರತೀಯ ಲೆಕ್ಕಾಚಾರದ ಪ್ರಕಾರ ಸುಮಾರು ೧೮ ಲಕ್ಷ ರೂ. ಗಳಷ್ಟಾಗೋ ಹಣವನ್ನ ಆತ ಒಂದು ಕಬ್ಬಿಣದ ಪೆಟ್ಟಿಗೇಲಿಟ್ಟು ವೆಸರ್ ನದೀಲೆಸದ್ಬಿಟ್ಟ.

ಹೀಗೆ ಎಸೆಯಲ್ಪಟ್ಟ ಹಣ ನೀರು ಪಾಲಾಗ್ಲಿಲ್ಲ ಬಿಡಿ. ಇಬ್ರು ಹುಡುಗ್ರು, ನದೀಲಿ ಈಜತಿದ್ದೋರು, ತಮಗೆ ಸಿಕ್ಕ ಆ ಪೆಟ್ಟಿಗೇನ ನೇರವಾಗಿ ತಮ್ಮ ಗುರುಗಳಿಗೆ ತಲ್ಪಿಸಿದ್ರು, ಆ ಸದ್‌ಗೃಹಸ್ಥ ಅದನ್ನ ಪೊಲೀಸರಿಗೊಪ್ಪಿಸ್ದ. ಅವರು ತುಂಬ ಪ್ರಾಮಾಣಿಕರು. ಆ ಪೆಟ್ಗೆ ಯಾರ್ದು ಅಂತ ಹುಡುಕಿ, ವಿಲಿಯ ಪಾಸ್‌ಬುಕ್ಕನ್ನು ನೋಡಿ ಖಚಿತಪಡಸ್ಕೊಂಡು ಪೂರ್ತಿ ಹಣವನ್ನ ಅವನಿಗೆ ಮರಳಿಸಿದ್ರು.

"ನಮಗೇನೂ ಆತನ ಹಣದ ಮೇಲಾಸೆ ಇರ್ಲಿಲ್ಲ. ಆತನಿಗೆ ಹಣದ ಮಹತ್ವ ಗೊತ್ತಾಗ್ಲೀಂತ ಪದೇ ಪದೇ ಎಚ್ಚರಿಸ್ತಿದ್ವಿ" ಅಂತಂದ್ರು ಆತನ ಮನೆಜನ.

ಆದ್ರೂ ಅಲ್ಲಿಯ ಕೌಟುಂಬಿಕ ನ್ಯಾಯಾಲಯ ಹುಡುಗನ ಹಣದ ಸುರಕ್ಷತೆಗಾಗಿ ಒಂದಿಬ್ರನ್ನ ನೇಮಿಸಿದೆ ಬಿಡಿ.

## ಅದ್ಭುತ ಪ್ಲೇಟು!?

ಹೋಟಲಿಗ್ಹೋಗ್ತೀರಿ. ಏನೋ ಆರ್ಡರ್ ಮಾಡ್ತೀರಿ. ಅದು ಬರೋವಗ್ರೂ ಜತೇಲಿದ್ದವರೊಂದಿಗೆ ಮಾತಾಡ್ತಿರ್ತೀರಿ. ಹೇಳಿದ ತಿಂಡಿ ಬಂದಾಗಲೂ ಮಾತಾಡ್ತಾನೆ ತಿಂದು, ಬಿಲ್ ತೆತ್ತು, ತೃಪ್ತಿಯಿಂದ ಹೊರಗ್ಬರ್ತೀರಿ.

ಆದ್ರೆ ಒಮ್ಮೊಮ್ಮೆ ಯಾವ್ಯಾವ್ದೊ ಕಾರಣದಿಂದ ತಿಂಡಿ ಸರಬರಾಜಿಗೆ ತಡವಾಗಿ ಬಿಡತ್ತೆ. ನಿಮ್ಮ ಸಹನೆ ಮೀರತ್ತೆ. ಸಪ್ಲಾಯರ್ ಮೇಲೆ ಎಗರಾಡ್ತೀರಿ. ಆತ ಅದಕ್ಕೇನೂ ಪ್ರತಿಕ್ರಿಯೆ ತೋರಿಸ್ದಿದ್ರೆ ಮ್ಯಾನೇಜರ್ ಹತ್ರ ಹೋಗಿ ದೂರ್‍ತೀರಿ.

ಕೆಲವು ಹೋಟಲುಗಳಲ್ಲಂತೂ "ಕ್ಷಿಪ್ರ ಸೇವೆ ಸಾಧ್ಯವಿಲ್ಲ ಕ್ಷಮ್ಸಿ" ಅಂತ ಬರದಿರೋ ಫಲಕಗಳೂ ಇರತ್ವೆ. ಆದ್ರೆ ಅವುಗಳನ್ನ ನೋಡೋರು ಎಷ್ಟು ಜನ?

ಇದೆಲ್ಲಾ ತೊಂದ್ರೆ ತಪ್ಪಿಸೋದಕ್ಕೆ ಮುಂಬಯಿಯ ದಾದರ್ ಪ್ರದೇಶದ ಸುಪ್ರಸಿದ್ಧ ಹೋಟಲಿನೋರು ವಿನೂತನ ಮಾರ್ಗವನ್ನ ಕಂಡು ಹಿಡ್ದಿದಾರೆ. ನೀವು ಯಾವ ಟೇಬಲ್ಲಿಗೆ ಕೂಡ್ತೀರೋ ಅಲ್ಲೊಂದು ಚಿಕ್ಕ ಸ್ಪೀಕರಿರತ್ತೆ.

ಕೂಡ್ಲೇ ಧ್ವನಿ ಮುದ್ರಿತ ಸಂದೇಶ ಕೇಳತ್ತೆ- "ಸ್ವಾಗತ ಸಹೃದಯರೇ. ತಿಂಡಿ ಸರಬರಾಜಿಗೆ ಸ್ವಲ್ಪ ತಡವಾಗಬಹುದು. ಆದ್ರಿಂದ ಅಲ್ಲೀವರ್ಗೂ ನಿಮ್ಮ ಟೇಬಲ್ ಮೇಲಿರೋ 'ಪಜಲ್ ಪ್ಲೇಟ್'ನ ಆಸ್ವಾದಿಸ್ತಾ ಇರಿ. ಇದು ನಿಮ್ಮ ಮಿದುಳಿಗೆ ಆಹಾರ, ಮನಸ್ಸಿಗೆ ಮುದ ನೀಡತ್ತೆ" ಅಂತ.

ಆ ಪಜಲ್ ಪ್ಲೇಟಲ್ಲಿ ಎಂಥೆಂಥಾ ಪಜಲ್‌ಗಳಿವೆ ಅನ್ನೋದನ್ನೆಲ್ಲಾ ಇಲ್ಲಿ ವಿವರಿಸ್ದೇ, ಆ ಮೋಜಿನ ತಟ್ಟೆಗಳಿಗಾಗಿಯೇ ಬರೋ ಜನರ ಸಂಖ್ಯೆ ನೂರ್ಮಡಿ ಹೆಚ್ಚಿದೆ ಅಂತನ್ನೋದನ್ನ ಮಾತ್ರ ಹೇಳ್ತಿದ್ದೇನೆ.

ಹೌದು. ತಿಂಡಿ ಬರೋವರ್ಗೂ ಹಸಿವೆಯನ್ನ ಮರಸೋ ಅಂಥ ಈ ಪಜಲ್‌ಗಳು ಒಂದಕ್ಕಿಂತ ಇನ್ನೊಂದು ಮಿಗಿಲು.

## ಫೋನು ಮಾಡಿದರೆ...

ಎಲ್ಲೋ ಕಾಡಲ್ಹೋಗ್ತೀರಿ. ಹಕ್ಕಿ-ಪಕ್ಷಿಗಳ ಧ್ವನಿಗಳಿಂದ, ಪ್ರಾಣಿಗಳ ಕೂಗುವಿಕೆಯಿಂದ ರೋಮಾಂಚಿತರಾಗ್ತೀರಿ. ಆದ್ರೆ ಕಾಡುಗಳು ನಶಿಸಿ ಅಲ್ಲಿನ ಪಕ್ಷಿ ಪ್ರಭೇದ, ಪ್ರಾಣಿ ಪ್ರಭೇದಗಳೆಲ್ಲ ವಿನಾಶದಂಚನ್ನ ತಲಪಿರೋ ಈ ದಿನಗಳಲ್ಲಿ ಅಂಥ ಧ್ವನಿ ಅಪರೂಪವಾಗ್ತಿದೆ ಅನ್ನೋದೂ ನಿಜ.

ಪ್ಯಾರಿಸ್ಸಿನಲ್ಲೀಗ ನೀವು ಎಲ್ಲಿ ಬೇಕಾದ್ರೂ ಯಾವ ಹೊತ್ತಿನಲ್ಲಾದ್ರೂ ಇಂಥ ರೋಮಾಂಚಕ ಅನುಭವವನ್ನು ಪಡೀಬಹುದಂತೆ. "ಅದ್ಹೇಗೆ ಸಾಧ್ಯ? ಅದೂ ಅಂಥಾ ಗೌಜಿರೋ ಮಹಾನಗರದಲ್ಲಿ?" ಅಂತೀರೇನು?

ಅಲ್ಲಿಯ ಪರಿಸರ ಪ್ರೇಮಿಗಳ ಸಂಘ ಫ್ರಾನ್ಸಿನ ಟೇಲಿಫೋನ್ ಇಲಾಖೆಯೊಂದಿಗೆ ಸೇರಿಕೊಂಡು ಮಾಡಿರೋ ವ್ಯವಸ್ಥೆ ಇದು. ಒಂದು ವಿಶಿಷ್ಟ ಕೋಡ್ ನಂಬರನ್ನ ಡಯಲ್ ಮಾಡಿ ನಂತರ ಇನ್ನೊಂದು ಸಂಖ್ಯೆಗೆ ಸಂಪರ್ಕ ಕಲ್ಪಿಸಿಕೊಂಡ್ರೆ ಹಸಿರು ಲೈಟು ಹೊತ್ಕೊಳ್ಳತ್ತೆ. ಅದ್ರಲ್ಲಿರೋ ಖಾನೇಗೆ ಎರಡು ಫ್ರಾಂಕ್‌ಗಳನ್ನು ಹಾಕಿದ್ರೆ ಒಂದು ನಿಮಿಷದವರೆಗೆ ಹಕ್ಕಿಗಳ ಹಾಡು, ಪಕ್ಷಿಗಳ ಗುಟುರು, ಹುಲಿಗಳ ಗುಡುಗು, ಸಿಂಹಗಳ ಗರ್ಜನೆ, ತಿಮಿಂಗಿಲುಗಳ ಪ್ರೇಮಗೀತೆ ಹೀಗೇ ಅನೇಕ ರೀತಿಯ ಧ್ವನಿಗಳನ್ನ ಆಲಿಸಬಹುದು, ಆನಂದ ಪಡಬಹುದು.

ಹಾಂ, ಇದಕ್ಕಾಗೇ ಇರೋ ವಿಶೇಷ ಟೆಲಿಫೋನ್ ಬೂತುಗಳಿಗೆ ಮಾತ್ರ ನೀವು ಹೋಗ್ಲೇ ಬೇಕಾದ್ದು ಅನಿವಾರ್ಯ.

ಈ ರೀತಿ ಸಂಗ್ರಹವಾಗೋ ಹಣದಿಂದ ವಿನಾಶದಂಚಲ್ಲಿರೋ ಪ್ರಾಣಿ-ಪಕ್ಷಿ ಕುಲವನ್ನ ಮುಂದಿನ ಪೀಳಿಗೆಗಾಗಿ ಉಳಿಸೋದಲ್ದೇ ಅವುಗಳ ವಂಶಾಭಿವೃದ್ಧಿನೂ ಮಾಡೋ ಉದ್ದೇಶ ಆ ಪರಿಸರ ಪ್ರೇಮಿಗಳ ಸಂಘದ್ದು.

## ಜೇಲಿನಲ್ಲಿ ನ್ಯಾಯಾಧೀಶರು!

ನ್ಯಾಯಾಧೀಶರಿಗೇ ಜೇಲುವಾಸದ ಶಿಕ್ಷೆಯೆ? ಹೌದು, "ಅವರು ತಮ್ಮ ರಾತ್ರಿಗಳನ್ನು ಜೇಲಿನಲ್ಲೂ, ಮುಂಜಾನೆಯ ಮತ್ತು ಸಂಜೆಯ ಎರಡು ಗಂಟೆಗಳಷ್ಟು ಮಾತ್ರ ಕಾಲವನ್ನು ಮನೆಯಲ್ಲೂ, ನ್ಯಾಯಾಲಯ ಕಾರ್ಯ ನಿರ್ವಹಿಸುವಷ್ಟು ಅವಧಿಯನ್ನು ಕೋರ್ಟಿನಲ್ಲೂ ಕಳೆಯತಕ್ಕದ್ದು" ಎಂದು ಇಟಲಿಯ ಕೆಟಾಂರ್ಝಾರೋದ ಸ್ಥಾನಿಕ ಸರಕಾರ ಫರಮಾನು ಹೊರಡಿಸಿದೆ.

"ಏನವರ ತಪ್ಪು? ಎಂಥ ಅಪರಾಧಕ್ಕಾಗಿ ಈ ಶಿಕ್ಷೆ?"

ಊಹುಂ. ಗಾಬರಿಬೀಳಬೇಡಿ. ಇದು ಅಲ್ಲಿಯ ಮಾಫಿಯಾ ವಿರೋಧಿ ಕೋರ್ಟಿನ ನಾಲ್ವರು ನ್ಯಾಯಾಧೀಶರ ಸುರಕ್ಷತೆಯ ದೃಷ್ಟಿಯಿಂದ ಸರಕಾರ ಕೈಕೊಂಡ ಕ್ರಮ, "ನೀನೆಲ್ಲೇ ಇರು, ಮುಗಿಸದೇ ಹೋದರೆ ನನ್ನ ಹೆಸರಲ್ಲ" ಎಂದು ಮನಸ್ಸಿನಲ್ಲೇ ಕತ್ತಿ ಮಸೆಯುತ್ತ ಪೊಲೀಸು ವ್ಯಾನು ಹತ್ತುವ ಮಾಫಿಯಾ ಲೋಕದ ಮಾರ್ಜಾಲಗಳಿಂದ ನ್ಯಾಯಾಧೀಶರನ್ನು ಉಳಿಸುವ ತಂತ್ರವಂತೆ ಇದು.

"ಅಂದಹಾಗೆ ಭಾನುವಾರ ಹಾಗೂ ಇತರ ರಜಾದಿನಗಳಲ್ಲಿ ಹೇಗೆ?"

ಹೂಂ, ಅರ್ಥವಾಯಿತು ನಿಮ್ಮ ಕುತೂಹಲ. ಆಗ ಅವರು ಜೇಲಿನಿಂದ ಹೊರಗೆ ಬರುವಂತೆಯೇ ಇಲ್ಲ.

ಹರಟೆ

# ಹೆಸರಿಗೊಂದು ಕೊಸರು

• ಡಾ. ಎಂ.ಆರ್. ಮಂದಾರವಲ್ಲಿ

ಸದಾನಂದ ಮನೆಗೆ ಬಂದವನೇ ಎಂದಿನಂತೆ ಎರಡೇ ಸಲ ಮೆಲ್ಲಗೆ ಬಾಗಿಲು ಬಡಿದ. ಉತ್ತರವಿಲ್ಲ. ಎರಡೇ ಸಲ 'ಕುಂಯ್' 'ಕುಂಯ್'ಎನ್ನುವಂತೆ ಬೆಲ್ ಬಾರಿಸಿದ. ಉತ್ತರವಿಲ್ಲ. 'ಮಹೇಶ್ವರಿs' ಎಂದು ಒಂದೇ ಒಂದು ಬಾರಿ ಕೂಗಿದ ಉತ್ತರವಿಲ್ಲ. 'ಏನಾಯ್ತು ಇವಳಿಗೆ?' ಮನೆಬೀಗವೇನೋ..... ಎಂದು ಕೊಳ್ಳುತ್ತಾ ನೋಡಿದ. ಬೀಗ ಹಾಕಿಲ್ಲ. ನನ್ನ ಹೆಜ್ಜೆ ಸಪ್ಪಳಕ್ಕೆ ಕಾದು ಬಾಗಿಲು ತೆಗೆಯುತ್ತಿದ್ದವಳು ಇಂದೇಕೆ ಹೀಗೆ? ನಿದ್ರೆ ಮಾಡ್ತಿರಬೇಕು ಅಂದುಕೊಂಡು ಜೋರಾಗಿ ಬಾಗಿಲು ಬಡಿದ. ಉತ್ತರವಿಲ್ಲ. ಈ ವೇಳೆಗೆ ಮನದ ಆಳದಲ್ಲಿ ಅಸ್ಪಷ್ಟ ಆತಂಕ ಮೂಡಿ ಹೆಚ್ಚಾಗತೊಡಗಿತು. ಮನೆಯ ಸುತ್ತಲೂ ಒಂದು ಸುತ್ತು ಹಾಕಿ ಕಿಟಕಿಗಳಿಂದ ಇಣುಕಿ ನೋಡತೊಡಗಿದ. ರೂಮಿನ ಕಿಟಕಿಯಲ್ಲಿ ಮಹೇಶ್ವರಿsಕಂಡಳು. ಗಲ್ಲಕ್ಕೆ ಕೈ ಆನಿಸಿ ಕುಳಿತು ಮುಂದೆ ಕೆಲವು ಕಾಗದಗಳನ್ನು ಹರವಿಕೊಂಡಿದ್ದಳು. 'ಮಹೇಶ್ವರೀ, ಮಹೇಶ್ವರೀ....' ಜೋರಾಗಿs ಕರೆದ ಸದಾನಂದ. ಬೆಚ್ಚಿದವಳು ಎದ್ದು ಗಂಡನ ಮುಖ ನೋಡಿ ಬಾಗಿಲು ತೆಗೆದಳು. 'ಸಾರಿ! ತುಂಬಾ ಹೊತ್ತಾಯ್ತೆ ಬಂದು? ಏನೋ ಯೋಚಿಸ್ತ ಇದ್ದೆ' ಕ್ಷಮಾಯಾಚನೆಯ ದನಿಯಲ್ಲಿ ಕೇಳಿದಳು. ಸದಾನಂದ ಮಾತಾಡಲಿಲ್ಲ. ಮೌನವಾಗಿ ಶೂ ಬಿಚ್ಚತೊಡಗಿದ. ಅವನಿಗೆ ಸಿಟ್ಟು ಬಂದಿದೆಯೆಂದರಿತು ಕಾಫಿ ತಯಾರಿಸಲು ಒಳನಡೆದಳು. ಮುಖದ ಮೇಲೆ ನೀರೆರೆಚಿಕೊಂಡು ಬಂದ ನಂತರ ಸದಾನಂದನಿಗೆ ಸಿಟ್ಟುಹೋಗಿ ಸ್ವಲ್ಪ ಹಾಯೆನಿಸಿತ್ತು. ಆದರೂ, ಕಾಫಿ ತೆಗೆದುಕೊಳ್ಳುತ್ತಾ ಕೇಳಿದ, ಬಾಗಿಲು ತೆಗ್ಯೋದು ಬಿಟ್ಟು ಏನಾಡ್ತಿದ್ದೆ? ದನಿಯಲ್ಲಿ ಬೇಸರವಿತ್ತು. ಅವಳುತ್ತರಿಸದೇ ಸುಮ್ಮನೆ ಕುಳಿತಳು. 'ಏನಂಥ ಯೋಚ್ನೆ? ಲೇಖನ ಬರೀತಿದ್ಯಾ?' ಸದಾನಂದನೇ ಸ್ವಲ್ಪ ಮೆತ್ತಗಾಗಿ ಕೇಳಿದ.

'ರ್ರೀ... ನನ್ನ ಇನ್ಮೇಲೆ ಮಹೇಶ್ವರೀ ಅಂತ ಕರೀಬೇಡಿ' ಅರಳು ಹುರಿದಂತೆ ನುಡಿದಳು. 'ಇನ್ಯಾರನ್ನ ಮಹೇಶ್ವರೀ ಅಂತ ಕರೀಲೇ?' ಗಾಬರಿಯಿಂದ ಕೇಳ್ದ.

'ಇಂಥ ಜೋಕ್ಸ್ ನನಗ್ಹಿಡಿಸೋಲ್ಲ, ಕರೀಬೇಡಿ ಅಂದ ನಂತ್ರ ಮುಗೀತು.'

‘ಇದೊಳ್ಳೆ ಕಥೆ ಆಯ್ತಲ್ಲೆ. ಅಲ್ವೆ...... ನಾನು ಹಾಗೆ ಕರೆದಕೂಡಲೇ ಜಿಂಕೆತರ ಓಡ್ಬರ್‍ತಿದ್ದೆ! ನಾನ್ಯಾವಾಗ್ಲೂ ಹಾಗೆs ಅಲ್ವೇನೆs ಕರೀತಿದ್ದದ್ದು. ಇವತ್ತೇನಾಯ್ತು ನಿಂಗೆ? ಅವಳು ಮಾತಾಡದೇ ಎದ್ದು ಹೋಗಿ ಅವನ ಮುಂದೆ ಕೆಲವು ಪತ್ರಗಳನ್ನೇ ತಂದಿಟ್ಟಳು.

‘ಈ ಲೆಟರ್‌ನಲ್ಲಿರೊ ಫರ್ಮ್ ಅಡ್ರೆಸ್ ನೋಡಿ’. ಅವನು ನೋಡಿದ.

ಒಂದು ಪತ್ರದಲ್ಲಿ ‘ಸೀರಾ’ ಅಂತ ಇತ್ತು.

‘ಇದೇನೇ ಅಸಪ್ಯ ಹೇನು, ಸೀರು ಅಂತೆಲ್ಲ.... ಛೇ ಯಾರೇ ಇದು?’

‘ನಮಗಷ್ಟು ಗೊತ್ತಾಗಲಿಲ್ವ. ಸೀತಾ ಬರಿದಿದ್ದಾಳೆ. ಅವಳ ಗಂಡ ರಾಮಚಂದ್ರ ಅಂತ. ಅವಳಿಗೂ ಉದ್ದದ ಹೆಸರು ಇಷ್ಟ ಇಲ್ಲ. ಅವನ ಹೆಸರಿನೊಂದಿಗೆ ತನ್ನ ಹೆಸರನ್ನ ಎಷ್ಟು ಚೆನ್ನಾಗಿ ಹೊಂದಿಸಿದ್ದಾಳೆ ನೋಡಿ ಸೀರಾ.... ಎಷ್ಟು ಮಾಡ್ ಆಗಿದೆ’ ಅಂದ್ಲು.

‘ಅದ್ಸರೀ..... ಈ ಪ್ರಶ್ನೆ ಯಾಕೆ?’ ಅಂದ. ‘ಅದಾ.... ಎಂದು ನಾನೇ ಊಹಿಸಲಿ ಅಂತ ಈ ಪತ್ರ ನೋಡಿ’ ಎಂದು ಮತ್ತೊಂದು ಪತ್ರ ನೀಡಿದಳು. ನೋಡಿದ ‘ಲತ್ತ’ ಅಂತಿತ್ತು.

‘ಯಾರ್‍ಗೇ ಲತ್ತ, ನನ್ಗೇನೇ?’ ಅಂದ.

‘ಬುದ್ಧಿ ಓಡೋದು ನೋಡಿ.’ ಲಲಿತ ಶ್ರೀದತ್ತ ತನ್ನ ಮೊದಲಕ್ಷರ ಗಂಡನ ಮೊದಲಕ್ಷರ ಸರಿಯಾಗಿ ಹೊಂದಲ್ಲ ಅಂತ ಹೀಗೆ ಮಾಡಿಕೊಂಡಿದ್ದಾಳೆ ಅಂದಳು.



'ಮೊದಲಕ್ಷರಗಳು ಹೊಂದದಿದ್ರೂ ಕೊನೇ ಎರಡು ಅಕ್ಷರಗಳು ಹೊಂದುತ್ವಲ್ವ 'ತತ್ತ' ಅಂತ. ಅದ್ಕೇತಾನೇ ಅವಳು ಪ್ರತಿ ತಿಂಗಳ ಮೊದಲ ದಿನ ಮಾಡೋದು ಅಂದ. 'ಇಂಥವೇ ನಿಮ್ಗೆ ಹೊಳ್ಯೋದು. ಆತ ಮೂರು ಹೊತ್ತೂ ಲಲ್ಲಾ, ಲಿಲ್ಲೀ, ಲುಲ್ಲೂ ಅಂತ ಅವಳ ಹಿಂದೇನೇ ಓಡಾಡ್ತಾನೆ. ನೀವೋ ಮಹೇಶ್ವರೀ, ಮಹೇಶ್ವರೀ... ಅಂತ ಅಮ್ಮನವರ ದೇವಸ್ಥಾನದಲ್ಲಿ ಅರ್ಚಕರು ಮಂತ್ರ ಹೇಳೋತರ ಹೇಳ್ತೀರಿ' ಸಿಟ್ಟಿನಿಂದ್ಲೇ ಹೇಳಿದ್ಲು.

'ಅಲ್ವೇ ಮುಂದೆ ಲಾಲೀ ಹಾಡಕ್ಕೆ ಅವನು ಈಗಿನಿಂದ ಅಭ್ಯಾಸ ಮಾಡ್ಕೊಳ್ತಿದ್ದಾನೆ. ಅದೂ ಅಲ್ದೆ ನಿನಗೆ ಹೆಸ್ರಿಟ್ಟಿದ್ದು ನಾನಲ್ವಲ್ಲೇ' ಅಂದ.

'ಎಲ್ಲಕ್ಕೂ ನಿಮಗೊಂದು ಉತ್ರ ಇರತ್ತೆ. ಮುಂದೆ ಈ ಪತ್ರ ನೋಡಿ' ಅಂದ್ಲು. 'ಶ್' ಅಂತಿತ್ತು... 'ಏನೇ ಶ್ ಅಂದ್ರೇನು ಹೇಳ್ಬಿಡು' ಅಂದ.

'ಇದು ಎಲ್ಲಕ್ಕಿಂತ ಮಾಡ್ ಇದ್ರು ಒಂದೇ ಅಕ್ಷರ. ಉಷ-ಶರತ್ ಸೇರಿ ಶ್! ಎಷ್ಟು ಚೆನ್ನಾಗಿದೆ.... ಅಂದ್ಲು. 'ಹುಶ್'.... ನಿಟ್ಟುಸಿರು ಬಿಟ್ಟ ಸದಾನಂದ... ನಿನ್ನ ಚಿಂತೆಗೆ ಕಾರಣ ಇದಾ! ಹೋಗಲೀ ಬಿಡು. ನಿನ್ಮಗಳಿಗೆ ಒಳ್ಳೆ ಹೆಸ್ರು ಈಗ್ಲೇ ಹುಡುಕೋಣ ಅಂದ. ಅದೆಲ್ಲ ಬೇಕಾಗಿಲ್ಲ. ನಾನೀಗ ದೊಡ್ಡ ಬರಹಗಾರ್ತಿ ಆಗಬೇಕು. ಕರ್ನಾಟಕದ ಮೂಲೆ ಮೂಲೆಯಲ್ಲೂ ನನ್ನ ಹೆಸ್ರು ನಲಿದಾಡ ಬೇಕು. ಹೆಸರು ನೋಡೇನೇ ನನ್ನ ಲೇಖನ ಪ್ರಿಂಟಾಗಬೇಕು. ವಿದೇಶದವರಿಗೆ ಸಹ ನನ್ನ ಹೆಸ್ರು ಸುಲಭವಾಗಿ ಹೇಳಕ್ಕೆ ಸಾಧ್ಯ ಆಗಬೇಕು......

ಅವಳು ಹೇಳ್ತಿರುವಂತೆಯೇ.... ನಿಲ್ಲು ನಿಲ್ಲು ಅಂದ ಸದಾನಂದ. 'ಅಲ್ವೆ.... ನಿನ್ನ ಲೇಖನ ಚೆನ್ನಾಗಿದ್ರೆ ತಾನೇ ಹೆಸರು, ಮುಖ ನೋಡೋದು. ಹೆಸ್ರಿಂದೇನು ಭಾಗ್ಯ ಬರುತ್ತೆ'

'ಅದೆಲ್ಲ ನನಗೊತ್ತಿಲ್ಲ. ಮಹೇಶ್ವರೀ ಮಾತ್ರ ನನಗೆ ಬೇಡ'

'ನಿನಗೆ ನನ್ನ ಹೆಸ್ರನ್ನೇ ಸೇರಿಸ್ಕೋಬೇಕು ಅಂತ ಆಸೆ ಇದ್ರೇ.... ಮಹೇಶ್ವರೀ ಸದಾನಂದ ಅಂತ ಅಚ್ಚುಕಟ್ಟಾಗಿ ಬರಿ.'

'ಒಳ್ಳೇ ರೈಲ್ವೆ ಕಂಪಾರ್ಟ್‌ಮೆಂಟ್ ತರ ಇರುತ್ತೆ.'

'ಅದೆಲ್ಲ ಇರ್ಲೀ, ನೀನು ನಿನ್ನ ಹೆಸರಿಂದ ಮಾತ್ರ ಮುಂದೆ ಬರ್ಬೇಕು. ನನ್ನ ಹೆಸ್ರಿಂದ ಯಾಕೆ ಹೇಳು. ಹೀಗೆ ಗಂಡನ ಹೆಸರನ್ನ ಹೆಂಡ್ತಿ ತನ್ನ ಹೆಸರಿನ ಜತೆ ಸೇರ್ಸೋದು ಅತ್ಯಂತ ಹಳೇ ಕಾಲದ ಗೂಸ್ಲುಗಳು ಮಾಡೋ ಕೆಲ್ಸ. ಈಗ ನಿನ್ನ ಹೆಸರು ಮಾತ್ರ ಸಾಕು. ಅದೇ 'ಮಾಡ್' ಆಗಿದೆ, ಅವನು ತಿಳಿಹೇಳಲು ಯತ್ನಿಸಿದ.

'ನನಗೊತ್ತಿಲ್ಲ, ನನ್ನ ಸ್ನೇಹಿತೆಯರ ತರಾನೇ ನನಗೆ ಬೇಕು. ಅದಕ್ಕೆ ಸರಿಯಾಗಿ ಯೋಚ್ನೆ ಮಾಡಿ, ಅಂದು ಎದ್ದು ಹೋದ್ಲು.

ಅಂದಿನಿಂದ ಒಂದೇ ಕಿರುಕುಳ. ಮಹೇಶ್ವರೀ ಅಂತ ಕರೆದ ಕೂಡಲೇ ಸಿಡಿದು ಬೀಳ್ತಿದ್ಲು. ಅವಳನ್ನು ಕರೆಯೋದು ಹೇಗೆ ಅಂತಲೇ ತಿಳೀಲಿಲ್ಲ. 'ಮಹಾ... ಅಂದ್ರೇ ಏನ್ಮಹಾ... ಅಂತ ಮೂದಲಿಸ್ತೀರಾ ಅಂತಿದ್ಲು. ಮಹೀ... ಅಂದ್ರೇ 'ಶಿ' ಸೇರಿಸಿ ಜತೇಲಿ' ಅಂತಿದ್ಲು. 'ಈಶ್ವರೀ....' ಅನ್ನೋದು ಅವಳ ಸದ್ಯದ ಅವತಾರಕ್ಕೆ ಅನ್ವರ್ಥನಾಮ. ಆದರೆ ಅವನಿಗೆ ಕರೆಯಲು ಭಯ ಆಗ್ತಿತ್ತು. ಒಂದಿನ ಕೇಳಿದ್ಲು 'ನಿಮ್ಮಪ್ಪ ಅಮ್ಮ ನಿಮ್ಮನ್ನು ಏನಂತ ಕರೀತಿದ್ರು'.

'ಸದ್ದೂ, ಸದ್ದೂ....' ಅಂತ ಅಂದ.

'ಅದಕ್ಕೆ ನೀವು ಇಷ್ಟು ಮೌನಿ ಆಗಿದ್ದು ಅಂತ ಕಾಣುತ್ತೆ. ಗೆಳೆಯರು ಏನಂತ ಕರೀತಾರೆ?'

'ಸದಾ..... ಸದಾ.....' ಅಂತ ಪ್ರಾಮಾಣಿಕವಾಗಿ ಹೇಳ್ದ.

'ಉಳಿದವರು.' 'ಸದಾನಂದ....' ಅಂತ. ಗಂಟೆ ಗಟ್ಟಲೆ ಚರ್ಚೆ, ಏನೂ ಉಪಯೋಗ ಆಗಲಿಲ್ಲ. ಅವಳ ಸಿಟ್ಟು ಹಟ ಇಳಿಯಲಿಲ್ಲ.

'ರ್ರೀ....ನೀವು ನಮ್ಮಿಬ್ಬರ ಹೆಸ್ರು ಸೇರಿಸಿ ಮುದ್ದಾಗಿ ಎರಡಕ್ಷರದ ಒಂದು ಹೆಸ್ರು ಮಾಡದಿದ್ರೆ ನಾನು ನಿಂಜತೆ ಮಾತೇ ಆಡಲ್ಲ, ಅಂದ್ಲು.

'ನನ್ಹೆಸ್ರು ಯಾಕೇ ಕೆಡಿಸೀಯೆ, ನಿಂದನ್ನ ಮಾತ್ರ ಕೆಡಿಸಿದ್ರೆ ಸಾಲ್ದೇ' ಅಂದ.

'ಕೆಡ್ಸೋದೇನ್ರೀ ಬಂತು. ಅಷ್ಟು ಚೆನ್ನಾಗಿ ಮಾಡ್ ಆಗಿರೋಕೇ ಸಹ ಯೋಗ್ಯತೆ ಬೇಕು.'

'ಅಲ್ವೆ.... ನಮ್ಮ ಇಬ್ಬರ ಹೆಸ್ರು ಸೇರಿಸಬೇಕಂದ್ರೆ 'ಮಮಸ' ಅಥವಾ 'ಮದ' ಅಂತಾಗುತ್ತೆ. ಅದೇನು ಚೆನ್ನಾಗಿದೆ?

'ಮಸ... ಆಹಾ .... ಎಷ್ಟು ಚೆನ್ನಾಗಿದೆ. ಇದೇ ಇರಲಿ! ಅಂದು ಬಿಟ್ಲು. ಸದಾನಂದನಿಗೆ ದಿಕ್ಕೇ ತೋಚಲಿಲ್ಲ. ನೋಡು 'ಮಸ'ನ ಇಂಗ್ಲಿಷನಲ್ಲಿ ಬರೆದಾಗ ಮೊಸ ಅಂತ ಓದೋ ಸಂಭವ ಇದೆ. ಆಗ.... ಅದು ಮೊಸ, ಹಳತು ಅಂತ ಅರ್ಥ ಬರುತ್ತೆ. ನಿನ್ನ ಗೆಳ್ತೀರದಕ್ಕಿಂತ ನಿನ್ನದು ಚೆನ್ನಾಗಿರ ಬೇಕು ಅಲ್ಲ? ಅಂಗ.

ಅವಳೂ ಸ್ವಲ್ಪ ಯೋಚಿಸಿ ಹೌದು....? ಅಂದಳು.

'ಅದಕ್ಕೇ ನನ್ನ ಹೆಸರಿನ ತಂಟೆಗೆ ಬರಬೇಡ. ನಿನ್ನ ಹೆಸ್ರನ್ನು ಮಾತ್ರ ಮೊಟಕು ಮಾಡೋಣ' ಅಂದ.

'ಸರೀ' ಅಂದ್ಲು ವಿಧಿ ಇಲ್ದೆ.

ಅವಳ ಹೆಸರನ್ನು ಬಿಡಿಸುವ ಕಾರ್ಯ ಪ್ರಾರಂಭ ಆಯ್ತು.

'ನಿನ್ನ ಪೂರ್ತಿ ಹೆಸರು ಹೇಳು'

'ದಿನಾ ಸಾವಿರ ಸಲ ಕರೀತೀರಲ್ಲ.... ಮಹೇಶ್ವರೀ ಅಂತ, ಅದೇ ಅಂದ್ಲು'.

'ಹಾಗಲ್ಲ... ನಿನ್ನ ಇನಿಶಿಯಲ್ ಸಹಿತ ಬೇಕು'

'ಕೆ.ಕೆ. ಮಹೇಶ್ವರೀ'

'ಅಂದ್ರೇ ನೀನು ಕೆ.ಕೆ ಮಹೇಶ್ವರೀ. ಒಳ್ಳೆ ಮಜವಾಗಿದೆ' ಅಂದ.

'ನೀವೇನೂ ಚುಡಾಯಿಸಬೇಕಾಗಿಲ್ಲ. ನಿಮ್ಮ ಬುದ್ಧಿವಂತಿಕೆ ಇರೋದು ಅದನ್ನೇ ಎಷ್ಟು ಸುಂದರವಾಗಿ ಜನತೆ ಮುಂದೆ ಇಡಬಲ್ಲಿರಿ ಅನ್ನೋದ್ರಲ್ಲಿ'



'ಸ್ಸರೀ...' ಸ್ವಲ್ಪ ಯೋಚಿಸಿ ಹೇಳ್ದ, ನಿನ್ನ ಹೆಸರಿನ ಮೊದಲ ಮತ್ತು ಕೊನೇ ಅಕ್ಷರದ ಜತೆ ಇನಿಶಿಯಲ್ಸ್,

'ಅಂದ್ರೆ'? ಅಂದ್ಳು ಅರ್ಥವಾಗದೇ.

''ಕೇ ಕೇ ಮೆರೀ' ಅಂದ್ರೆ 'ಬೇಡ' ಛೇ ಅಂದ್ಳು.

'ಅಲ್ವೇ.... ಸುಮ್ನೆ ಮೆರೀ ಅಂದ್ರೆ,

'ಜನ ನನ್ನ ಮರ್ತು ಬಿಡ್ತಾರೆ ಅಷ್ಟೆ ಅಂದ್ಳು.

ಸದಾನಂದ ತಲೆ ಓಡಿಸಿಯೇ ಓಡಿಸಿದ. ಬೆಳಿಗ್ಗೆ ಸಂಜೆ, ದಿನ ರಾತ್ರಿ ಒಂದೇ ಕೆಲಸ. ಕೊನೆಗೆ ಕೇ ಕೇ ಅಂದ್ರೇನೇ ಅಂದ.

'ಮತ್ತೇನು ಕೇ ಕೇ ಹಾಕಿ ನಗೋದು' ಅಂತ.

'ಹಾಗಲ್ವೇ ಕೆ. ಕೆ. ಅಂದ್ರೇನು ಅಂದ'

' ಕಾರವಾರದ ಕರಿಯಪ್ಪ ಅಂತ' ಅಂದಳು.

'ಓಹೋ.... ಹಾಗಾದ್ರೇ ನೀನು ಕಾ.ಕ.ಮಹೇಶ್ವರೀ'

'ಹೌದು' ಅಂದ್ಳು.

'ಹಾಗಾದ್ರೇ ಅದು ಕೇ ಕೇ ಮೆರೀ ಆಗಲ್ಲ. ಕಾಕ ಮೆರೀ'

'ರ್ರೀ.... ಕಾಗೇ, ಗೂಬೆ ಅಂತೆಲ್ಲ ಹೇಳಕ್ಕಲ್ಲ ನಿಮಗೆ ಹೇಳಿದ್ದು. ಹೆಸ್ರು ಹುಡುಕೋಕೆ ಅಂದು ದುಸು ದುಸು ಮಾಡ್ತ ಎದ್ದೇ ಹೋದ್ಳು.

'ಒಂದ್ಗಲ ಕಾಫಿ ಮಾಡ್ಕೊಂಬಾ, ಏನಾದ್ರೂ ಹೊಳೆಯುತ್ತ ಅಂದ ಸದಾನಂದ. ಕಾಫಿ ಬಂತು, ಕಾಫಿ ಕುಡೀತಾ ಒಂದು ಐಡಿಯಾ ಅಂದ'.

'ಏನು ?

'ಕಾರವಾರ ಮರ್ತು ಬಿಡು ಕರಿಯಪ್ಪನ ಮಗಳು ಮಹೇಶ್ವರೀ ಅಂತ ಮಾಡ್ಕೋ' ಅಂದ.

ಅವಳಲ್ಲಿ ಸ್ವಲ್ಪ ಉತ್ಸಾಹ ಬಂತು.... ಹೌದುರಿ... ಕಮೆ ಅಂದ್ರೇ ಯಾರಿಗೆ ಅರ್ಥನೇ ಆಗಲ್ಲ, ವಿಶೇಷವಾಗೂ ಇರುತ್ತೆ. ಮತ್ತೆ ಕಷ್ಟನೇ ಆಗಲ್ಲ ಅನ್ಕೋತಾ, ಸ್ವಲ್ಪ ಯೋಚಿಸಿ... ಆದ್ರೆ ಇಂಗ್ಲಿಷಲ್ಲಿ ಬರೆದಾಗ ಕಮೆ ಬೇರೆ ತರ ಓದೋ ಹಾಗಾಗುತ್ತೆ...ಬೇಡಪ್ಪ ಅಂದ್ಳು ಮುಖ ಬಾಡಿಸಿ. ಇಬ್ರೂ ಸ್ವಲ್ಪ ಹೊತ್ತು ಸುಮ್ನೆ ಕೂತಿದ್ರು.

ಯುರೇಕಾ! ಅಂದ ಸದಾನಂದ. ಏನು ಎಂಬಂತೆ ನೋಡಿದಳು.

'ಕನ್ನಡ ಕಸ್ತೂರಿ ಅಂತ ಹೇಳೋದು ಸುಳ್ಳಲ್ಲ ಕಣೆ ಅಂದ. ಅವಳು ಪ್ರಶ್ನಾರ್ಥಕ ಚಿಹ್ನೆಯಿಂದ ನೋಡ್ತಾನೇ ಇದ್ಳು.

'ಕನ್ನಡದಲ್ಲಿ ಮ ಗೆ ಬದಲಾಗಿ ೦ ಹಾಕಿ ಮ ಉದ್ಗಾರ ಕೊಡೋ ಹಾಗೆ ಮಾಡಲ್ವೇನೆ ಅಂದ. ಅಂದ್ರೆ? ಅರ್ಥ ಆಗಲಿಲ್ಲ ಎಂಬಂತೆ ಕೇಳಿದಳು.

'ಇಲ್ಲಿ ಕೇಳು ಸಮಬಳ ಸಂಬಳ ಕಮೆಬಳಿ ಕಂಬಳಿ.... ಹೌದು ಏನೇ?

'ಹೌದು' ಇನ್ನು ಅದೇ ಆಶ್ಚರ್ಯಭಾವ.

ಹಾಗೇ ಕಮೆ ಅನ್ನುವ ಬದಲು ಕಪಕ್ಕ ಸೊನ್ನೆ ಹಾಕಿ ಕಂ ಮಾಡು ಅಂದ. ಅವಳಿಗೆ ಬಂಪರ್ ಹೊಡೆದಷ್ಟು ಖುಷಿ ಆಯ್ತು 'ಹೌದೂರಿ ಎಂಥ ತಲೇರೀ ನಿಮ್ದು. ಕಂ...ಅಂದ್ರೇ ಒಂದೇ ಅಕ್ಷರದಲ್ಲಿ ಸಕಲಭಾಷೆಯವರಿಗೆ ತಿಳಿಯುವಂತೆ ನಮ್ಮಪ್ಪನ ಹೆಸರನ್ನು ಸೇರ್ಸಿ..... ಆಹಾ.... ಎಂದು ಆನಂದಿಸಿದಳು.

ಈಗಂತೂ ಸದಾನಂದ ಕರೆದರೆ ಕಂ ತಿಂಡೀ ಕಂ ಕಾಫಿ ಕಂ ಊಟ ಎನ್ನುತ್ತಾ ಹೆಂಡ್ತಿ ಜತೆ ಪದಾರ್ಥಗಳನ್ನು ಒಟ್ಟಿಗೆ ಕರೆದಂತಾಗುತ್ತೆ. ಅವನ ಆಫೀಸ್‌ನಲ್ಲಿ ಬಾಸ್ ಸದಾನಂದ ಕಂ ಹಿಯರ್... ಅಂದ್ರೇ ತನ್ನ ಹೆಸರಿನ ಜತೆ ಹೆಂಡ್ತಿ ಹೆಸರನ್ನು ಸೇರಿಸಿ ಕರೆದ ಅನುಭವ. ಎಲ್ಲಕ್ಕಿಂತ ಮಿಗಿಲಾಗಿ ಮಹೇಶ್ವರಿಯ ಹಂಬಲದಂತೆ ಅವಳು ಬರೆಯಲಿ ಬಿಡಲೀ, ಅವಳ ಲೇಖನ ಓದಲೀ ಓದದಿರಲೀ... ಕರ್ನಾಟಕದ ಜನತೆ ತಮ್ಮ ನಿತ್ಯದ ಮಾತಿನಲ್ಲಿ 'ಕಮ್ಮಿ' ಎಂದೂ ಅನೇಕ ಸಲ ಅರಿವಿಲ್ಲದೆಯೇ ಅವಳ ಹೆಸರನ್ನೇ ಹೇಳ್ತಿರ್ತಾರೆ. ಮಹೇಶ್ವರೀ ಮಾತ್ರ ಈಗ ತನ್ನ ಹೆಸರನ್ನ ಇಂಗ್ಲಿಷನಲ್ಲಿ ಕಂ ಅಂತ ಬರೆಯೋದಾ ಕಮು ಅಂತ ಬರೆಯೋದಾ ಅಂತ ತಲೆಕೆಡಿಸಿಕೊಳ್ತಿದ್ದಾಳೆ. ಅದು ನಿರ್ಧಾರವಾದ್ಮ ನಂತರ ಅವಳ ಲೇಖನ ತಯಾರಾಗಬಹುದು. ●



**ಸಸ್ಯ ಲೋಕ**

# ಪ್ರಕೃತಿಯ ವರದಾನ

# ಕೇಸರಿ

● ಎಚ್.ಸಿ. ಲಕ್ಷ್ಮಣ
(ಕೃಪೆ: 'ಸ್ಪೈಸ್ ಇಂಡಿಯ')

ಪರಿಮಳ ಯುಕ್ತವಾದ ಕೇಸರಿ ಹೂ ಪ್ರಣಯಕ್ಕೆ ಸಂಕೇತವಾಗಿದೆ. ತುಂಬಾ ಹಳೆಯ ಇತಿಹಾಸವಿರುವ ಈ ಸಂಬಾರ ಪದಾರ್ಥವು ಬಹಳ ಬೆಲೆಯುಳ್ಳದ್ದು. ಬಡವರಿಗೆ ಕಿರಿಕಿರಿಯಾಗಿ ಬೇಡವಾದರೂ ಶ್ರೀಮಂತರಿಗೆ ಇದು ಸಿರಿ ತರುವ ಬೆಳೆ. ಇತರ ಸಂಬಾರ ದಿನಸಿನಂತೆ ಇದರ ಉಪಯೋಗ ಹಲವಾರು.

ಬೇಸಿಗೆಯ ನಂತರದ ಮೊದಲನೇ ಮಳೆಹನಿ ಭೂಮಿಯೊಳಕ್ಕೆ ಇಂಗಿದ ಒಂದೆರಡು ದಿನಗಳಲ್ಲಿ ನೆಲದೊಳಗಿನ ಗಡ್ಡೆಯಿಂದ ಮೇಲೆಳುವ ಮೊಳಕೆ ೪-೬ ತಿಂಗಳಲ್ಲಿ ಚಿಗುರಿ ಎಲೆಬಿಟ್ಟು ಮೊಗ್ಗು ಹೂಗಳ ಈ ಸೌಂದರ್ಯ, ಪ್ರಾಯಕ್ಕೆ ಬಂದ ಸುಂದರ ಯುವತಿಯಂತೆ ಕಂಡು ನಿಸರ್ಗದಲ್ಲಿ ಮರು ಜನ್ಮ ಪಡೆಯುವುದು ನೋಡಲು ಮನೋಹರವಾದ ದೃಶ್ಯ. ಆದುದರಿಂದಲೇ ಅತ್ಯಂತ ಪರಿಮಳಭರಿತ ಕೇಸರಿ ಹೂ ಪ್ರಣಯಕ್ಕೆ ಸಂಕೇತವಾಗಿದೆ.

ಈ ಸಸ್ಯವು ಏಕದಳ ಗುಂಪಿಗೆ ಸೇರಿದ್ದು ಐರಿಡೇಸಿ ಕುಟುಂಬಕ್ಕೆ ಸೇರಿದೆ. ಇದರ ವೈಜ್ಞಾನಿಕ ಹೆಸರು ಕ್ರೊಕಸ್ ಸಟೈವ್ಸ್ ೨೩-೫೨ ಸೆಂ.ಮೀ. ಎತ್ತರ ಬೆಳೆಯಬಲ್ಲದು. ಸಸ್ಯದ ಎಲೆ ಹುಲ್ಲಿನ ಎಲೆಯಂತೆ, ಕಾಂಡ ಕಿತ್ತಳೆ ಬಣ್ಣದ್ದು. ಸಾಮಾನ್ಯವಾಗಿ ಗಿಡದಲ್ಲಿ ಹೂವುಗಳು ಅಕ್ಟೋಬರ್-ನವಂಬರ್ ಅವಧಿಯಲ್ಲಿ ಕಾಣಿಸಿಕೊಳ್ಳುತ್ತವೆ. ಅಂಡಾಶಯ ಪರಾಗಸ್ಪರ್ಶ ಶಲಾಕೆ (ಸ್ಟೈಲ್)ಗಳೇ ಕೇಸರಿ. ಹಗಲು ಬಿಸಿಲು ತೀವ್ರವಾಗುವ ಮೊದಲೇ ಮುಂಜಾನೆ ಹೂವನ್ನು ಬೆರಳುಗಳಲ್ಲಿ ಮೃದುವಾಗಿ ಹಿಡಿದು ಅದರ ದಳಗಳನ್ನು ತೋರು ಬೆರಳುಗಳಿಂದ ಬೇರ್ಪಡಿಸಿ, ಶಲಾಕೆಗಳನ್ನು ಮಾತ್ರ ಆರಿಸಿಕೊಳ್ಳುವುದು ಶ್ರಮದಾಯಕ ಕೆಲಸ. ಒಂದು ಹೂವಿನಲ್ಲಿ ಸಿಗುವುದು ಒಂದೇ ಶಲಾಕೆ. ೨೮.೩೫ ಗ್ರಾಂ. (ಒಂದು ಔನ್ಸು) ಶಲಾಕೆಗಳನ್ನು ಶೇಖರಿಸುವುದಕ್ಕೆ ಸುಮಾರು ೪೦೦೦-೪೫೦೦ ಹೂವುಗಳು ಬೇಕಾಗುತ್ತವೆ. ವೈಜ್ಞಾನಿಕವಾಗಿ ಅಥವಾ ಕೃತಕವಾಗಿ ಒಣಗಿಸಿದ ಶಲಾಕೆಗಳೇ ನಮಗೆ ಪೇಟೆಯಲ್ಲಿ ದೊರೆಯುವ ಕೇಸರಿ. ಇದನ್ನು ಕೇಶರ, ಕೇಶರಿ, ಸಾಫರಾನೆಂದು ಕರೆಯುವುದುಂಟು.

ಕೇಸರಿಯ ಹುಟ್ಟೂರು ಕಾಶ್ಮೀರ. ಇಲ್ಲಿ ಅನೇಕ ಶತಮಾನಗಳಿಂದಲೂ ಕೃಷಿಯಲ್ಲಿದೆ. ಈಗ ಜಮ್ಮು ಮತ್ತು ಕಾಶ್ಮೀರ ಕಣಿವೆಯ ಕಿಸ್ವಾರ್ ಮತ್ತು ಪಾಂಪೂರ್ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಬೆಳೆಯಲಾಗುತ್ತಿದೆ. ಅಲ್ಲದೆ ಉತ್ತರ ಪ್ರದೇಶ ಮತ್ತು ಹಿಮಾಚಲ ಪ್ರದೇಶಗಳಲ್ಲಿ ಕೇಸರಿಯನ್ನು ಪ್ರಾಯೋಗಿಕವಾಗಿ ಬೆಳೆಯುತ್ತಿದ್ದರೂ ಹೆಚ್ಚು ಯಶಸ್ವಿಯಾಗಲಿಲ್ಲ. ಫಲವತ್ತಾದ ಒಂದು ಎಕರೆ ಹೊಲದಲ್ಲಿ ೩೪೮೦-೫೨೨೦ ಗ್ರಾಂ. ಕೇಸರಿ ಬೆಳೆಯಬಹುದು. ಬ್ರಿಟಿಷ್ ಸಂಶೋಧಕರ ಪ್ರಕಾರ ಕೇಸರಿಯ ತವರು ಮನೆ ಏಶಿಯಾ ಮೈನರ್ ಅಥವಾ ಗ್ರೀಕ್. ಮೊಟ್ಟ ಮೊದಲು ರೋಮನ್ನರು ಬ್ರಿಟನ್ನಿಗೆ ಪರಿಚಯಿಸಿದರು. ಅನಂತರ ಮಂಗೋಲಿಯರು ಬ್ರಿಟನ್‌ನಿಂದ ಚೈನಾ ದೇಶದಲ್ಲಿ ಕೊಂಡು ಹೋದರು.

ಒಂದು ಔನ್ಸ್ ಕೇಸರಿ (೨೮.೩೫ ಗ್ರಾಂ) ದುಬಾರಿ ಬೆಲೆಯುಳ್ಳದ್ದು. ಅದು ನಮ್ಮ ಕಾಲದಲ್ಲೂ ಅಳಿಸಿ ಹೋಗಿಲ್ಲ. ಕೇಸರಿಯ ಧಾರಣೆ ವಾಸಿಗೆ ಸಿರಿವಂತರೂ ಸರಿಬಾಗರು. ಪ್ರಪಂಚದ ಬೇರೆ ದೇಶಗಳಿಗೆ ಹೋಲಿಸಿದಾಗ ಶ್ರೇಷ್ಠ ಮಟ್ಟದ ಕೇಸರಿ ಬೆಳೆ ಇಂಗ್ಲೆಂಡ್, ಸ್ಕಾಟ್‌ಲ್ಯಾಂಡ್, ಐರ್‌ಲ್ಯಾಂಡ್, ಸಿರಿಯ, ಅರ್ಮೇನಿಯಾ ಮತ್ತು ಪರ್ಷಿಯಾ ಮೊದಲನೆಯ ಸ್ಥಾನದಲ್ಲಿವೆ. ಆದರೆ

ನಮ್ಮಲ್ಲಿ ಕಡೇ ಪಕ್ಷ ಅಪ್ಪಟ ಕೇಸರಿ ಸಿಗುವುದು ವಿರಳವೇ. ಹೀಗಾಗಿ ಕೆಲವು ಕಲಬೆರಕೆ ವಸ್ತುಗಳನ್ನು ಸೇರಿಸಿ ಪೇಟೆಯಲ್ಲಿ ಮಾರುತ್ತಾರೆ. ಉದಾ: ೩೦ ಶೇಕಡಾ ಬಣ್ಣ ಕಟ್ಟಿದ ಹತ್ತಿ ನೂಲು, ೩೦ ಶೇಕಡಾ ೫ ಸಮನಾದ ಬಣ್ಣ ಕಟ್ಟಿದ ತೆಂಗಿನನಾರು ಶೇಕಡಾ ೩ ಗುರುತು ಸಿಲುಕದ ಬೆರಕೆ ವಸ್ತುಗಳು, ಶೇಕಡಾ ೨ ಅಪ್ಪಟ ಕೇಸರಿ. ಕಲಬೆರಕೆ ಇಲ್ಲದ ಶುದ್ಧ ಕೇಸರಿಯನ್ನು ೧-೩ ವರ್ಷಗಳವರೆಗೆ ಕೆಡದಂತೆ ಇಡಬಹುದು. ೪-೫ ವರ್ಷ ತರುವಾಯ ತನ್ನ ಸ್ವಾದಿಷ್ಟ ಗುಣವನ್ನು ಕಳೆದುಕೊಳ್ಳುತ್ತದೆ.

ಮನುಷ್ಯ ಕೇಸರಿಯ ಉಪಯೋಗವನ್ನು ಕ್ರಿಸ್ತಪೂರ್ವ ೧೬೦೦ ಬಿ.ಸಿ. ರಿಂದಲೇ ಸವಿಯುತ್ತಾ ಬಂದಿದ್ದಾನೆ. ಹಿಂದು, ಬೌದ್ಧ ಮತ್ತು ಜೈನ ದೇವಾಲಯಗಳ ಪೂಜೆಯಲ್ಲಿ, ಸಿಹಿ ತಿಂಡಿಗಳಲ್ಲಿ, ಐಸ್‌ಕ್ರೀಂ ತಯಾರಿಕೆಯಲ್ಲಿ, ಮಸಾಲೆ ಹಾಲು ತಯಾರಿಕೆಗೆ, ಸುಗಂಧ ದ್ರವ್ಯಗಳಲ್ಲಿ, ತಂಪು ಪಾನೀಯಗಳಲ್ಲಿ, ಮದ್ಯಗಳಲ್ಲಿ, ಪಾನ್ ಬೀಡಾ ತಯಾರಿಕೆಯಲ್ಲಿ ಬಳಕೆಯಲ್ಲಿದೆ. ಕೇಸರಿ ಬಣ್ಣ ನೀರಿನಲ್ಲಿ ಸುಲಭವಾಗಿ ಕರಗುತ್ತದೆ. ಆದ್ದರಿಂದ ರೇಷ್ಮೆ ಅಥವಾ ಕೈಮಗ್ಗ ಬಟ್ಟೆಗಳ ತಯಾರಿಕೆಯಲ್ಲಿ ಉಪಯೋಗಿಸುವುದಿಲ್ಲ. ಯೂನಾನಿ ಮತ್ತು ಆಯುರ್ವೇದ ವೈದ್ಯಕೀಯ ಔಷಧಿಗಳ ತಯಾರಿಕೆಯಲ್ಲಿ ಬಳಸುವರು. ಕೇಸರಿಯಲ್ಲಿ ಪಕ್ರೊ-ಕ್ರೋಸಿನ್ ಮತ್ತು ಹೆಚ್ಚಿನಾಂಶವಿರುವ ವಿಟಮಿನ್ ಬಿ-೨ ಇರುವುದನ್ನೂ ವಿಜ್ಞಾನಿಗಳು ದೃಢಪಡಿಸಿದ್ದಾರೆ. ಈಗ ಇಂಗ್ಲೆಂಡಿನಲ್ಲಿ 'ಸಾಫರಾನ್' ಗುಳಿಗೆಗಳು ದೊರೆಯುತ್ತವೆ. ಸಿಹಿ ಮೂತ್ರ ಕಾಯಿಲೆಗೆ ತುಪ್ಪದಲ್ಲಿ ಬಳಸುವುದರಿಂದ ಕಾಯಿಲೆಯನ್ನು ಹತೋಟಿಯಲ್ಲಿಡಬಹುದು. ನಿಶ್ಶಕ್ತಿಯಿಂದ ಉತ್ತೇಜಕ ಪಡೆಯಲು ಪ್ರತಿದಿನ ಹಾಲಿನಲ್ಲಿ ೦.೦೪೨೫ ಗ್ರಾಂ. ಹೆಂಗಸರಿಗೆ ಮುಟ್ಟು ಆಗದಿರುವಾಗ ೦.೯೭೩-೨.೪೦ ಗ್ರಾಂ. ಗರ್ಭಾಶಯ ತೊಂದರೆಗಳಿಗೆ ೨.೪೦-೩ ಗ್ರಾಂ. ಕೇಸರಿ ಉಪಯುಕ್ತವಿದೆ. •

---

# ಚಳವಳಿಗಾರ ವಿನಾಯಕ!

ಆಗತಾನೆ ೧೯೪೨ರ ಚಲೇಜಾವ್ ಚಳವಳಿ ಸಾರಲಾಗಿತ್ತು. ಗಣೇಶ ಚೌತಿಯೂ ಸಮೀಪಿಸಿತ್ತು. ಲೋಕಮಾನ್ಯ ಟಿಳಕರು ಜನಜಾಗೃತಿಗಾಗಿ ಗಣೇಶನ ಆಶ್ರಯಪಡೆಯುತ್ತಿದ್ದುದರ ನೆನಪಾಯಿತು. ಸಿದ್ಧಿ ವಿನಾಯಕನ ಪೂಜೆಮಾಡಿ ಅವನಲ್ಲಿ ಶುಭವನ್ನು ಕೋರಿ ನಾನೂ ಚಳವಳಿಯಲ್ಲಿ ಭಾಗವಹಿಸಲು ನಿರ್ಧರಿಸಿದೆ. ಚೌತಿಯ ಮೊದಲನೇ ದಿವಸವೇ ಒಂದು ಸುಂದರವಾದ, ಎದ್ದು ನಿಂತು ಆಶೀರ್ವಾದ ಮಾಡುತ್ತಿದ್ದಾನೋ ಎಂಬಂಥ ಗಣೇಶನ ಮೂರ್ತಿಯನ್ನು ಕೊಂಡು ತಂದೆ. ಅದಕ್ಕೆ ಮಾಲೆಯನ್ನು ಹಾಕಿ, ಕೈಯಲ್ಲಿ ಒಂದು ರಾಷ್ಟ್ರಧ್ವಜವನ್ನು ಹಿಡಿದಿರುವನೊ ಎಂಬಂತೆ ಕಟ್ಟಿ, ಒಂದು ಕಡೆ 'ಬ್ರಿಟಿಷರೇ ಭಾರತದಿಂದ ತೊಲಗಿರಿ' ಎಂಬ ಪುಟ್ಟ ಫಲಕದೊಂದಿಗೆ ಸಜ್ಜುಗೊಳಿಸಿದೆ. ಚವತಿಯ ತೀರ ನಸುಕಿನಲ್ಲಿ ಯಾರಿಗೂ ಗೊತ್ತಾಗದಂತೆ ಧಾರವಾಡ ಗಾಂಧೀಚೌಕದ ದೀಪಸ್ತಂಭದ ಕಟ್ಟೆಯ ಮೇಲೆ ಅದನ್ನು ಸ್ಥಾಪಿಸಿ ಊದಿನ ಕಡ್ಡಿಗಳನ್ನು ಬೆಳಗಿ ಬಾಳೆಯ ಹಣ್ಣಿಗೆ ಚುಚ್ಚಿ ನಮಸ್ಕಾರಗಳನ್ನು ಸಲ್ಲಿಸಿ ಮನೆಗೆ ಹೋದೆ. ಬೆಳಗು ಹರಿಯುತ್ತಿದ್ದಂತೆ ಜನರು ಅದನ್ನು ಕುತೂಹಲದಿಂದ ನೋಡಿ ಹೋಗುತ್ತಿದ್ದರು. ಒಬ್ಬಿಬ್ಬ ಪೊಲೀಸರು ಹಣಿಕಿ ಹಾಕಿ ನೋಡಿದರು. ಅದನ್ನು ಎತ್ತಿಕೊಂಡು ಹೋಗಲು ಧೈರ್ಯ ಸಾಲದೆ ಕಚೇರಿಗೆ ಹೋದರು. ಸುಮಾರು ಎಂಟು ಗಂಟೆಯ ಸುಮಾರಿಗೆ ನಾಲ್ಕಾರು ಪೊಲೀಸರು ಬಂದು ಅದನ್ನು ಗೌರವಯುಕ್ತವಾಗಿ ತೆಗೆದುಕೊಂಡು ಹೋದರು. ನಾನು ಇದನ್ನೆಲ್ಲ ದೂರದಿಂದಲೇ ನಿರೀಕ್ಷಿಸುತ್ತ ಸಂತಸಪಡುತ್ತ ಇದ್ದೆ. ಮುಂದೆ ನಾನು ಗುಪ್ತವಾಗಿ ಹೋರಾಟದ ಸಮಾಚಾರದ ಕರಪತ್ರ ಮುದ್ರಣ ಕೆಲಸ ಆರಂಭಿಸಿದ್ದೆ. ಈ ಮೊದಲು ೩೦-೩೨ರ ಚಳವಳಿಯಲ್ಲಿ ಎರಡು ಸಲ ಜೇಲುವಾಸ ಮಾಡಿದ್ದು ಸರಕಾರಕ್ಕೆ ಗೊತ್ತಿದ್ದರಿಂದಲೋ ಏನೋ ಸಂಶಯದ ಮೇಲೆ ಸೆರೆ ಹಿಡಿದು ಅಕ್ಟೋಬರ್ ೨ ರಂದು ನನ್ನನ್ನು ಹಿಂಡಲಿಗಿ ಸೆರೆಮನೆಗೆ ಅಟ್ಟಿದರು. ಒಂಬತ್ತು ತಿಂಗಳು ಜೇಲುವಾಸ ಮಾಡಿಬಂದೆ. ಮುಂದೆ ನನ್ನ ಮುದ್ರಣ ಹಾಗೂ ಪುಸ್ತಕ ಪ್ರಕಾಶನ ಕಾರ್ಯ ಮೊದಲಿಗಿಂತಲೂ ಸುಗಮವಾಗಿ ಸಾಗಿ ಗೌರವದ ಬಾಳನ್ನು ಸಾಗಿಸುವಂತಾದದ್ದೂ ಆ ಸಿದ್ಧಿ ವಿನಾಯಕನ ಅನುಗ್ರಹವೆಂದೇ ಭಾವಿಸಿದ್ದೇನೆ.

• ಭಾಲಚಂದ್ರ ಘಾಣೇಕರ

# ಸಂಜೆ ಮೊಗದ ಮುತ್ತು

ರಂಗೋಲಿ ತುಟಿಯವಳ ದನಿ ಬಿರಿಯುವುದಿಲ್ಲ
ದಾರಿಯಲ್ಲಿ ದಿಕ್ಕೆಟ್ಟು ನಿಂತು ನಡೆದುದು ನೆನಪು
ಯಕ್ಷಯಕ್ಷಿಯರಿಗೆ ಕಾಳಿದಾಸನು ಬರೆದು
ಮೇಘಗಳು ಮೈತುಂಬಿ ಮೆತ್ತೆಯರಳಿನ ಓಟ
ಎದೆಯ ಕಸಿವಿಸಿಯೊರೆವ ಕೈಗಳಿಲ್ಲ.

ನಗುವುದೇ ಬೇಡ ಬಯಕೆ ಸಾಯುವ ಸಂಜೆ
ಬೆರಳು ಮಿಡಿಯುವುದಿಲ್ಲ ಬೆನ್ನ ನೆರಳ
ಬೆಂದಿರುವ ಭಾವಗಳು ಮತ್ತೆ ಬಾಡುವುದಿಲ್ಲ
ಅವರಿವರು ನಕ್ಕಂತೆ ಮುಗಿಲ ಸರಿಸಿ.

ಏನೋ ತಲ್ಲಣ ತುಡಿತ ತೊಡರಿಟ್ಟು ತಲೆ ತುಂಬ
ತೂಕಡಿಸದಿರು ಮನವೆ ಮೂರ ಬರುವ
ಎದೆಯ ಹಸಿರಾಗಿಸುವ ಶಿಶಿರ ಅರಳಿ
ಮಲ್ಲಿಗೆ ಹೂವ, ಹೃದಯ ಮಾರಲೂ ಬಹುದು ಕಳಚಿತೊಟ್ಟ

ಮುಗಿಲಿನಲಿ ಕಪ್ಪಿರುಳು ಸಂಜ್ಞೆ ಸಂವಾದಗಳಲಿ
ಸಂವಹನ ಸಾಧ್ಯವದು ಕಣ್ಣೀರು
ಕಡಲ ಕುದಿ ಕುದಿ ಕಂಡು ಹತ್ತಿರ ಬಂದು
ಬದುಕಲಾರ್ದ್ರವ ತಂಪು ಒತ್ತಿ ಹಣೆಯ ತುಂಬ
ಸಂಜೆ ಮೊಗದವಳದ ಒಂದು ಮುತ್ತು!

"ಸಂಜೆ ಮರ ಹುಡುಕುತ್ತ ಹಕ್ಕಿ ಹಾರಿದವೀಗ
ಗೂಡು ಸೇರುವ ತವಕ ಮತ್ತೆ ಮೂಡಲು ಬಹುದು
ಅಲ್ಲಿ ನೇಸರನ ಕಿರಣ, ಚಂದಿರನು ಆತನಕ ರಾಜನಂತೆ!
ಚಿಕ್ಕೆಗಳನೆಣಿಸಿಬಿಡು" ಹೊಸ ಹರುಷ ಕಾವ್ಯದೊಲುಮೆ
ಅವಳ ಜೀರ್ಣ ಮೊಗದಲ್ಲಿ ಬದುಕ ಕಂಡೆ.
ಈಗ-
ಸಂಜೆ ಮೊಗದವಳ ಮಡಿಲಲ್ಲಿ
ಬೇರಿಟ್ಟು ಬದುಕಲುಬಹುದು ಮತ್ತಷ್ಟು
ವರ್ಷ.....

• ಕೆ. ಆರ್. ಆನಂದ್

## ನೆನಪು ನೆರಳಿನಲ್ಲಿ

೩೦ಗಳ ಜನಸು ತರಲು ಅಂಗಡಿಗೆ ಹೋಗಿದ್ದೆ. ಅಗರಬತ್ತಿ ಪೊಟ್ಟಣದ ಒಳಗೆ ಧನ ಲಕ್ಷ್ಮಿಯ ಫೋಟೋ ನೋಡಿ ಬಹಳ ಆನಂದಿತ ನಾದೆ. ಆ ದಿನ ಶುಕ್ರವಾರ. ಕೂಡಲೇ ಫೋಟೋಗೆ ಕಟ್ಟು ಹಾಕಿಸಿ, ಮಾಲೆ ಹಾಕಿ ಗೋಡೆಗೆ ತೂಗು ಹಾಕಿದೆ.

ಮಡದಿ, "ರೀ, ಈ ಅಗರಬತ್ತಿ ಪೊಟ್ಟಣ ತೆಗೆದುಕೊಂಡಾಗ ನಮಗೆ ಅಷ್ಟಲಕ್ಷ್ಮಿ ಫೋಟೋ ಸಿಕ್ಕಿದರೆ ಏನೋ ಬಹುಮಾನ ಕೊಡುತ್ತಾರಂತೆ," ಎಂದು ಹೇಳಿದಾಗ ಆಸೆ ಕುದುರಿ, ಒಂದೊಂದೇ ಪೊಟ್ಟಣವನ್ನು ಕ್ರಯಕ್ಕೆ ಪಡೆದೆ. ಒಂದರೊಳಗೂ ಫೋಟೋ ಇಲ್ಲ. ಈಗ ಆಸೆಗೆ ದುರಾಸೆ ಸೇರಿ ಹಠವೂ ಆರಂಭವಾಗಿತ್ತು. ಬೇರೆ ಬೇರೆ ಬಡಾವ ಣೆಗೆ ಹೋಗಿ ಡಜನ್‌ಗಟ್ಟಲೆ ಅಗರಬತ್ತಿ ಪೊಟ್ಟಣ ಖರೀದಿಸಿದೆ. ಹುಚ್ಚು ಹಟಕ್ಕೆ ಬಿದ್ದು ೨೦೦-೮೦೦ ಪೊಟ್ಟಣ ತೆಗೆದುಕೊಂಡೆ. ಯಾವುದರಲ್ಲೂ ನನಗೆ ಬೇಕಾದ ಪೊಟ್ಟಣ ಸಿಗಲಿಲ್ಲ- ಒಂದು ರೂಮಿನ ತುಂಬಾ ಅಗರಬತ್ತಿ ಪೊಟ್ಟಣಗಳು ತುಂಬಿದವು.

ಕೊನೆಗೆ ಒಂದು ದಿನ ನನಗೆ ಬೇಕಾದ "ಅಷ್ಟ ಲಕ್ಷ್ಮಿ" ಫೋಟೋ ಸಿಕ್ಕಿತು. ಸ್ವರ್ಗಕ್ಕೆ ಮೂರೇ ಗೇಣು! ಜನಸಿ ಅಂಗಡಿಗೆ ಹೋಗಿ ಬಹುಮಾನ ಬಗ್ಗೆ ಕೇಳಿದೆ. "ಶೋ ರೂಮಿಗೆ ಹೋಗಿ" ಅಂದರು- ಅಲ್ಲಿಗೆ ಹೋದರೆ "ಮುಖ್ಯ ಆಫೀಸಿಗೆ ಹೋಗಿ" ಅಂದರು. ಅಲ್ಲಿಂದ ಗೋಡೌನಿಗೆ ಹೋದೆ ಕೊನೆಗೂ ಬಹುಮಾನ ಸಿಕ್ಕಿತು- ಏನು ಅಂತಿರಾ? ಅಗರಬತ್ತಿಗಳ ೧೦೦೦ ಪೊಟ್ಟಣ!!

• **ಮೋಹನ್ ಆರ್. ಭಟ್**

ನನ್ನ ಮಿತ್ರರೊಬ್ಬರ ಎರಡು ವರ್ಷದ ಮಗ ನಿಗೆ ಹೃದಯದ ಬಡಿತ ಸರಿಯಾಗಿರದ್ದರಿಂದ ಕೂಡಲೇ ಶಸ್ತ್ರ ಚಿಕಿತ್ಸೆ ಮಾಡಿಸಬೇಕಿತ್ತು. ನನ್ನ ಮಿತ್ರರು ಬಹಳೇ ಚಿಂತಾಕ್ರಾಂತರಾದರು. ಏಕೆಂ ದರೆ ಅವನು ಅವರಿಗೆ ಹಿರಿಯ ಮಗ. ಹಾಗೂ ಇಷ್ಟು ಚಿಕ್ಕ ವಯಸ್ಸಿನಲ್ಲಿ ಹೃದಯದ ಶಸ್ತ್ರ ಚಿಕಿತ್ಸೆ ಎಂದರೆ ಯಾವ ತಂದೆಗೆ ತಾನೇ ಗಾಬರಿಯಾಗ ಲಿಕ್ಕಿಲ್ಲ? ಆದರೂ ಅವರು ದೇವರ ಮೇಲೆ ಭಾರ ಹಾಕಿ ಧೈರ್ಯ ತಂದುಕೊಂಡು ಮುಂಬಯಿಯ ಕೆ.ಈ.ಎಂ. ಆಸ್ಪತ್ರೆಗೆ ಹೋದರು. ಡಾ. ಸುರೇಶ ಜೋಶಿ ಅಲ್ಲಿಯ ಹೆಸರಾಂತ ಶಸ್ತ್ರ ವೈದ್ಯರು.

ಆಸ್ಪತ್ರೆಯ ನಿಯಮದಂತೆ ಪೂರ್ವಭಾವೀ ತಪಾಸಣೆಗಳಾದನಂತರ ಶಸ್ತ್ರ ಚಿಕಿತ್ಸೆಯ ದಿನ ದಂದು ನನ್ನ ಮಿತ್ರನ ಒಪ್ಪಿಗೆ ಪತ್ರ ಪಡೆದು ರೋಗಿಯನ್ನು ಶಸ್ತ್ರಚಿಕಿತ್ಸಾಲಯಕ್ಕೆ ಕರೆದೊಯ್ದರು. ಹಾಗೂ ಸಂಬಂಧಿಕರೆಲ್ಲರಿಗೂ ಆಸ್ಪತ್ರೆಯ ಹೊರ ವಲಯದಲ್ಲಿರಲು ಹೇಳಿದರು. ನನ್ನ ಮಿತ್ರರು ಮನಸ್ಸಿನಲ್ಲಿಯೇ ದೇವರನ್ನು ಪ್ರಾರ್ಥಿಸುತ್ತ ಆಸ್ಪ ತ್ರೆಯ ಹೊರಗೆ ಬಂದು ಮರಳಿನಲ್ಲಿ ಕುಳಿತುಕೊಂ ಡರು. ಮನಸ್ಸಿನಲ್ಲಿ ಎಷ್ಟೇ ಧೈರ್ಯ ತಂದುಕೊಂ ಡರೂ ಶಸ್ತ್ರಚಿಕಿತ್ಸೆ ಯಶಸ್ವಿಯಾಗುವುದೋ ಹೇಗೆ? ಎಂಬ ಚಿಂತೆ ಅವರನ್ನು ಕಾಡುತ್ತಿತ್ತು. ಇದೇ ವಿಚಾರದಲ್ಲಿ ಮಗ್ನರಾಗಿ ಅವರು ಮರಳನ್ನು ತಮ್ಮ ಬೆರಳಿನಿಂದ ಕೆದಕಿದಾಗ ಸಿಗರೇಟು ಪಾಕೀಟಿನ ಮಡಿಚಿದ ಒಂದು ತುಂಡು ಅವರ ಕೈಗೆ ಸಿಕ್ಕಿತು. ಅದನ್ನು ನನ್ನ ಮಿತ್ರರು ಸಹಜವಾಗಿಯೇ ತೆರೆದು ನೋಡಿದಾಗ ಅದರಲ್ಲಿ "ಪಾಂಡುರಂಗ ವಿಠ್ಠಲ" ಎಂದು ಬರೆಯಲಾಗಿತ್ತು. ಅದನ್ನು ಓದಿದಾಕ್ಷಣ ನನ್ನ ಮಿತ್ರರಿಗೆ ವಿದ್ಯುತ್ ಸಂಚಾರವಾದಂತಾಗಿ ಮರುಕ್ಷಣ ಎಲ್ಲಿಲ್ಲದ ಧೈರ್ಯ ಬಂದುಬಿಟ್ಟಿತು. ತತ್‌ಕ್ಷಣವೇ ಅವರು ಪಾಂಡುರಂಗ ವಿಠ್ಠಲನನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸಿ ಶಸ್ತ್ರ ಚಿಕಿತ್ಸೆಯು ಯಶಸ್ವಿಯಾಗಲೆಂದೂ ನಿನ್ನ ದರ್ಶನಕ್ಕೆ ಬರುವೆ ನೆಂದೂ ಬೇಡಿಕೊಂಡರು.

ಆಶ್ಚರ್ಯ! ಸ್ವಲ್ಪ ಸಮಯದ ನಂತರ ಆಸ್ಪ ತ್ರೆಯ ಸಿಬ್ಬಂದಿಯವರು ಬಂದು ಶಸ್ತ್ರ ಚಿಕಿತ್ಸೆಯು ಯಶಸ್ವಿಯಾಗಿದೆಯೆಂದು ಹೇಳಿ ಹೋದರು.

ಶ್ರದ್ಧಾ-ಭಕ್ತಿ ಪೂರ್ವಕ-ಭಗವಂತನ ಧ್ಯಾನ ಮಾಡಿದರೆ ಅವನು ನಿಜವಾಗಿಯೂ ನಮ್ಮ ಕೈ ಬಿಡುವದಿಲ್ಲ ಎಂಬುದಕ್ಕೆ ಇದೊಂದು ನಿದರ್ಶನ.

• **ಗೋವಿಂದ ಭೀ. ಪುರೋಹಿತ**

ನಾನಾಗ ಪ್ರೌಢಶಾಲೆಯಲ್ಲಿ ಓದುತ್ತಿದ್ದೆ. ನಮ್ಮ ಹತ್ತಿರ ಸಂಬಂಧಿಕರೊಬ್ಬರು ನಿಧನ ಹೊಂದಿದ್ದರು. ನಮ್ಮದು ಸಂಪ್ರದಾಯಸ್ಥ ಕುಟುಂಬವಾದ್ದರಿಂದ ಅಪರ ಕ್ರಿಯೆಗಳು ಬಲು ಕಟ್ಟುನಿಟ್ಟಿನಿಂದ ನಡೆಯುತ್ತಿದ್ದವು. ಮನೆಯಲ್ಲಿ ೧೧ ದಿನಗಳ ಮೈಲಿಗೆ ಬೇರೆ. ನಾವು ಯಾರನ್ನೂ ಮುಟ್ಟುವಂತಿರಲಿಲ್ಲ, ನಮ್ಮನ್ನೂ ಯಾರೂ ಮುಟ್ಟಿಸಿಕೊಳ್ಳುವಂತಿರಲಿಲ್ಲ. ನನಗೆ ವಾರ್ಷಿಕ ಪರೀಕ್ಷೆಗಳು ನಡೆಯುತ್ತಿದ್ದ ಸಮಯ ಬೇರೆ. ಸ್ನೇಹಿತರ ಜೊತೆ ಬೆರೆಯಲು ಕೂಡ ಸಾಧ್ಯವಾಗುತ್ತಿರಲಿಲ್ಲ. ಆಗ ನಾನು ಅನುಭವಿಸಿದ ಕಷ್ಟ ಹೇಳತೀರದು.

ಅಸ್ಪೃಶ್ಯತೆಯ ಬಗ್ಗೆ ಕೇವಲ ಓದಿ ತಿಳಿದಿದ್ದ ನನಗೆ ಅದು ನನ್ನ ಅನುಭವಕ್ಕೆ ಬಂದಾಗ ಅದರಿಂದ ಅನುಭವಿಸುವ ಸಂಕಟ ಅರ್ಥವಾಯಿತು. ಕೇವಲ ಹಲವು ದಿನಗಳ ತಾತ್ಕಾಲಿಕ ಅಸ್ಪೃಶ್ಯತೆಗೇ ಇಷ್ಟು ಕಷ್ಟಪಡಬೇಕಾದರೆ ಒಂದು ಕಾಲದಲ್ಲಿ (ಈಗಲೂ ಕೆಲವು ಕಡೆ) ಇಡಿ ಜೀವನವೆಲ್ಲ ಈ ಪಿಡುಗನ್ನು ಎದುರಿಸುತ್ತಿದ್ದ ಹಿಂದುಳಿದ ವರ್ಗಗಳ ಜನರ ಪರಿಸ್ಥಿತಿಯ ಬಗ್ಗೆ ಆಗ ನನಗೆ ಅರಿವಾಯಿತು.

• ಎನ್. ಶಂಕರ್

---

೧೯೬೫ರ, ಮೇ ತಿಂಗಳಿನಲ್ಲಿ ಗುಜರಾತಿನ ಕಚ್ ಪ್ರದೇಶದಲ್ಲಿ ಪಾಕಿಸ್ತಾನಿಗಳ ಆಕ್ರಮಣದಿಂದ ಪ್ರಕ್ಷುಬ್ಧ ಪರಿಸ್ಥಿತಿ ಏರ್ಪಟ್ಟಿತ್ತು. ನಮ್ಮ ಹದಿನೆಂಟನೇ ಮದ್ರಾಸ್ ಬಟಾಲಿಯನ್ನಿನ ಸೈನಿಕರು ಝಾನ್ಸಿಯಿಂದ ವಿಶೇಷ ರೈಲಿನಲ್ಲಿ ಎರಡು ದಿನಗಳವರೆಗೆ ಸತತವಾಗಿ ಪ್ರಯಾಣ ಮಾಡಿ, ಆ ದಿನ ಬೆಳಗ್ಗೆ ಮಾಕು ಪಟ್ಟಿಯೆಂಬ ಗಡಿಗೆ ಸಮೀಪದ ಚಿಕ್ಕ ರೈಲು ನಿಲ್ದಾಣದಲ್ಲಿ ಬಂದಿಳಿದಿದ್ದರು. ರೈಲಿನಿಂದಿಳಿದೊಡನೆ ಸಿದ್ಧವಾಗಿ ನಿಂತಿದ್ದ ಮಿಲಿಟರಿ ಗಾಡಿಗಳು ನಮ್ಮನ್ನು ತುಂಬಿಕೊಂಡು ಬಂದು ಪಾಕ್ ಗಡಿಗೆ ಸಮೀಪದ ಈ ಬೆಂಗಾಡಿನಲ್ಲಿಳಿಸಿ ಹೋಗಿದ್ದುವು.

ಇಲ್ಲಿಗೆ ಬಂದೊಡನೆ ಅಲ್ಪಕಾಲದ ವಿಶ್ರಾಂತಿಯೂ ಇಲ್ಲದೆ ಶತ್ರುಗಳ ವಿಮಾನ ದಾಳಿಯಿಂದ ರಕ್ಷಣೆ ಪಡೆಯುವ ಕ್ರಮವಾಗಿ ಟ್ರೆಂಚ್ (ಹಳ್ಳ)ಗಳನ್ನು ಅಗೆಯತೊಡಗಿದೆವು.

ತೀಕ್ಷ್ಣವಾದ ಬಿಸಿಲಿನ ಝಳದಿಂದಾಗಿ ನಮ್ಮೆಲ್ಲರ ಮೈಯಿಂದ ಬೆವರಿನ ಧಾರೆ ಹರಿಯುತ್ತಿತ್ತು. ನೀರು ಮತ್ತು ಆಹಾರ ಸರಬರಾಜು ತಕ್ಷಣಕ್ಕೆ ಪ್ರಾರಂಭವಾಗುವಂತಿರಲಿಲ್ಲ. ಬೀಸುತ್ತಿದ್ದ ಬಿಸಿಗಾಳಿ ಕಣ್ಣು ಮೂಗು ಬಾಯಿಗೆ ಮರಳನ್ನು ತೂರುತ್ತಿತ್ತು. ಬಿಸಿಗಾಳಿಯ ಹೊಡೆತ ಮತ್ತು ದಾಹದಿಂದ ಬಸವಳಿದು ಹೋಗಿದ್ದೆವು. ನಮ್ಮ ನೀರಿನ ಕುಪ್ಪಿಗಳಲ್ಲಿ ಒಂದು ಹನಿ ನೀರೂ ಇರಲಿಲ್ಲ, ನೀರು ಕುಡಿದಷ್ಟೂ ಇಂಗದ ಭಯಂಕರ ದಾಹ!

ಈ ರೀತಿ ಸೈನಿಕರೆಲ್ಲ ದಾಹದಿಂದ ಕಂಗಾಲಾಗಿದ್ದ ಸಮಯದಲ್ಲಿ, ದೂರದಲ್ಲಿ ಕೆಲವಾರು ಹೆಂಗಸರು ತಲೆಯ ಮೇಲೆ ದೊಡ್ಡ ಗಡಿಗೆಗಳನ್ನು ಹೊತ್ತು ನಮ್ಮತ್ತ ಬರುತ್ತಿದ್ದರು. ನಾವೆಲ್ಲ ಟ್ರೆಂಚ್ ಅಗೆಯುವ ಕೆಲಸ ನಿಲ್ಲಿಸಿ ಕುತೂಹಲದಿಂದ ಅವರತ್ತ ನೋಡತೊಡಗಿದೆವು. ನಾವಿದ್ದ ಸ್ಥಳಕ್ಕೆ ಬಂದ ಆ ಸಿಖ್ ಹೆಂಗಸರು ತಲೆಯ ಮೇಲಿನ ಗಡಿಗೆಗಳನ್ನು ಕೆಳಗಿಳಿಸಿ ಮರುಮಾತನಾಡದೆ ಹೊರಟುಹೋದರು. ಅವರು ಸಮೀಪದ ಜ್ಯೋತಿಷ್‌ವಾಲ ಗ್ರಾಮದವರೆಂದು ಅನಂತರ ತಿಳಿಯಿತು.

ದಾಹದಿಂದ ಕಂಗೆಟ್ಟಿದ್ದ ಸೈನಿಕರು ಗಡಿಗೆಗಳಲ್ಲಿ ಕುಡಿಯುವ ನೀರಿರಬಹುದೆಂದೂಹಿಸಿ ಅವುಗಳೆಡೆಗೆ ಓಡಿದರೆ ಅವರು ಅಲ್ಲಿ ಕಂಡದ್ದಾದರೂ ಏನು! ನೀರಿಗೆ ಬದಲಾಗಿ ಗಡಿಗೆಗಳ ತುಂಬ ಹದವಾದ ಮಜ್ಜಿಗೆ!

ಆ ಮರಳುಗಾಡಿನಲ್ಲಿ ದಾಹದಿಂದ ಗತಪ್ರಾಣರಾಗಿದ್ದ ನಮ್ಮ ಸೈನಿಕರು ಆ ಮಮತಾಮಯಿಗಳು ನೀಡಿದ ಮಜ್ಜಿಗೆಯನ್ನು ಕುಡಿದು ಉತ್ಸಾಹದಿಂದ ಕಾರ್ಯನಿರತರಾದರು.

ಪಂಜಾಬಿನ ಉಗ್ರಗಾಮಿಗಳ ಚಟುವಟಿಕೆಗಳು ಪ್ರಾರಂಭವಾಗಿರದ ದಿನಗಳವು. ಅಂದಿನ ದಿನಗಳಲ್ಲಿ ಪಂಜಾಬಿಗಳು ಭಾರತೀಯ ಸೈನಿಕರನ್ನು ಬಹುವಾಗಿ ಪ್ರೀತಿಗೌರವಗಳಿಂದ ಕಾಣುತ್ತಿದ್ದರು. ನಮ್ಮ ಸೈನಿಕರ ಬಗೆಗಿನ ಆ ಪಂಜಾಬಿ ಹೆಂಗಸರ ಆದರ ಅಭಿಮಾನಗಳ ನೆನಪು ಇಂದಿಗೂ ಮನಸ್ಸಿನಲ್ಲಿ ಹಸಿರಾಗಿದೆ.

• ರೇಣುಕ

ಕಾನೂನು

# ಭ್ರಷ್ಟಾಚಾರದ ಮುಹಿಮೆ

• ಎಸ್. ನಾರಾಯಣಮೂರ್ತಿ
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ (ನಿವೃತ್ತ)

ಜಯಪುರದ ಒಂದು ಭ್ರಷ್ಟಾಚಾರ ಪ್ರಕರಣದ ವಿರುದ್ಧ ಕಾರ್ಯಾಚರಣೆಯ ಇಲಾಖೆಯ ಅಧೀಕ್ಷಕರು ಠಾಣೆಯ ಕಾರ್ಯಾಲಯದಲ್ಲಿ ಆ ದಿನದ ತಮ್ಮ ಕರ್ತವ್ಯದ ಬಗ್ಗೆ ಯೋಚಿಸುತ್ತಾ ಕುಳಿತಿದ್ದರು. ಅಷ್ಟರಲ್ಲೇ ಅಪರಾಧಸೂಚಕ ಸುದ್ದಿಯೊಂದು ಬಂದು ಅವರ ಕಿವಿತಮ್ಮಟೆಯನ್ನು ಬಾರಿಸಿತು. ಸ್ಥಳೀಯ ಆಯುರ್ವೇದ ವೈದ್ಯಶಾಲೆಯಲ್ಲಿ ವೈದ್ಯರಾಗಿ ಕೆಲಸಮಾಡುತ್ತಿರುವ ಬ್ರಿಜ್‌ಮೋಹನ್ ಮತ್ತು ಇನ್ನೊಬ್ಬ ವೈದ್ಯರು ಬಹಳ ಸಮಯದಿಂದ ಭ್ರಷ್ಟಾಚಾರದಲ್ಲಿ ತೊಡಗಿ ಅನ್ಯಾಯವಾಗಿ ಹಣ ಗಳಿಸಿ, ಜನರಿಗೆ ಮೋಸ ಮಾಡುತ್ತಿದ್ದಾರೆಂಬುದೇ ಅವರಿಗೆ ಬಂದು ಮುಟ್ಟಿದ ಸುದ್ದಿ. ಅದನ್ನು ಕೇಳಿದ ಅವರು ಕೂಡಲೇ ತಮ್ಮ ಆಸನದಿಂದ ಎದ್ದು ಕಾರ್ಯೋನ್ಮುಖರಾದರು. ಆರೋಪಿಗಳ ಜಾಲದ ಪತ್ತೆ ಹಚ್ಚುವುದಕ್ಕಾಗಿ ಒಂದು ಹಂಚಿಕೆಯನ್ನು ಹೂಡಲು ತಮ್ಮ ಇಲಾಖೆಯ ಇತರ ಸಿಬ್ಬಂದಿಯವರೊಡನೆ ಮಾತುಕತೆ ನಡೆಸಿದರು; ಮತ್ತು ಅದಕ್ಕೆ ಪೂರ್ವಭಾವಿಯಾಗಿ ಕೈಗೊಳ್ಳಬೇಕಾದ ತಂತ್ರದ ಬಗ್ಗೆಯೂ ವ್ಯವಸ್ಥೆಮಾಡಿದರು.

ವೈದ್ಯರ ಕಾರಸ್ಥಾನದ ಪತ್ತೆಗಾಗಿ ಅವರು ಮೊದಲಿಗೆ ಜಗದೀಶ್‌ಸಿಂಗ್ ಎಂಬವನನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡು ಅವನಿಗೆ ಹಲವಾರು ಸೂಕ್ತ ಸಲಹೆ ಸೂಚನೆಗಳನ್ನಿತ್ತರು. ಆರೋಪಿಗಳ ಕೃತ್ಯವನ್ನು ಬಯಲಿಗೆಳೆಯುವುದರಲ್ಲಿ ಅವನ ಪಾತ್ರ ವೇನು? ಎಂಬುದನ್ನೂ ಅವನಿಗೆ ತಿಳಿಸಿಹೇಳಿದರು. ಅಧೀಕ್ಷಕರು ಕೆಲವು ಹಣದ ನೋಟುಗಳನ್ನು ಜೊತೆಗೂಡಿಸಿ, ಅವುಗಳಲ್ಲಿ ಮುದ್ರಿತವಾಗಿರುವ ಅಂಕಿಗಳನ್ನು ನಮೂದಿಸಿಕೊಂಡು, ಅವುಗಳನ್ನು ಪಂಚನಾಮೆಯ ಮೂಲಕ ಅಭಿಲೇಖಿಸಿಕೊಂಡರು. ಅಂಥ ನೋಟುಗಳನ್ನು ಅವರು ಜಗದೀಶ್‌ಸಿಂಗನ ವಶಕ್ಕೆ ಕೊಟ್ಟು ಅವನು ತನ್ನ ನಿಯೋಜಿತ ಕಾರ್ಯವನ್ನು ಯಾವ ರೀತಿ ನಿರ್ವಹಿಸಬೇಕು ಎಂಬುದನ್ನೂ ವಿವರಿಸಿದರು. ಜಗದೀಶ್‌ಸಿಂಗ್ ಅವರಿಗೆ ಎಲ್ಲ ತರಹದ ಸಹಾಯವನ್ನು ಒದಗಿಸಿಕೊಡುವುದಾಗಿ ಭರವಸೆ ನೀಡಿದ.

ಮಾರನೇ ದಿನ ಜಗದೀಶ್‌ಸಿಂಗ್ ಒಬ್ಬ ರೋಗಿಯಂತೆ ವೇಷ ಧರಿಸಿ ಆರೋಪಕ್ಕೊಳಗಾಗಿದ್ದ ವೈದ್ಯರ ಮುಂದೆ ನಿಂತು ದಾರುಣ ರೋಗದಿಂದ ನರಳುತ್ತಿರುವಂತೆ ನಟಿಸಿದ. ವೈದ್ಯರು ಅವನನ್ನು ಪರೀಕ್ಷಿಸಿ ಕೆಲವು ಔಷಧಿಗಳನ್ನು ಜರೂರು ಸೇವಿಸಬೇಕಾಗಿ ಹೇಳಿದರು; ಅಂಥ ಔಷಧಿಗಳನ್ನು ತಾವೇ ಒದಗಿಸಿಕೊಡುವುದಾಗಿಯೂ ಅವರು ಭರವಸೆಯನ್ನು ಕೊಟ್ಟರು. ಅದಕ್ಕೆ ಸಿಂಗ್ ಒಪ್ಪಿದನಲ್ಲದೆ ಅದಕ್ಕೆ ತಗಲುವ ಕ್ರಯದ ಮೊಬಲಗನ್ನು ಗುರುತುಪಡಿಸಲಾದ ನೋಟುಗಳ ಮೂಲಕ ಅವನು ವೈದ್ಯರಿಗೆ ಕೊಟ್ಟ. ವೈದ್ಯರು ಅವುಗಳನ್ನು ಇಸಿದುಕೊಂಡು ಔಷಧಿಗಾಗಿ ಮಾರನೇ ದಿನ ತಮ್ಮನ್ನು ಕಾಣಬೇಕಾಗಿ ಹೇಳಿದರು. ಸಿಂಗ್ ಹೊರಗೆ ಬಂದವನೇ ಸಂಜ್ಞೆ ಮಾಡಿದ. ಆ ವೈದ್ಯರ ಕಾರ್ಯಾಲಯವನ್ನು ಆ ಮೊದಲೇ ಸುತ್ತುವರಿದು ಸಿಂಗ್‌ನ ಸಂಜ್ಞೆಯ ಪ್ರತೀಕ್ಷೆಯಲ್ಲೇ ಇದ್ದ ಅಧೀಕ್ಷಕರ ಸಿಬ್ಬಂದಿ ಒಮ್ಮೆಗೇ ವೈದ್ಯರ ಕಾರ್ಯಾಲಯದೊಳಗೆ ನುಗ್ಗಿ, ವೈದ್ಯರ ದೇಹ ಪರೀಕ್ಷೆ ನಡೆಸಿಯೇ ಬಿಟ್ಟಿತು. ಗುರುತು ಹಾಕಿಸಿದ ನೋಟುಗಳು ವೈದ್ಯರ ಬಳಿ ಸಿಕ್ಕಿದವು. ವೈದ್ಯರು, ತಬ್ಬಿಬ್ಬಾದರು; ಅಧೀಕ್ಷಕರು ಅವರ ಕೈ ಮತ್ತು ಅಂಗಿಯನ್ನು ತೊಳೆದರು, ದ್ರಾವಕದಿಂದ ಪರೀಕ್ಷಿ

ಸಿದರು. ಕಾನೂನು ಪ್ರಕಾರ ಅದಕ್ಕೆ ಅಗತ್ಯವಾದ ಪಂಚನಾಮೆ ಇತ್ಯಾದಿಗಳನ್ನು ಮಾಡಿ, ಗುರುತು ಹಾಕಿದ್ದ ನೋಟುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು; ಸಾಕ್ಷಿಗಳ ಹೇಳಿಕೆಗಳನ್ನೂ ಪಡೆದರು. ತಪಾಸಣಾಂತ್ಯದಲ್ಲಿ ಆರೋಪಿಗಳ ವಿರುದ್ಧ ಆಪಾದನೆಯ ಪಟ್ಟಿಯನ್ನು ತಯಾರಿಸಿ, ಅದಕ್ಕೆಂದೇ ನಿಯೋಜಿಸಲಾಗಿರುವ ವಿಶೇಷ ನ್ಯಾಯಾಲಯಕ್ಕೆ ಅದನ್ನು ಸಲ್ಲಿಸಿದರು. ನ್ಯಾಯಾಲಯವು ಅದನ್ನು ಸ್ವೀಕರಿಸಿ, ಆರೋಪಿಗಳ ವಿರುದ್ಧ ವಿಚಾರಣೆಯ ಸಲುವಾಗಿ ತ್ವರಿತಗತಿಯ ಕಾರ್ಯಾಚರಣೆಯನ್ನು ಕೈಗೊಂಡಿತು. ಆ ಇಬ್ಬರು ವೈದ್ಯರು ಮಾತ್ರವಲ್ಲದೆ ಆ ಜಾಲದಲ್ಲಿ ನಿರತರಾಗಿದ್ದ ಮತ್ತೆ ಕೆಲವರೂ ನ್ಯಾಯಾಲಯದ ಶೃಂಖಲೆಯೊಳಗೆ ಬಿಗಿಯಲ್ಪಟ್ಟರು.

ವಿಶೇಷ ನ್ಯಾಯಾಲದಯದಲ್ಲಿ ಈ ಪ್ರಕರಣ ವಿಚಾರಣೆಗೆ ಬಂದಾಗ ಸರಕಾರದ ಪರವಾಗಿ ಅದರ ಅಭಿಯೋಜಕರು ಸಂಬಂಧಪಟ್ಟ ಸಾಕ್ಷಿಗಳ ಹೇಳಿಕೆಯನ್ನು ತೆಗೆದುಕೊಳ್ಳುವಂತೆ ಮಾಡಿದರು; ಎಲ್ಲಾ ಲಿಖಿತ ದಾಖಲೆಗಳನ್ನೂ ಹಾಜರುಪಡಿಸಿದರು. ವಿಚಾರಣಾಂತ್ಯದಲ್ಲಿ ಅಭಿಯೋಜಕರು ಹಾಜರಾದ ಎಲ್ಲಾ ಸುಕ್ಷ್ಯಾಧಾರಗಳ ಆಧಾರದಿಂದ ಆರೋಪಿಗಳು ತಪ್ಪಿತಸ್ಥರೆಂಬುದನ್ನು ತೋರಿಸಿಕೊಡಲು ತಮ್ಮ ವಾದ ಸರಣಿಯನ್ನು ಮಂಡಿಸಿದರು.

ಆರೋಪಿ ವೈದ್ಯರು ಸರಕಾರಿ ನೌಕರರು ಯಾರಾದರೂ ತಮ್ಮೆಡೆಗೆ ರೋಗಪರೀಕ್ಷೆಗಾಗಿ ಬಂದಾಗ ಅವರು ಅಂಥವರನ್ನು ತುಂಬಾ ಹೊತ್ತಿನವರೆಗೆ ಪರೀಕ್ಷೆ ಮಾಡುವವರಂತೆ ನಟಿಸಿ, ಅವರ ರೋಗ ಉಲ್ಬಣಾವಸ್ಥೆಯಲ್ಲಿದೆ ಎಂದು ಹೆದರಿಕೆ ಹುಟ್ಟಿಸಿ ರೋಗ ಪರಿಹಾರಕ್ಕಾಗಿ ತಕ್ಷಣವೇ ಔಷಧಿ ಸೇವಿಸಬೇಕೆಂದು ಹೇಳುತ್ತಿದ್ದರು; ಮತ್ತು ಅವರು ಆ ಕೂಡಲೇ ಅಂಥಾ ರೋಗಿಗಳಿಗೆ ಹಿಂದಿನ ಯಾವುದಾದರೂ ತಾರೀಖುಗಳನ್ನು ನಮೂದಿಸಿ ಕೃತಕ ಬಿಲ್ಲುಗಳನ್ನು ತಯಾರಿಸಿಕೊಡುತ್ತಿದ್ದರು. ಸರಕಾರಿ ನೌಕರರು ಅಂಥಾ ನಕಲಿ ಬಿಲ್ಲುಗಳನ್ನು ವೈದ್ಯರಿಂದ ಪಡೆದು ಔಷಧಿ ಮಾರುವ ಅಂಗಡಿಯವನಿಗೆ ಕೊಡುತ್ತಿದ್ದರು. ಅಂಗಡಿಯವನು ಅಂಥಾ ಬಿಲ್ಲುಗಳ ಆಧಾರದಿಂದ ನಗದು ಜ್ಞಾಪನಗಳನ್ನು ಕೊಡುತ್ತಿದ್ದ. ವೈದ್ಯರು ಅಂತಹ ನಗದು ಜ್ಞಾಪನಗಳನ್ನು ನೋಡಿ ರೋಗಿಗಳಿಗೆ ಅಗತ್ಯ ಪ್ರಮಾಣಪತ್ರವನ್ನು ಕೊಡುತ್ತಿದ್ದರು. ಆ ಪ್ರಮಾಣ ಪತ್ರವನ್ನು ಪಡೆದ ಸರಕಾರೀ ನೌಕರರು ಅವುಗಳಲ್ಲಿ ನಮೂದಿಸಿರುವ ಮೊತ್ತಕ್ಕೆ ಸರಿಯಾದ ಮೊಬಲಗನ್ನು ಪಡೆಯುತ್ತಿದ್ದರು. ಹಾಗೆಯೇ ಸರಕಾರದಿಂದ ಮೊಬಲಗು ಸಿಕ್ಕ ಮೇಲೆ ಆರೋಪಿ ವೈದ್ಯರು ಮತ್ತು ಅಂಗಡಿಯವರು ಅದರಲ್ಲಿ ಸಿಂಹಪಾಲನ್ನು ಇಟ್ಟುಕೊಂಡು ಬಾಕೀ ಹಣವನ್ನು ನೌಕರರಿಗೆ ಕೊಡುತ್ತಿದ್ದರು. ಹೀಗೆ ಆರೋಪಿಗಳು ನೂರಾರು ಪ್ರಕರಣಗಳಲ್ಲಿ ಸರಕಾರದಿಂದ ಹಣವನ್ನು ಪಡೆದು ವಂಚಿಸುತ್ತಿದ್ದರು. ಪ್ರಕೃತ ವ್ಯವಹಾರದಲ್ಲಿ ಆರೋಪಿಗಳು ಗುರುತು ಮಾಡಿದ ನೋಟುಗಳನ್ನು ಜಗದೀಶಸಿಂಗನಿಂದ ಪಡೆದು ಅನ್ಯಾಯವಾಗಿ ಹಣವನ್ನು ಶೇಖರಿಸಲು ಪ್ರಯತ್ನಪಟ್ಟನೆಂಬುದು ಸಂದೇಹಕ್ಕೆಡೆ ಇಲ್ಲದೆ ಸಾಬೀತಾಗಿದೆ ಎಂದು ತಮ್ಮ ವಾದವನ್ನು ಮಂಡಿಸಿ ಅವರಿಗೆ ಸೂಕ್ತ ಶಿಕ್ಷೆಯಾಗಬೇಕೆಂದು ನ್ಯಾಯಾಧೀಶರನ್ನು ಕೇಳಿಕೊಂಡರು. ಆರೋಪಿಗಳು ವಾದವನ್ನು ಪ್ರಾರಂಭಿಸುತ್ತಾ ಅವರ ಮೇಲಿನ ಆಪಾದನೆ ಸತ್ಯಕ್ಕೆ ದೂರವಾಗಿದೆಯೆಂದೂ ಅವರು ನಿರಪರಾಧಿಗಳೆಂದೂ, ಆದ್ದರಿಂದ ಅವರನ್ನು ದೋಷಮುಕ್ತಗೊಳಿಸಬೇಕೆಂದೂ ನಿವೇದಿಸಿಕೊಂಡರು.

ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಂಡ ವಿಶೇಷ ದಂಡನ್ಯಾಯಾಧಿಕಾರಿಗಳು ಎಲ್ಲಾ ಸಾಕ್ಷ್ಯವನ್ನು ಪರಿಶೀಲಿಸಿ ಆರೋಪಿಗಳ ಮೇಲಿನ ಆರೋಪ ಸಾಬೀತಾಗಿದೆಯೆಂದು ನಿರ್ಧರಿಸಿ, ಶಿಕ್ಷೆಯನ್ನು ವಿಧಿಸಿ ಆದೇಶವನ್ನು ಹೊರಡಿಸಿದರು. ಅಂಥಾ ಆದೇಶದ ವಿರುದ್ಧ ಸ್ಥಾನೀಯ ಉಚ್ಚ ನ್ಯಾಯಾಲಯಕ್ಕೆ ಆರೋಪಿಗಳು ಮಾಡಿಕೊಂಡ ಮೇಲ್ಮನವಿಯು ನಿರರ್ಥಕವಾಯಿತು. ಆದರೂ ಆರೋಪಿಗಳು ಪ್ರಕರಣವನ್ನು ಅಷ್ಟಕ್ಕೇ ಬಿಡದೆ ಭಾರತದ ಉಚ್ಚತಮ ನ್ಯಾಯಾಲಯಕ್ಕೆ ಕೊಂಡೊಯ್ದರು.

ಉಚ್ಚತಮ ನ್ಯಾಯಾಲಯಕ್ಕೆ ಆ ಪ್ರಕರಣವು ತಲುಪಿದಾಗ ಅದು ಬರೇ ಬ್ರಿಜ್‌ಮೋಹನ್ ಎಂಬ ವೈದ್ಯನ ಮೇಲಿನ ತೀರ್ಮಾನವು ಎಷ್ಟು

ಮಟ್ಟಿಗೆ ಸಾಧುವಾಗಿದೆ ಎಂಬುದನ್ನು ಮಾತ್ರ ಪರಿಶೀಲಿಸಲು ಬಾಕಿ ಉಳಿದಿತ್ತು.

ಹಾಜರಾಗಿದ್ದ ಎಲ್ಲಾ ಸಾಕ್ಷ್ಯಾಧಾರಗಳನ್ನು ಉಚ್ಚತಮ ನ್ಯಾಯಾಲಯವು ಆದ್ಯಂತವಾಗಿ ಮತ್ತೊಮ್ಮೆ ವಿಶ್ಲೇಷಿಸಿ ನೋಡಿ ಕೆಳಗಿನ ಎರಡೂ ನ್ಯಾಯಾಲಯಗಳು ಮಾಡಿದ ತೀರ್ಪೇ ಸರಿಯಾಗಿದೆ ಎಂದು ತೀರ್ಮಾನಿಸಿ ಅವರು ಶಿಕ್ಷೆಗೆ ಅರ್ಹರೇ ಆಗಿರುತ್ತಾರೆಂದು ನಿರ್ಧರಿಸಿತು. ಹಾಗೆ ಹೇಳಲು ಅದಕ್ಕೆ ಪ್ರಬಲ ಕಾರಣಗಳಿದ್ದವು.

ಆ ಪ್ರಕರಣದಲ್ಲಿ ಆಪಾದಿತರ ಭ್ರಷ್ಟಾಚಾರದ ಕಾರಸ್ಥಾನವನ್ನು ಒಡೆಯಲು ಅಧೀಕ್ಷಕರು ಮಾಡಿದ ಸಂಚಿನ ಬಗೆಗೆ ಹೇಳಿರುವ ಸಾಕ್ಷ್ಯ; ಅವರು ಜಗದೀಶಸಿಂಗನ ಮೂಲಕ ಗುರುತು ಮಾಡಿದ ಹಣದ ನೋಟುಗಳನ್ನು ಆಪಾದಿತರು ಪಡೆದುಕೊಂಡ ಬಗ್ಗೆ ಸಾಕ್ಷ್ಯ; ಅಧೀಕ್ಷಕರ ತಂಡದವರು ಸಿಂಗ್‌ನ ಸಂಜ್ಞೆಯನ್ನು ತಿಳಿದು ಆಪಾದಿತರ ಕಾರ್ಯಾಲಯಕ್ಕೆ ಹಠಾತ್ತನೆ ನುಗ್ಗಿದಾಗ ನೋಟುಗಳು ಅವರ ವಶದಲ್ಲಿ ಸಿಕ್ಕಿದುದಕ್ಕೆ ಸಾಕ್ಷ್ಯ, ಆಪಾದಿತರ ಕೈ ಮತ್ತು ಬಟ್ಟೆಗಳನ್ನು ತೊಳೆದುದಕ್ಕೆ ಮತ್ತು ದ್ರಾವಣ ಪರೀಕ್ಷೆ ಮಾಡಿದುದಕ್ಕೆ ಸಾಕ್ಷ್ಯ ಇವೆಲ್ಲವುಗಳಿಗೆ ಅನುಮಾನಾಸ್ಪದವಾದ ರೀತಿಯಲ್ಲಿ ಅವರ ಮೇಲೆ ಸಾಕ್ಷ್ಯ ಹಾಜರಾಗುವುದಕ್ಕೆ ಆಪಾದಿತರ ಸಮಜಾಯಿಷಿಯ ಉತ್ತರವೆಂದರೆ ತಮ್ಮ ಮೇಲೆ ಹೇಳಿದುದೆಲ್ಲವೂ ಸುಳ್ಳು; ನಿಜವಲ್ಲ ಎನ್ನುವ ಉತ್ತರವು ತೃಪ್ತಿಕರವಾಗಿರದೆ ಇರುವುದು. ಇವೆಲ್ಲವೂ ಸರಕಾರದ ವಾದಕ್ಕೆ ಪೂರ್ಣ ಸಮರ್ಥನೆಯನ್ನು ಕೊಡುವಂತಿದೆ ಎಂದು ಉಚ್ಚತಮ ನ್ಯಾಯಾಲಯ ಆಪಾದಿತರಿಗೆ ಆಗಿದ್ದ ಶಿಕ್ಷೆಯನ್ನು ವಿಧಿಸುವ ಆದೇಶವನ್ನು ತಳ್ಳಿಹಾಕಲು ಮತ್ತು ಆಪಾದಿತರ ಮೇಲ್ಮನವಿಯನ್ನು ಎತ್ತಿ ಹಿಡಿಯಲು ನಿರಾಕರಿಸಿತು. ಆಪಾದಿತರ ಮೇಲ್ಮನವಿ ತಿರಸ್ಕೃತವಾದದ್ದರಿಂದ ಬ್ರಿಜ್‌ಮೋಹನ್‌ಗೆ ವಿಧಿಸಲಾಗಿದ್ದ ಶಿಕ್ಷೆ ಊರ್ಜಿತವಾಯಿತು.

ನಾರಾಯಣಲಾಲ್ ನಿರಾಲಾ ವಿರುದ್ಧ ರಾಜಸ್ಥಾನ ಸರಕಾರ (ಎ.ಐ.ಆರ್. ೧೯೯೪ ಉಚ್ಚತಮ ನ್ಯಾಯಾಲಯ, ೧೧೧೮) ಎಂಬ ಈ ಪ್ರಕರಣ ಭ್ರಷ್ಟಾಚಾರ ನಿರ್ಮೂಲನಾ ಕಾರ್ಯ ನಿರತ ಇಲಾಖೆ ಆ ದಿಸೆಯಲ್ಲಿ ಪ್ರಯತ್ನಕ್ಕೆ ಶ್ಲಾಘನೆಯನ್ನು ಪಡೆಯಿತು. ಉಚ್ಚತಮ ನ್ಯಾಯಾಲಯದ ಈ ಆದೇಶದಿಂದಾಗಿ ಅಧೀಕ್ಷಕರ ಕಾರ್ಯ ಕೌಶಲಕ್ಕೆ ಮತ್ತೊಂದು ಗರಿ ಮೂಡಿದಂತಾಯಿತು. ●





# ಜ್ಞಾನನಿಧಿ

## ವಿದ್ಯಾರ್ಥಿ ಅಂಕಣ

# ವಿನೋದ ಗಣಿತ

ವಿನೋದ ೧: ಈ ಕೆಳಗಿನ ಗುಣಾಕಾರಗಳನ್ನು ನೋಡಿ. ೧ ರಿಂದ ೯ ರವರೆಗಿನ ಎಲ್ಲಾ ಅಂಕಿಗಳೂ ಈ ಗುಣಾಕಾರದಲ್ಲಿವೆ.

೪೨ x ೧೩೮ = ೫೭೯೬
೨೭ x ೧೯೮ = ೫೩೪೬
೧೨ x ೪೮೩ = ೫೭೯೬
೧೮ x ೨೯೭ = ೫೩೪೬

ವಿನೋದ ೨: ಅನುಕ್ರಮವಾದ ಯಾವುದೇ ಮೂರು ಅಂಕಿಗಳನ್ನು ತೆಗೆದುಕೊಳ್ಳಿ. ಅವುಗಳನ್ನು ತಿರುವು ಮುರುವು ಮಾಡಿ ಅನಂತರ ದೊಡ್ಡ ಸಂಖ್ಯೆಯಲ್ಲಿ ಸಣ್ಣ ಸಂಖ್ಯೆಯನ್ನು ಕಳೆಯಿರಿ. ಆಗ ಉತ್ತರ ೧೯೮ ಬರುತ್ತದೆ.

ಉದಾಹರಣೆಗೆ, ೭೮೯ನ್ನು ತೆಗೆದುಕೊಳ್ಳೋಣ. ಈ ಸಂಖ್ಯೆಯನ್ನು ತಿರುವು ಮುರುವು ಮಾಡಿದಾಗ ೯೮೭ ಆಗುತ್ತದೆ. ಈಗ ದೊಡ್ಡ ಸಂಖ್ಯೆಯಲ್ಲಿ ಸಣ್ಣ ಸಂಖ್ಯೆಯನ್ನು ಕಳೆಯೋಣ. ಉತ್ತರ ೧೯೮ ಬರುತ್ತದೆ.

ವಿನೋದ ೩: ಮೂವತ್ತೇಳರ ವೈಶಿಷ್ಟ್ಯ ಏನು ಗೊತ್ತೆ? ೩ರ ಮಗ್ಗಿಯಿಂದ ಗುಣಿಸಿ ನೋಡಿ ತಾನೇ ಗೊತ್ತಾಗುತ್ತದೆ.

೩೭ x ೦೩ = ೧೧೧
೩೭ x ೦೬ = ೨೨೨
೩೭ x ೦೯ = ೩೩೩
೩೭ x ೧೨ = ೪೪೪
೩೭ x ೧೫ = ೫೫೫
೩೭ x ೧೮ = ೬೬೬
೩೭ x ೨೧ = ೭೭೭
೩೭ x ೨೪ = ೮೮೮
೩೭ x ೨೭ = ೯೯೯

ಮನರಂಜನೆಯನ್ನು ನೀಡುವ ಇಂತಹ ಸಾಕಷ್ಟು ವಿಷಯಗಳು ಗಣಿತದಲ್ಲಿವೆ. ಅವುಗಳನ್ನು ಪತ್ತೆ ಹಚ್ಚಬೇಕಷ್ಟೆ.

• ಶಂಕರಗೌಡ ವೈ. ಪಾಟೀಲ

# ಇದೋ ಬರುತ್ತಿದೆ ಎಲೆಕ್ಟ್ರಾನಿಕ್ ಮೂಗು!

ಇದು ಎಲೆಕ್ಟ್ರಾನಿಕ್ ಯುಗ. ಭೂ ಕಕ್ಷೆಯಲ್ಲಿ ಸುತ್ತುತ್ತಿರುವ ಅಸಂಖ್ಯಾತ ಕೃತಕ ಉಪಗ್ರಹಗಳು, ಅವುಗಳ ಸಹಾಯದಿಂದ ದೇಶ ವಿದೇಶಗಳ ನಡುವೆ ನಿರ್ಮಾಣವಾಗಿರುವ ಕಂಪ್ಯೂಟರ್ ಹಾಗೂ ಸಂಪರ್ಕಜಾಲಗಳು ಮತ್ತು ಟೆಲಿವಿಜನ್ನುಗಳು ಇಂದು ಮಾಹಿತಿಗಳ ಹೆದ್ದಾರಿಯನ್ನೇ ನಿರ್ಮಿಸಿವೆ. (Information super highway) ಈ ಮಾಹಿತಿಗಳ ಹೆದ್ದಾರಿಯ ಮೇಲೆ ಶಬ್ದ ರೂಪದಲ್ಲಿ, ಚಿತ್ರರೂಪದಲ್ಲಿ, ಧ್ವನಿಯ ರೂಪದಲ್ಲಿ ಹಾಗೂ ಇನ್ನೂ ಅನೇಕಾನೇಕ ವಿಧಗಳಲ್ಲಿ ಮಾಹಿತಿಗಳ ಸಂಚಾರ ಅವ್ಯಾಹತವಾಗಿ, ಬೆಳಕಿನ ವೇಗದಲ್ಲಿ ಸಾಗಿದೆ. ಇಷ್ಟರಲ್ಲೇ ಈ ಹೆದ್ದಾರಿಯ ಮೇಲೆ ವಾಸನೆಗಳ ಕೂಡ ಆರಂಭವಾಗಲಿದೆ.

ಹಾಂ! ಇದೇನು? ವಾಸನೆಗಳ ಸಂಚಾರವೆ? ಎಂದು ನೀವು ಹುಬ್ಬೇರಿಸಬೇಕಾಗಿಲ್ಲ. ಇತ್ತೀಚೆಗೆ ಕಂಡುಹಿಡಿಯಲಾಗಿರುವ ಹೊಸ ಎಲೆಕ್ಟ್ರಾನಿಕ್ ಮೂಗು ಹಲವು ಬಗೆಯ ವಾಸನೆಗಳನ್ನು ಗುರುತಿಸಬಲ್ಲದು. ಹೀಗೆ ಗುರುತಿಸಿದ ವಾಸನೆಗಳನ್ನು ಈ ಮೂಗು ಖಾಯಂ ಆಗಿ ತನ್ನ ಜ್ಞಾನ ಸಂಗ್ರಹದಲ್ಲಿ ಇಟ್ಟುಕೊಳ್ಳಬಲ್ಲದು. ವಿವಿಧ ರೀತಿಯ ಮಾಹಿತಿಗಳನ್ನು ಸಂಖ್ಯಾತ್ಮಕವಾಗಿ ಪರಿವರ್ತಿಸಿ (Digitalform) ಕಾಂತೀಯ ಮಾಧ್ಯಮಗಳ ಮೇಲೆ (Magnetic media) ಹಿಡಿದಿಡುವಂತೆ, ಈ ಮೂಗಿನ ಸಹಾಯದಿಂದ ವಾಸನೆಗಳನ್ನು ಕೂಡ ಕಾಂತೀಯ ತಟ್ಟೆಗಳು ಅಥವಾ ಸುರಳಿಗಳ ಮೇಲೆ (Magnetic disks and tapes) ಬಹುಕಾಲ ಸಂಗ್ರಹಿಸಿಡಬಹುದು ಹಾಗೂ ಸಂಗ್ರಹದಲ್ಲಿರುವ ವಾಸನೆಗಳನ್ನು ಬೇಕೆಂದಾಗ ಹೊರದೆಗೆದು ಇಂತಹುದೇ ವಾಸನೆ ಎಂದು ತಿಳಿಯಬಹುದು.

ಮನುಷ್ಯನ ಮೂಗನ್ನೇ ಮಾದರಿಯಾಗಿಟ್ಟುಕೊಂಡು ವಿನ್ಯಾಸಗೊಳಿಸಲಾಗಿರುವ ಈ ಕೃತಕ ಎಲೆಕ್ಟ್ರಾನಿಕ್ ಮೂಗು ವಿವಿಧ ಬಗೆಯ ವಾಸನೆಗಳನ್ನು ಗುರುತಿಸಲು ಅದರಲ್ಲಿ ಅಳವಡಿಸಲಾಗಿರುವ ಹತ್ತುಸಾವಿರ ಜ್ಞಾನಗ್ರಂಥಿಗಳನ್ನು ಬಳಸುತ್ತದೆ. ಒಂದೇ ತರಹ ಅನ್ನಿಸುವ ವಾಸನೆಗಳ ಸೂಕ್ಷ್ಮ ವ್ಯತ್ಯಾಸವನ್ನು ಕೂಡ ಈ ಮೂಗು ಗುರುತಿಸಬಲ್ಲದು. (ಉದಾ: ಎರಡು ಬೇರೆ ಬೇರೆ ರುಚಿಯ ಚಹಾಪುಡಿಗಳಿಂದ ತಯಾರಿಸಲಾದ ಎರಡು ಬಗೆಯ ಚಹಗಳ ವಾಸನೆಗಳ ನಡುವಿನ ಅಂತರ.) ನಮ್ಮ ಮೂಗಿನಂತೆ ಈ ಎಲೆಕ್ಟ್ರಾನಿಕ್ ಮೂಗಿಗೆ ವಾಸನೆ ಬಡಿದಾಗ ಅದು ತನ್ನ ಜ್ಞಾನ ಭಾಂಡಾರದಲ್ಲಿರುವ ಹಲವಾರು ಬಗೆಯ ವಾಸನೆಗಳ ಮಾದರಿಗಳೊಂದಿಗೆ ಹೋಲಿಸಿ ನೋಡಿ, ಸಾಮ್ಯ ಕಂಡುಬಂದಲ್ಲಿ ಇಂತಹುದೇ ವಾಸನೆ ಎಂದು ತಿಳಿಸುತ್ತದೆ.

ಮುಂಬರುವ ದಿನಗಳಲ್ಲಿ ಈ ಕೃತಕ ಮೂಗು ಅನೇಕ ಕ್ಷೇತ್ರಗಳಲ್ಲಿ ತನ್ನ 'ಮೂಗು ತೂರಿಸುವ' ಸಾಧ್ಯತೆ ಇದೆ. ಮಾರುಕಟ್ಟೆಗಳಲ್ಲಿ ಬರಬಹುದಾದ ನಕಲಿ 'ಪರಿಮಳ'ಗಳನ್ನು ಪತ್ತೆ ಮಾಡುವಲ್ಲಿ, ಸಿದ್ಧ ಆಹಾರ ಉತ್ಪಾದನೆಗಳ ಗುಣಮಟ್ಟವನ್ನು ಕಾಪಾಡುವಲ್ಲಿ,

ಬೆಂಕಿ ಅಪಘಾತಗಳಾಗದಂತೆ ತಡೆಯುವಲ್ಲಿ ಈ ಮೂಗಿನ ಉಪಯೋಗ ಪಡೆಯಬಹುದಾಗಿದೆ. ಈಗಾಗಲೇ ಅಮೇರಿಕದ ಆಹಾರ ಮತ್ತು ಔಷಧಗಳ ಆಡಳಿತ ಸಂಸ್ಥೆಯು (FDA) ಕೆಡುತ್ತಿರುವ ಮೀನುಗಳನ್ನು ಗುರುತಿಸಿ ಅವುಗಳನ್ನು ಒಳ್ಳೆಯ ಮೀನುಗಳಿಂದ ಬೇರ್ಪಡಿಸಲು ಈ ಮೂಗನ್ನು ಬಳಸುತ್ತಲಿವೆ.

ಬಹು ಉಪಯೋಗಿಯಾದ ಈ ಮೂಗನ್ನು ನೀವು ಅಡುಗೆಮನೆಯ ಮೂಲೆಯೊಂದರಲ್ಲಿ ನಿಮ್ಮವಳಿಗೆ ಗೊತ್ತಾಗದಂತೆ ಬಚ್ಚಿಟ್ಟರೆ, ನೀವಿರದಾಗ ನಿಮ್ಮಾಕೆ ತಯಾರಿಸಬಹುದಾದ ವಿಶೇಷ ತಿಂಡಿಗಳ ಬಗ್ಗೆ ನಿಮಗೆ ಗುಪ್ತಚಾರನಂತೆ ಮಾಹಿತಿ ಒದಗಿಸಬಹುದು! ಹೇಗಿದೆ ಐಡಿಯಾ!

• ಸಂಜೀವ ಆರ್. ಹಲವಾಯಿ

# ನಿಮ್ಮ ಶರೀರ: ನಿಮಗೆಷ್ಟು ಗೊತ್ತು?

**ಮ**ನುಷ್ಯನ ಮಿದುಳಿನ ಗಾತ್ರ ಗೋರಿಲ್ಲಾದ ಮಿದುಳಿನ ಗಾತ್ರಕ್ಕಿಂತ ಹತ್ತುಪಟ್ಟು ಹೆಚ್ಚು ಮತ್ತು ಅದರ ಸರಾಸರಿ ತೂಕ ಒಂದೂ ಕಾಲು ಕಿಲೋಗ್ರಾಮುಗಳಷ್ಟು.

ದೇಹದಲ್ಲಿರುವ ರಕ್ತನಾಳಗಳ ಒಟ್ಟು ಉದ್ದ ೯೬,೫೬೦ ಕಿಲೋಮೀಟರುಗಳಷ್ಟು ಅರ್ಥಾತ್ ಅರವತ್ತು ಸಾವಿರ ಮೈಲಿಗಳಷ್ಟು.

ಮಾನವನ ಅಸ್ಥಿಪಂಜರದಲ್ಲಿ ೨೦೬ ಎಲಬುಗಳಿವೆ.

ಆರೋಗ್ಯವಂತ ವಯಸ್ಕನ ಯಕೃತ್ತಿನ ಸರಾಸರಿ ತೂಕ ೨ ಕಿಲೋಗ್ರಾಮುಗಳಷ್ಟು.

ಅವನ ಸಣ್ಣ ಕರುಳಿನ ಉದ್ದ ಆರು ಮೀಟರುಗಳಷ್ಟು. (೨೦ ಅಡಿಗಳು.)

ನಿಧಾನವಾಗಿ ಉಸಿರಾಡುವಾಗ ಸುಮಾರು ಅರ್ಧ ಲೀಟರಿನಷ್ಟು ಹವೆಯನ್ನು ನಮ್ಮ ಶ್ವಾಸಕೋಶಗಳು ಒಳಗೆ ತೆಗೆದುಕೊಳ್ಳುತ್ತವೆ. ಆದರೆ ದೀರ್ಘವಾಗಿ ಉಸಿರೆಳೆದುಕೊಂಡಾಗ ಅವು ಐದು ಲೀಟರಿನಷ್ಟು ಹವೆಯನ್ನು ಹಿಡಿಯಬಲ್ಲವು!

ನಮ್ಮ ದೇಹದಲ್ಲಿ ಅದರ ತೂಕದ ಶೇಕಡಾ ೧೦ ರಷ್ಟು ಕೊಬ್ಬಿನ ಸಂಗ್ರಹವಿದೆ.

ನಮ್ಮ ನಾಲಿಗೆಯು ನಾಲ್ಕು ವಿಧದ ರುಚಿಗಳನ್ನು ಮಾತ್ರ ಗುರುತಿಸಬಲ್ಲುದು. ೧)ಸಿಹಿ ೨)ಹುಳಿ ೩) ಉಪ್ಪು ೪) ಕಹಿ.

ನಮ್ಮ ದೇಹದಲ್ಲಿ ಮೂರು ವಿಧದ ಸ್ನಾಯುಗಳಿದ್ದು ಅವುಗಳಲ್ಲಿ ಐಚ್ಛಿಕ ಸ್ನಾಯುಗಳಿಂದ ನಮ್ಮ ಅಂಗಾಂಗಗಳ ಚಲನವಲನ ಸಾಧ್ಯವಾಗಿದೆ. ಅನೈಚ್ಛಿಕ ಸ್ನಾಯುಗಳು ಕೇಂದ್ರ ನರಮಂಡಲದ ನಿಯಂತ್ರಣದಲ್ಲಿದ್ದು ಜೀರ್ಣನಾಳದಲ್ಲಿ ಆಹಾರ ಸಾಗಿಸುವಂಥ ಕಾರ್ಯಗಳನ್ನು ನಿರ್ವಹಿಸುವವು. ಹೃದಯ ಸ್ನಾಯುಗಳು ಹೃದಯದ ತಾಳಬದ್ಧ ಸಂಕೋಚನ ವಿಕಸನಗಳಿಗೆ ಕಾರಣವಾಗಿವೆ.

ಮಾನವನ ದೇಹದ ಜೀವಕೋಶಗಳ ಸರಾಸರಿ ವ್ಯಾಸ ೧ ೫೦ ರಿಂದ ೧ ೧೦೦ ಮಿ.ಮಿ. ಆದರೆ ಮಿದುಳಿನ ಕೆಲ ವಿಶೇಷ ಕೋಶಗಳು ೧ ೨೦೦ ಮಿಲಿ ಮೀಟರನಷ್ಟು ಚಿಕ್ಕವಾಗಿವೆ. ಮನುಷ್ಯನ ದೇಹದಲ್ಲಿ ೧೩,೦೦೦ ಮಿಲಿಯನ್ ನರಕೋಶಗಳಿವೆ. ಒಂದು ಘನ ಮಿಲಿ ಮೀಟರ್ ರಕ್ತದಲ್ಲಿ ೬೦ ಲಕ್ಷ ಕೆಂಪು ರಕ್ತ ಕಣಗಳು ಮತ್ತು ೫,೦೦೦ ದಿಂದ ೧೦,೦೦೦ ಬಿಳಿಯ ರಕ್ತ ಕಣಗಳಿವೆ. ಮನುಷ್ಯನಲ್ಲಿರುವ ಒಟ್ಟು ಜೀವಕೋಶಗಳ ಸಂಖ್ಯೆ ೧೦೦ ಮಿಲಿಯನ್ ಮಿಲಿಯನ್.

• ಶಿವಕುಮಾರ ಮುರಗೋಡ

# ಕೋಲಂಬಿಯದ ಎರಡು ಮುಖಗಳು

ಮಾದಕ ವಸ್ತುಗಳ ಸ್ವರ್ಗ, ಭೂಗತ ಜಗತ್ತಿನ ವೈವಿಧ್ಯಮಯ ವ್ಯವಹಾರಗಳ ಕೇಂದ್ರಸ್ಥಾನವೆಂದೇ ಈ ದೇಶ ಪ್ರಸಿದ್ಧ. ಅಮೆರಿಕೆಯಲ್ಲಿರುವ ಅದು ಮಾದಕ ವಸ್ತುವಾದ ಕೊಕೇನಿನ ಉತ್ಪಾದನೆ ಮತ್ತು ಕಳ್ಳಸಾಗಾಟದಲ್ಲಿ ಜಾಗತಿಕ ಮಟ್ಟದಲ್ಲಿ ಗುರುತಿಸಲ್ಪಟ್ಟ ರಾಷ್ಟ್ರ. ಬೊಲಿವಿಯಾ ಹಾಗೂ ಪೆರು ರಾಷ್ಟ್ರಗಳಲ್ಲಿ ಉತ್ಪಾದನೆಯಾದ ಕೊಕ್ರೇನ್ ಕೂಡ ಕೊಲಂಬಿಯಕ್ಕೆ ಸಾಗಿಸಲ್ಪಟ್ಟು ಅಲ್ಲಿಂದ ಬಿಕರಿಯಾಗುತ್ತದೆ. ಎಲ್ಲ ದೇಶಗಳಲ್ಲಿರುವಂತೆ ಇಲ್ಲಿಯೂ ಮಾದಕವಸ್ತುಗಳ ಕಳ್ಳಸಾಗಾಟವನ್ನು ತಡೆಯಲು ಕಠಿಣವಾದ ಕಾನೂನುಗಳಿದ್ದರೂ ವ್ಯವಹಾರ ಸಾಗಿಯೇ ಇದೆ.

ಅಮೆರಿಕಾ ಒಂದರಲ್ಲಿಯೇ ಇಂದು ಕೊಕೇನ್ ವ್ಯಸನಿಗಳ ಸಂಖ್ಯೆ ಎಷ್ಟು ಏರುಮುಖವಾಗಿದೆ ಎನ್ನುವುದಕ್ಕೆ ಅಲ್ಲಿನ ಸಿನೆಟ್ ಸಮಿತಿಯ ಇತ್ತೀಚಿನ ವರದಿಯೇ ಸಾಕ್ಷಿ. ಆ ದೇಶದಲ್ಲಿಂದು ಇಪ್ಪತ್ತೆರಡು ಲಕ್ಷ ಜನ ಈ ಚಟಕ್ಕೆ ಅಂಟಿಕೊಂಡಿದ್ದಾರಂತೆ. ಅಷ್ಟೇ ಅಲ್ಲ, ಅಮೆರಿಕದ ಜೈಲುಗಳಲ್ಲಿರುವ ಪ್ರತಿ ಐವರು ಕೈದಿಗಳ ಪೈಕಿ ಒಬ್ಬಾತ ಇಂತಹ ವ್ಯವಹಾರಗಳಲ್ಲಿ ಸಿಕ್ಕಿ ಹಾಕಿಕೊಂಡವನಾಗಿದ್ದಾನೆ ಎಂದೂ ಆ ವರದಿ ಹೇಳುತ್ತದೆ.

ಇದು ಕೋಲಂಬಿಯದ ಮಾಫಿಯಾ ಜಗತ್ತಿನ ಬೆಳವಣಿಗೆಯ ಒಂದು ನೋಟ. ಆದರೆ ಕೋಲಂಬಿಯಾಕ್ಕೆ ಇನ್ನೊಂದು ಮುಖವೂ ಉಂಟು. ಅದು ಆ ನೆಲವನ್ನು ಪ್ರೀತಿಸುವಂಥಾದ್ದು. ಸುಮಧುರ ಭಾವನೆಗಳನ್ನು ಜಗತ್ತಿನ ತುಂಬಾ ಪಸರಿಸುವಂಥಾದ್ದು. ಅಲ್ಲಿನ ಸಾಮಾನ್ಯ ಜೀವಿಯೊಬ್ಬನ ಬದುಕನ್ನು ಹಸನುಗೊಳಿಸುವಂಥಾದ್ದು. ಹೂಗಳ ರಫ್ತು ವ್ಯವಹಾರವೇ ಆ ರಾಷ್ಟ್ರದ ಮತ್ತೊಂದು ಮುಖ.

ಇಂದು ಕೊಲಂಬಿಯಾದ ಪ್ರತಿ ವ್ಯಕ್ತಿಯ ಸರಾಸರಿ ಆದಾಯ ೧೪೦೦ ಅಮೆರಿಕನ್ ಡಾಲರು (ಸುಮಾರು ೪೪,೦೦೦ ರೂಪಾಯಿಗಳು) ಇದರ ಬಹುಪಾಲು ಬರುವುದು ಬರಿ ಹೂಗಳ ಕೃಷಿಯಿಂದ. ಹೂವಿನ ರಫ್ತು ವ್ಯವಹಾರದಲ್ಲಿ ಹಾಲಂಡಿನ ನಂತರ ಕೊಲಂಬಿಯದ್ದೇ ಸ್ಥಾನ. ಗುಲಾಬಿ, ಸೇವಂತಿಕೆಯನ್ನೊಳಗೊಂಡಂತೆ ಇನ್ನೂ ಕೆಲವು ಜಾತಿಯ ಹೂವುಗಳು ಅಲ್ಲಿಂದ ಜಗತ್ತಿನ ವಿವಿಧ ಭಾಗಗಳಿಗೆ ರಫ್ತಾಗುತ್ತವೆ. ಪ್ರತಿವರ್ಷ ೫೦ ಕೋಟಿ ಡಾಲರುಗಳಷ್ಟು ವಿದೇಶೀ ವಿನಿಮಯವನ್ನು ದೇಶಕ್ಕೆ ಗಳಿಸಿಕೊಡುತ್ತವೆ. ಅಲ್ಲಿಯ ಪ್ರತಿಯೊಬ್ಬ ಕೃಷಿಕನೂ ಕನಿಷ್ಟ ಅರ್ಧ ಹೆಕ್ಟೇರ್‌ನಿಂದ ಹಿಡಿದು ೩೦೦ ಹೆಕ್ಟೇರುಗಳವರೆಗಿನ ಪ್ರದೇಶದಲ್ಲಿ ಹೂವುಗಳನ್ನು ಬೆಳೆಯುವ ಮೂಲಕ ಬಣ್ಣಗಳ ಚಿತ್ತಾರ ಮೂಡಿಸುತ್ತಿದ್ದಾನೆ.

• ಹರೀಶ್ ಪುತ್ತೂರಾಯ

# ಸಕ್ಕರೆ ತಯಾರಿಸುವ ಮೂಲಗಳು

• ಎಚ್. ಗವಿಸಿದ್ದಯ್ಯ

ಸಕ್ಕರೆಯನ್ನು ಕಬ್ಬಿನಿಂದ ತಯಾರಿಸುವುದರ ಜೊತೆಗೆ ಬೀಟ್‌ರೂಟ್, ಮಾಪಲ್ ಮರ, ತಾಳೆ, ಮರಗೆಣಸು, ನೀಪ್ ಸಸ್ಯ ಮುಂತಾದವುಗಳಿಂದಲೂ ತಯಾರಿಸಲಾಗುವುದು.

ಎಲ್ಲಾ ಸಸ್ಯಗಳು ದ್ಯುತಿಸಂಶ್ಲೇಷಣೆಯ ಮೂಲಕ ತಮ್ಮ ಆಹಾರವನ್ನು ಸಕ್ಕರೆಯ ರೂಪದಲ್ಲಿ ತಯಾರಿಸಿಕೊಳ್ಳುತ್ತವೆ. ಮೊದಲು ಅವು ಸರಳ ರೂಪದ ಸಕ್ಕರೆಯಾದ ಗ್ಲೂಕೋಸ್ ಮತ್ತು ಫ್ರುಕ್ಟೋಸ್‌ಅನ್ನು ತಯಾರಿಸುವವು. ಸಸಿ ದೊಡ್ಡದಾಗಿ ಬೆಳೆದು ಮರವಾದ ಮೇಲೆ ತಾನು ತಯಾರಿಸಿದ ಎಲ್ಲಾ ಆಹಾರವನ್ನೂ ತಾನೇ ಉಪಯೋಗಿಸಿಕೊಳ್ಳುವುದಿಲ್ಲ. ಆ ಆಹಾರದಲ್ಲಿನ ಸ್ವಲ್ಪ ಭಾಗ ಸಕ್ಕರೆ, ಪೊಟ್ಯಾಷ್, ಪಿಷ್ಟ, ಶರ್ಕರಪಿಷ್ಟ ಮುಂತಾದವುಗಳಾಗಿ ಮಾರ್ಪಾಡಾಗುವುದು. ಅದನ್ನು ಬೇರು, ಕಾಂಡ, ಎಲೆ, ಹೂವು, ಬೀಜ, ಮುಂತಾದವುಗಳಲ್ಲಿ ಸಸ್ಯವು ಶೇಖರಿಸಿಟ್ಟುಕೊಳ್ಳುವುದು. ಹೀಗೆ ಶೇಖರಿಸಿದ ಆಹಾರವನ್ನದು ಅನಾವೃಷ್ಟಿ, ಕಠೋರವಾದ ಚಳಿಗಾಲ, ಸತತ ಮಳೆಗಾಲ ಮುಂತಾದ ವೇಳೆಗಳಲ್ಲಿ ಉಪಯೋಗಿಸಿಕೊಳ್ಳುತ್ತದೆ. ಆದರೆ ಸಸ್ಯವು ಈ ರೀತಿ ಶೇಖರಿಸಿದ ಆಹಾರವನ್ನೇ ಬಹಳಷ್ಟು ಜನ ಅವಲಂಬಿಸಿದ್ದಾರೆ. ಅಂದರೆ ನಾವು ಉಪಯೋಗಿಸುವ ಸಕ್ಕರೆಯು ಸಸ್ಯವು ಆಪತ್ಕಾಲದಲ್ಲಿ ಉಪಯೋಗಿಸಬೇಕೆಂದಿರುವ ಆಹಾರವೇ ಆಗಿದೆ.

ಬೀಟ್‌ರೂಟ್- ಬೇರಿನಲ್ಲಿ ಸಕ್ಕರೆಯನ್ನು ಶೇಖರಿಸುವ ಸಸ್ಯವಿದು. ಇದರಿಂದ ಸಕ್ಕರೆಯನ್ನು ತಯಾರಿಸುವ ವಿಧಾನವನ್ನು ಕಂಡುಹಿಡಿದಾತ ಜರ್ಮನಿಯ ಮಾರ್ಗರಫ್ ಎಂಬ ರಸಾಯನ ಶಾಸ್ತ್ರಜ್ಞ. ಬೀಜಗಳನ್ನು ಬಿತ್ತಿ ಇದನ್ನು ಬೆಳೆಯುವರು. ಬೀಟ್‌ರೂಟಿನಲ್ಲಿ ಶೇಕಡಾ ೨೪ ರಿಂದ ೨೬ರಷ್ಟು ಸಕ್ಕರೆಯ ಅಂಶವಿದೆ.

ಬೀಟ್‌ರೂಟನ್ನು ಸಣ್ಣ ಹೋಳುಗಳಾಗಿ ಕತ್ತರಿಸಿ, ಅವುಗಳ ಮೇಲೆ ಬಿಸಿನೀರನ್ನು ಸುರಿದು ಒತ್ತಡಕ್ಕೊಳಪಡಿಸಿ, ತನ್ಮೂಲಕ ಹೊರಬಂದ ಸಿಹಿ ದ್ರವವನ್ನು ಶೇಖರಿಸಲಾಗುವುದು. ಹೀಗೆ ಶೇಖರಿಸಿದ ದ್ರವದಿಂದ ಸಕ್ಕರೆಯನ್ನು ತಯಾರಿಸುತ್ತಾರೆ. ನಮ್ಮ ದೇಶದಲ್ಲಿ ಬೀಟ್‌ರೂಟಿನಿಂದ ಸಕ್ಕರೆ ತಯಾರಿಸುವುದನ್ನು ೧೯೫೯ರಿಂದ ಪ್ರಾರಂಭಿಸಲಾಯಿತು.

ರಾಜಸ್ಥಾನದ ಗಂಗಾನಗರ್, ತಮಿಳುನಾಡಿನ ಪಾಲಾಕೋಡ್ ಎಂಬಲ್ಲಿ ಬೀಟ್‌ರೂಟಿನಿಂದ ಸಕ್ಕರೆಯನ್ನು ತಯಾರಿಸುತ್ತಾರೆ. ಸಕ್ಕರೆಯನ್ನು ತಯಾರಿಸಿದ ನಂತರ ಸಸ್ಯದ ಉಳಿದ ಭಾಗವು ದನಕರುಗಳಿಗೆ ಉತ್ತಮವಾದ ಆಹಾರವಾಗುತ್ತದೆ.

ಮಾಪಲ್ ಮರ-- ಅಮೆರಿಕದಲ್ಲಿ ಈ ಮರ ವಿಶೇಷವಾಗಿ ಬೆಳೆಯುವುದು. ಮರದ ಕಾಂಡವನ್ನು ಚಾಕುವಿನಿಂದ ಗೀರಿದಾಗ ದ್ರವ ಸೋರಲು ಪ್ರಾರಂಭವಾಗುವುದು. ಹೀಗೆ ಸೋರುವ ದ್ರವವನ್ನು ಕಡಾಯಿಗಳಲ್ಲಿ ಶೇಖರಿಸಲಾಗುವುದು. ಅನಂತರ ಅದನ್ನು ಕುದಿಸಿ

## ಜ್ಞಾನನಿಧಿ

ಸಕ್ಕರೆಯನ್ನು ತಯಾರಿಸುತ್ತಾರೆ. ರಶಿಯ ಹಾಗೂ ಅಮೆರಿಕದ ಕ್ಯಾಲಿಫೋರ್ನಿಯಾ ಮತ್ತು ಕೊಲರಾಡೋ ರಾಜ್ಯಗಳಲ್ಲಿ ಹೀಗೆ ಮಾಪಲ್ ಮರದಿಂದ ಗಣನೀಯ ಪ್ರಮಾಣದಲ್ಲಿ ಸಕ್ಕರೆಯನ್ನು ತಯಾರಿಸಲಾಗುತ್ತದೆ.

ಮರಗೆಣಸು- ಇದು ಮುಖ್ಯವಾಗಿ ಉಷ್ಣವಲಯದ ಬೆಳೆ. ದಕ್ಷಿಣ ಅಮೆರಿಕದಲ್ಲಿ ಹೆಚ್ಚಾಗಿ ಬೆಳೆಸಲಾಗುತ್ತಿದೆ. ಇದು ಆಹಾರವನ್ನು ಪಿಷ್ಟ ರೂಪದಲ್ಲಿ ಶೇಖರಿಸುವುದು. ಕಬ್ಬಿನಂತೆ ೯ ರಿಂದ ೧೦ ತಿಂಗಳ ಬೆಳೆ. ಮರಗೆಣಸಿನಲ್ಲಿರುವ ಪಿಷ್ಟವನ್ನು ಹೊರತೆಗೆದು ಗ್ಲೂಕೋಸ್ ಆಗಿ ಮಾರ್ಪಡಿಸಲಾಗುವುದು. ಇದನ್ನು ಐಸ್‌ಕ್ರಿಮ್ ಔಷಧಿ, ಪಾನೀಯ ಮುಂತಾದವುಗಳ ತಯಾರಿಕೆಯಲ್ಲಿ ಉಪಯೋಗಿಸುವುದು ಬಹಳ.

ದಕ್ಷಿಣ ಅಮೆರಿಕದ ಬ್ರೆಜಿಲ್ ಮತ್ತು ಅರ್ಜಂಟಿನಾಗಳಲ್ಲಿ ಮರಗೆಣಸಿನಿಂದ ತೆಗೆದ ಗ್ಲೂಕೋಸ್ ಅನ್ನು ಮದ್ಯಸಾರವನ್ನಾಗಿ ಮಾರ್ಪಡಿಸಿ ಪೆಟ್ರೋಲ್‌ನ ಬದಲಿ ಇಂಧನವಾಗಿ ಬಳಸುತ್ತಾರೆ.

ನೀಪ್ ಮರ- ತಾಳೆ ಮರವನ್ನು ಹೋಲುವ ಈ ಮರದಿಂದ ಸಕ್ಕರೆಯನ್ನು ತಯಾರಿಸಬಹುದೆಂಬುದನ್ನು ಇಂಡೋನೇಶಿಯದ ಸಂಶೋಧನಾ ಸಂಸ್ಥೆಯೊಂದು ಕಂಡುಹಿಡಿಯಿತು. ಈ ಮರ ಆ ದೇಶದಲ್ಲೆಲ್ಲ ಬೆಳೆಯುವುದು. ಉಷ್ಣವಲಯದ ಬೆಳೆಯಾದರೂ ಆಗ್ನೇಯ ಏಶಿಯದ ದೇಶಗಳ ಜವುಗು ಪ್ರದೇಶಗಳಲ್ಲಿ ವಿಶೇಷವಾಗಿ ನೋಡಸಿಗುತ್ತದೆ. ಕಬ್ಬಿಗಿಂತಲೂ ಈ ಮರದಲ್ಲಿ ಸಕ್ಕರೆಯ ಪ್ರಮಾಣ ಹೆಚ್ಚು.

**ಮೆಕ್ಕೆ ಜೋಳ**- ಉಷ್ಣವಲಯದ ಪ್ರದೇಶಗಳಲ್ಲಿ ಮೆಕ್ಕೆ ಜೋಳವನ್ನು (ಗೋವಿನ ಜೋಳ) ವಿಶೇಷವಾಗಿ ಬೆಳೆಯಲಾಗುತ್ತದೆ. ಇದು ಐದಾರು ಅಡಿಗಳಷ್ಟು ಉದ್ದವಾಗಿ ಬೆಳೆಯುವುದು. ಮೂರು ತಿಂಗಳ ಬೆಳೆ. ಕಾಳಿನಲ್ಲಿಯ ಪಿಷ್ಟದಿಂದ 'ಫ್ರಕ್ಟೋಸ್' ಎನ್ನುವ ಸಕ್ಕರೆಯನ್ನು ತಯಾರಿಸುವರು. ಇದು ಸುಕ್ರೋಸ್ ಮತ್ತು 'ಗ್ಲೂಕೋಸ್'ಗಿಂತಲೂ ಸಿಹಿಯಾಗಿರುವುದು. ಈ ವಿಧದ ಸಕ್ಕರೆಯನ್ನು ತಯಾರಿಸುವ ಮುಖ್ಯ ದೇಶಗಳೆಂದರೆ ಅಮೆರಿಕ ಮತ್ತು ಜಪಾನ್. ಈ ಸಕ್ಕರೆಯನ್ನು ಔಷಧಿ, ಐಸ್‌ಕ್ರೀಮ್, ಬೇಕರಿ ಪದಾರ್ಥಗಳು ಮತ್ತು ಪಾನೀಯಗಳ ತಯಾರಿಕೆಯಲ್ಲಿ ಬಳಸುತ್ತಾರೆ.

ಈಚಲು, ತೆಂಗು, ಖರ್ಜೂರ ಮುಂತಾದ ಮರಗಳಿಂದ ತೆಗೆದ ದ್ರವದಲ್ಲಿಯೂ ಸಕ್ಕರೆಯ ಅಂಶವಿದೆ. ಅದರಿಂದ ಬೆಲ್ಲವನ್ನು ತಯಾರಿಸಲಾಗುತ್ತದೆ. ●

---

**ಜ**ಗತ್ತಿನಲ್ಲಿ ಅತಿ ಹೆಚ್ಚು ಬೆಳೆಯುವ ತರಕಾರಿ ಯಾವು ಗೊತ್ತೆ? ಅನೇಕರು ಭಾವಿಸಿದ ಹಾಗೆ ಬಟಾಟೆಯಂತೂ ಖಂಡಿತ ಅಲ್ಲ.

ಇಂದು ನೀರುಳ್ಳಿಯ ವಾರ್ಷಿಕ ಉತ್ಪಾದನೆ ಅಂದಾಜು ಎರಡು ನೂರು ಕೋಟಿ ಪೌಂಡುಗಳಷ್ಟು. ಅದರ ಸ್ಥಾನವನ್ನು ಬಟಾಟೆಯ ಆಕ್ರಮಿಸಲು ಇನ್ನೂ ಬಹಳ ಕಾಲ ಬೇಕು.

ಅಂದ ಹಾಗೆ ನೀರುಳ್ಳಿಗೆ ಇಂಗ್ಲೀಷಿನಲ್ಲಿ 'ಆನಿಯನ್' ಎಂದು ಕರೆಯುತ್ತಾರಲ್ಲ, ಏಕೆ? ಪ್ರಾಚೀನ ಗ್ರೀಕರಿಗೆ ಅದು ದೊಡ್ಡ ಮುತ್ತಿನ ಹಾಗೆ ಕಂಡಿತು, ಅದಕ್ಕೆ. ಗ್ರೀಕ್ ಭಾಷೆಯಲ್ಲಿ 'ಆನಿಯೋ' ಎಂದರೆ ಮುತ್ತು 'ಆನಿಯೋ' ಇಂಗ್ಲೆಂಡಿನವರ ಬಾಯಲ್ಲಿ 'ಆನಿಯನ್' ಆಯಿತು.

# ಜಗತ್ತಿನಲ್ಲೇ ಅತಿ ಜಾರಿಕೆಯ ವಸ್ತು!

**ಕೊ**ಲೆಸ್ಟಿರಾಲ್ ಹೆಚ್ಚಾದರೆ ಹೃದಯಾಘಾತ, ಅದನ್ನು ತಡೆಗಟ್ಟಬೇಕೆಂದರೆ ಜಿಡ್ಡಿನಿಂದ ಆದಷ್ಟು ದೂರವಿರಬೇಕು ಎಂದು ಪ್ರತಿಯೊಬ್ಬ ಡಾಕ್ಟರರೂ ಹೇಳುತ್ತಾರೆ. ಹಾಗಾದರೆ ಎಣ್ಣೆಯನ್ನು ಉಪಯೋಗಿಸದೆ ದೋಸೆಯನ್ನಾಗಲಿ ಚಪಾತಿಯನ್ನಾಗಲಿ ಮಾಡುವುದು ಹೇಗೆ? ಅದಕ್ಕಾಗಿಯೇ ಬಂದಿವೆ ನಾನ್‌ಸ್ಟಿಕ್ ಪಾತ್ರೆಗಳು.

ಈ ನಾನ್‌ಸ್ಟಿಕ್ ಪಾತ್ರೆಗಳಿಗೆ ಪಿ.ಟಿ.ಎಫ್.ಈ. ಪುಡಿಯೇ ಆಧಾರ. ಅದಿಲ್ಲದಿದ್ದರೆ ಇಂಥಾ ಪಾತ್ರೆಗಳನ್ನು ತಯಾರಿಸಲು ಸಾಧ್ಯವೇ ಇಲ್ಲ. ಪಿ.ಟಿ.ಎಫ್.ಈ. ಎಂದರೆ ಪಾಲಿಟೆಟ್ರಾಫ್ಲೂರೋ ಎಥಿಲೀನ್. ಹೆಸರು ಉದ್ದವಾಗಿರುವುದರಿಂದ ವ್ಯಾವಹಾರಿಕವಾಗಿ ಪಿ.ಟಿ.ಎಫ್.ಈ. ಎಂದು ಕರೆಯಲಾಗುತ್ತದೆ. ಗಿನ್ನಿಸ್ ದಾಖಲೆ ಪುಸ್ತಕದ ಪ್ರಕಾರ ಇದು ಜಗತ್ತಿನಲ್ಲಿಯೇ ಅತಿ ಜಾರಿಕೆಯ ವಸ್ತುವೂ ಹೌದು. ಪಿ.ಟಿ.ಎಫ್.ಈ. ಪುಡಿಯನ್ನು ನೀರಿನಲ್ಲಿ ಕದಡಿ, ತವದ ಮೇಲೆ ಸಿಂಪಡಿಸಿ ಪಾತ್ರೆಗಳನ್ನು ಸುಟ್ಟಾಗ ಅದು ಪಾತ್ರೆಗೆ ಗಟ್ಟಿಯಾಗಿ ಅಂಟಿಕೊಳ್ಳುತ್ತದೆ. ಕಾರಖಾನೆಗಳಲ್ಲಿ ನಾನ್‌ಸ್ಟಿಕ್ ಪಾತ್ರೆಗಳು ತಯಾರಾಗುವುದು ಈ ರೀತಿಯಲ್ಲೇ.

೧೯೩೮ರಲ್ಲಿ ಡಾ. ರಾಯ್ ಪ್ಲಂಕೆಟ್ ಎನ್ನುವವರು ಇದನ್ನು ಆಕಸ್ಮಾತ್ತಾಗಿ ಕಂಡುಹಿಡಿದರು. ಪಿ.ಟಿ.ಎಫ್.ಈ. ಅತಿ ಹೆಚ್ಚು ಹಾಗೂ ಅತಿ ಕಡಿಮೆ ಉಷ್ಣತೆಯನ್ನು ನಿರೋಧಿಸುವುದಲ್ಲದೆ ತನ್ನ ಮೂಲಕ ವಿದ್ಯುತ್ತನ್ನೂ ಹರಿಯಗೊಡುವುದಿಲ್ಲ. ನೀವು ಉಪಯೋಗಿಸುವ ಟೆಫ್ಲಾನ್ ಸವರಿದ ಪಾತ್ರೆಗಳು ಬೇರೆಯಲ್ಲ, ಪಿ.ಟಿ.ಎಫ್.ಈ. ಲೇಪಿಸಲ್ಪಟ್ಟ ಪಾತ್ರೆಗಳು ಬೇರೆಯಲ್ಲ. ಟೆಫ್ಲಾನ್ ಎನ್ನುವುದು ಒಂದು ಟ್ರೇಡ್‌ಮಾರ್ಕ್ ಅಷ್ಟೆ.

೧೯೪೮ ರಿಂದ ಈ ವಸ್ತುವನ್ನು ಕೈಗಾರಿಕೆಯಲ್ಲಿ ಬಳಸಲಾಗುತ್ತಿತ್ತು. ಹೀಗಿರುತ್ತಿರಲು ೧೯೫೦ರಲ್ಲೊಂದು ದಿನ ಫ್ರೆಂಚ್ ಗೃಹಿಣಿಯೊಬ್ಬಳು ಮೀನಿನ ಬಲೆ ಗೋಜಲಾಗುವುದನ್ನು ತಪ್ಪಿಸಲು ತನ್ನ ಗಂಡ ಬಲೆಗೆ ಪಿ.ಟಿ.ಎಫ್.ಈ. ಸವರುವುದನ್ನು ನೋಡಿ, ತವದ ಮೇಲೂ ಅದನ್ನು ಸವರುವಂತೆ ಗಂಡನಿಗೆ ಸೂಚಿಸುವವರೆಗೆ ಅಡುಗೆ ಪಾತ್ರೆಗಳಿಗೆ ಈ ವಸ್ತುವನ್ನು ಉಪಯೋಗಿಸಬಹುದೆಂಬ ವಿಚಾರ ಯಾರಿಗೂ ಹೊಳೆದಿರಲಿಲ್ಲ. ಪಿ.ಟಿ.ಎಫ್.ಈ.ಅನ್ನು ಪಾತ್ರೆಗಳಿಗೆ ಸವರಿದಾಗ ಪರಿಣಾಮ ಅದ್ಭುತವಾಗಿತ್ತು. ಅದರ ಮೇಲೆ ಆಹಾರವನ್ನು ಬೇಯಿಸಿದಾಗ ಒಂದೇ ಒಂದು ಕಣವೂ ಅದರ ಮೇಲೆ ಅಂಟಿಕೊಳ್ಳಲಿಲ್ಲ. ಅವಳ ಗಂಡ ಮ್ಯಾಕ್ ಗ್ರಿಗೋಕ್ ನಾನ್‌ಸ್ಟಿಕ್ ತವಗಳನ್ನು ತಯಾರಿಸಿ ಕೋಟ್ಯಂತರ ಹಣ ಮಾಡಿಕೊಂಡ. ಅವನ ಅದ್ಭುತ ಯಶಸ್ಸನ್ನು ಕಂಡು ಇತರರೂ ಇಂತಹ ತವೆಗಳನ್ನು ತಯಾರಿಸತೊಡಗಿದರು. ಇಂದು ಫ್ರಾನ್ಸಿನಲ್ಲಿ ಮಾತ್ರವೇ ಅಲ್ಲ, ಇಡೀ ಜಗತ್ತಿನಲ್ಲೆ ಪಿ.ಟಿ.ಎಫ್.ಈ. ಸವರಿದ ಪಾತ್ರೆಗಳು ಜನಪ್ರಿಯವಾಗಿವೆ.

• ಟಿ.ಎಸ್. ಲಲಿತ

# ಅಪಾಯಕಾರಿ ಶಾರ್ಕ್ ಮೀನು

ಶಾರ್ಕ್ ಮೀನುಗಳಲ್ಲಿ ಇಪ್ಪತ್ತೈದು ವಿಧ. ಅವುಗಳನ್ನು ಪ್ರಪಂಚದ ಎಲ್ಲ ಕಡಲುಗಳಲ್ಲೂ ಕಾಣಬಹುದಾದರೂ ಆಸ್ಟ್ರೇಲಿಯ, ಉತ್ತರ ಅಮೆರಿಕದ ಶಾಂತಸಾಗರ ತೀರ, ಆಫ್ರಿಕದ ಆಗ್ನೇಯತೀರ ಹಾಗೂ ಅಟ್ಲಾಂಟಿಕ್ ಉಷ್ಣವಲಯದಲ್ಲಿ ಕಂಡುಬರುವ ಪ್ರಭೇದ ಅಪಾಯಕರವಾದದ್ದು.

ಶಾರ್ಕ್‌ಗಳಲ್ಲಿ ಮಹಾ ಅಪಾಯಕಾರಿಯಾದದ್ದು ಭೂಮಧ್ಯ ಸಮುದ್ರದಲ್ಲಿ ಕಂಡುಬರುವ ಬಿಳಿ ಬಣ್ಣದ 'ಗ್ರೇಟ್ ವೈಟ್ ಶಾರ್ಕ್' ಎಂಬ ಜಾತಿ ಪ್ರಭೇದ. ಇದರ ನಂತರದ ಸ್ಥಾನ ಟೈಗರ್‌ಶಾರ್ಕ್‌ಗಳಿಗೆ. ಬಾಗಿದ ಚೂಪಾದ ಹಲ್ಲುಗಳಿಂದ ಇವು ಮನುಷ್ಯನ ಕಾಲನ್ನು ಕತ್ತರಿಸಬಲ್ಲವು.

ಶಾರ್ಕ್ ಮೀನಿನ ಮೂಗು ಬಹಳ ಸೂಕ್ಷ್ಮ. ನೀರಿನಲ್ಲಿ ಸ್ವಲ್ಪ ರಕ್ತಬಿದ್ದಿದ್ದರೂ ಅದರ ಜಾಡನ್ನು ದೂರದಿಂದಲೇ ಕಂಡುಹಿಡಿದು ಧಾವಿಸುವುದು. ಆ ವೇಳೆಯಲ್ಲಿ ಯಾವ ವಸ್ತುವು ಅಡ್ಡ ಬಂದರೂ ಅದರ ಮೇಲೆ ದಾಳಿಯಿಡುವುದು. ಎಷ್ಟೋ ವೇಳೆ ದೋಣಿಗಳನ್ನೇ ಬುಡಮೇಲು ಮಾಡಿದ ಪ್ರಸಂಗಗಳಿವೆ. ಆದ್ದರಿಂದಲೆ ಭೂಮಧ್ಯ ಸಮುದ್ರದಲ್ಲಿ ದೋಣಿಗಳಲ್ಲಿ ಸಂಚರಿಸುವ ನಾವಿಕರು ಸದಾ ಹರಿತವಾದ ಕತ್ತಿಗಳನ್ನು ತಮ್ಮ ಬಳಿ ಇಟ್ಟುಕೊಂಡಿರುತ್ತಾರೆ. ಅಂತಹ ಪ್ರಸಂಗದಲ್ಲಿ ತಾವೂ ಪ್ರತಿದಾಳಿಯಿಕ್ಕಿ ಶಾರ್ಕ್ ಮೀನಿಗೆ ಸರಿಯಾದ ಉತ್ತರ ನೀಡುತ್ತಾರೆ.

ಶಾರ್ಕ್ ಮೀನಿನ ಯಕೃತ್ತಿನಲ್ಲಿ ಎಣ್ಣೆಯ ಸಂಗ್ರಹವಿದೆ. 'ಎ' ಮತ್ತು 'ಡಿ' ಜೀವನಸತ್ವ ಬಹಳವಾಗಿರುವ ಈ ಮೀನೆಣ್ಣೆಯನ್ನು ಔಷಧವಾಗಿ ಉಪಯೋಗಿಸುವುದಿದೆ. ಅಂತೆಯೆ ಬೇಟೆಗಾರರು ಗುಂಪುಗಟ್ಟಿಕೊಂಡು ಶಾರ್ಕ್ ಮೀನುಗಳ ಅನ್ವೇಷಣೆಯಲ್ಲಿ

• ಸಂದೀಪ ಶೆಟ್ಟಿ

# ಹೃದಯಕ್ಕೂ ಒಳ್ಳೆಯದಾದ ಜೀವಸತ್ವ

ನಾವು ಪ್ರತಿದಿನ ತೆಗೆದುಕೊಳ್ಳುವ ಆಹಾರದಲ್ಲಿ ಅನೇಕ ಜೀವಸತ್ವ (ವಿಟಮಿನ್)ಗಳು ಇರುತ್ತವೆ. ಇವು ನಮ್ಮ ದೇಹಕ್ಕೆ ಪೋಷಕಾಂಶಗಳನ್ನು ಒದಗಿಸುತ್ತವೆ. ಬ್ರಿಟಿಶ್ ವಿಜ್ಞಾನಿಯೊಬ್ಬರು ವಿಟಮಿನ್ 'ಸಿ'ಯು ನಮ್ಮ ದೇಹಕ್ಕೆ ಪೋಷಕಾಂಶಗಳನ್ನು ಒದಗಿಸುವುದಲ್ಲದೆ, ಹೃದಯನಾಳಗಳಲ್ಲಿ ಕೊಲೆಸ್ಟೆರಾಲ್ ಶೇಖರವಾಗದಂತೆ ನೋಡಿಕೊಳ್ಳುವುದೆಂದು ಹೇಳಿದ್ದಾರೆ. ಹೀಗಾಗಿ ಆಗ ಧಮನಿಗಳಲ್ಲಿ ರಕ್ತ ಹೆಪ್ಪುಗಟ್ಟುವ ಸಂಭವ ಇರುವುದಿಲ್ಲ. ಆ ಕಾರಣದಿಂದಾಗಿ ಹೃದಯಾಘಾತ ಉಂಟಾಗುವ ಸಂಭವವೂ ಕಡಿಮೆ. ಅದೇ ಸಮಯದಲ್ಲಿ 'ಸಿ' ಜೀವಸತ್ವವು ಕೊಲೆಸ್ಟಿರಾಲ್‌ಅನ್ನು ಯಕೃತ್ತಿನೆಡೆಗೆ ಚಲಿಸುವಂತೆ ಮಾಡುತ್ತದೆ. ಯಕೃತ್ತಿನಲ್ಲಿ ಕೊಲೆಸ್ಟಿರಾಲ್ ಪಿತ್ತರಸದ ಆಮ್ಲವಾಗಿ ಪರಿವರ್ತನೆಗೊಳ್ಳುತ್ತದೆ. 'ಸಿ' ಜೀವಸತ್ವ ಕಣ್ಣು ಹಾಗೂ ಚರ್ಮದ ಆರೋಗ್ಯಕ್ಕೂ ಒಳ್ಳೆಯದು. ಎಲ್ಲ ವೈದ್ಯರೂ ಒಪ್ಪುವುದಿಲ್ಲ ನಿಜ, ಆದರೆ ಅದು ನೆಗಡಿಗೆ ಸಿದ್ಧೌಷಧವೆಂಬ ವಾದವೂ ಇದೆ.

• ಜೆ. ಅನಂತನಾರಾಯಣಸ್ವಾಮಿ

**ನಡವಳಿಕೆ**

# ತಾಳ್ಮೆ

• ತ್ರಿ. ಟಕುಮಾರ್

ಬಹಳ ತಡ ಮಾಡಿ ಗಂಡ ರಾತ್ರಿ ಮನೆಗೆ ಬರುತ್ತಾನೆ. ತುಂಬಾ ಹೊತ್ತು ಕಾದು ಕೋಪದಲ್ಲಿರುವ ಹೆಂಡತಿ ಗಂಡನನ್ನು ಹೀಗೆ ಕೇಳುತ್ತಾಳೆ, "ಗಂಟೆ ಎಷ್ಟು ಗೊತ್ತಾ ನಿಮಗೆ? ಈಗ ನನ್ನ ನೆನಪಾಯಿತಾ ನಿಮಗೆ?"

ಈ ಮಾತಿನಿಂದ ಗಂಡ ಕೋಪದಿಂದ, "ಸಾಕು ನಿಲ್ಲಿಸು ನಿನ್ನ ಪುರಾಣ. ನಿನಗೇನು ಗೊತ್ತು ನನ್ನ ಕೆಲಸದ ಬಗ್ಗೆ?" ಎಂದು ಉತ್ತರ ಕೊಟ್ಟು ಒಳಗೆ ನುಗ್ಗುತ್ತಾನೆ.

ಹೆಂಡತಿ ಇನ್ನಷ್ಟು ಕೋಪದಿಂದ, "ಅಡುಗೆ ಮನೆಯಲ್ಲಿ ನಿಮ್ಮ ಊಟವನ್ನು ಇಟ್ಟಿದ್ದೇನೆ. ಬೇಕಾದ್ರೆ ಊಟ ಮಾಡಿ. ಹಾಂ, ಪಾತ್ರೆಗಳನ್ನು ಮರೆಯದೆ ತೊಳೆದು ಇಡಿ. ನನಗೆ ನಿದ್ರೆ ಬರುತ್ತಿದೆ," ಎಂದು ಹೇಳಿ ಮಲಗಲಿಕ್ಕೆ ಹೋಗಿಬಿಡುತ್ತಾಳೆ. ಗಂಡ ಸರಿಯಾದ ಸಮಯಕ್ಕೆ ಬಂದಿದ್ದರೆ ಈ ಪ್ರಸಂಗ ಎದುರಾಗುತ್ತಿತ್ತೆ?

ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ ಗಂಡ ಹೆಂಡತಿ ಇಬ್ಬರೂ ಒಂದೇ ಸಮಯದಲ್ಲಿ ಕೋಪಿಸಿಕೊಂಡಿರುವುದು. ಒಬ್ಬರು ಏರುದನಿಯಲ್ಲಿ ಮಾತಾಡುತ್ತಿದ್ದರೂ, (ಅವರ ಪಕ್ಷದಲ್ಲಿ ನ್ಯಾಯ ಇದ್ದರೂ) ಇನ್ನೊಬ್ಬರು ಎಂದಿನಂತೆ ನಿಧಾನವಾಗಿ ತಾಳ್ಮೆಯಿಂದ ಉತ್ತರ ಕೊಟ್ಟರೆ ಜಗಳವೇ ಆಗುವುದಿಲ್ಲ, ನ್ಯಾಯ ಇಲ್ಲದಿದ್ದರೂ, ವಿಷಯ ಗೊತ್ತಿಲ್ಲದೆ ಮಾತನಾಡುತ್ತಿದ್ದಾರೆಂದು ಎಣಿಸಿ, ನಗುನಗುತ್ತಾ ಉತ್ತರ ಕೊಟ್ಟರೆ ಇನ್ನೂ ಉತ್ತಮ.

ಒಬ್ಬರು ಒಂದು ಸಮಾರಂಭ ನಡೆಯುತ್ತಿರುವ ಮನೆಗೆ ಹೋಗುತ್ತಾರೆ. ಆ ಮನೆಯಾತ, "ಏನಪ್ಪಾ, ಈಗ ನೆನಪಾಯಿತೇನು ನಮ್ಮ ಮನೆಗೆ ಬರುವ ದಾರಿ?" ಎಂದು ಕೇಳುತ್ತಾರೆ. ಬಂದವನಿಗೆ ಕೋಪ ಬರುತ್ತದೆ. "ಹೌದಯ್ಯ, ನೀನೆಷ್ಟು ಸರ್ತಿ ನನ್ನ ಮನೆಗೆ ಬಂದಿದ್ದಿ ಹೇಳು ನೋಡೋಣ?" ಎಂದು ಕೇಳುತ್ತಾನೆ. ಹೀಗೇ ಚರ್ಚೆ ಜೋರಾಗಿ ಸಾಗಿ ಮನಸ್ತಾಪದಲ್ಲಿ ಕೊನೆಗೊಳ್ಳುತ್ತದೆ. ಈ ಮನಸ್ತಾಪದ ಮೂಲ ಯಾವುದು? ಆ ಮನೆಯಾತ ಬಂದಾತನನ್ನು ಹಾರ್ದಿಕವಾಗಿ ಸ್ವಾಗತಿಸದೆ ವ್ಯಂಗ್ಯವಾಗಿ ಕೇಳಿದ ಪ್ರಶ್ನೆ. ತಾಳ್ಮೆಯಿಂದ ಯೋಚಿಸಿದಾಗ, "ನಾನು ಯಾಕಪ್ಪ ಹಾಗೆ ಕೇಳಿದೆ?" ಎಂದು ಅವರಿಗೆ ಅನಿಸುತ್ತದೆ. ಬಂದಾತ ಕೂಡ, "ಹೌದಪ್ಪ, ನಿಮ್ಮ ಮನೆಗೆ ಬರುವದಕ್ಕೆ ನನಗೆ ಬೇರೆ ಅವಕಾಶವೇ ಸಿಗಲಿಲ್ಲ," ಎಂದು ಸಮಾಧಾನದ ಉತ್ತರ ಕೊಟ್ಟಿದ್ದರೆ ಜಗಳವೇ ಆಗುತ್ತಿರಲಿಲ್ಲ.

"ಕಣ್ಣು ಕಾಣಿಸುವುದಿಲ್ಲವೆ? ನನ್ನ ಮೇಲೆ ಬೀಳುತ್ತಿಯಲ್ಲ?" ಎಂದು ಬಸ್ಸಿನಲ್ಲಿ ಯಾರಾದರೂ ಕೇಳಿದರೆ, "ಚಾಲಕನು ಬ್ರೇಕ್ ಹಾಕಿದರೆ ನಾನೇನು ಮಾಡಲಿ? ಬೇಕಂತಲೆ ನಾನೇನೂ ನಿಮ್ಮ ಮೇಲೆ ಬೀಳಲಿಲ್ಲವಲ್ಲ," ಎಂದು ಹೇಳುವ ಬದಲು, "ಕ್ಷಮಿಸಿರಿ, ತಪ್ಪಾಯಿತು," ಎಂದು ಬಿಟ್ಟರಾಯಿತು. ಜಗಳಕ್ಕೆ ಅವಕಾಶವೇ ಇರುವುದಿಲ್ಲ. ಇಬ್ಬರಲ್ಲಿ ಮೊದಲಿನಾತ ತಣ್ಣಗಾಗಿಬಿಟ್ಟಿರುತ್ತಾನೆ.

ಕೆಲವರಿಗೆ ಕೆಸರಿನಲ್ಲಿ ಇದ್ದು ಅಭ್ಯಾಸ. ಅಂಥವರು ಎಲ್ಲರನ್ನೂ ಕೆಸರಿಗೇ ಎಳೆದುಕೊಳ್ಳಲು ನೋಡುತ್ತಾರೆ. ಅವರಿಗೆ ಅವಕಾಶ ಕೊಡುವುದು ಬೇಡ. ಬದಲು "ನಿನ್ನಷ್ಟು ಕೆಳಗೆ ಇಳಿದು ಬರಕ್ಕಾಗುವುದಿಲ್ಲ ನನಗೆ. ನನ್ನ ಬಟ್ಟೆಗಳು ಸ್ವಚ್ಛವಾಗಿವೆ. ಕೊಳೆ ಮಾಡಿಕೊಳ್ಳಲಿಕ್ಕೆ ನಾನು ತಯಾರಿಲ್ಲ," ಎಂಬ ರೀತಿಯಲ್ಲಿ ಉತ್ತರ ಕೊಡಿ. ಆದರೆ ತಾಳ್ಮೆಗೆಡಬೇಡಿ.

"ಬಿಸಿಯಾದ ವರ್ತನೆಗೆ ಬಿಸಿಯಾಗಿಯೇ ಪ್ರತಿಕ್ರಿಯಿಸುವುದು ಮೃಗದ ಗುಣ. ಶಾಂತವಾದ ಮಾತಿಗೆ ಶಾಂತವಾಗಿಯೇ ಉತ್ತರಿಸುವುದು ಮನುಷ್ಯ ಗುಣ. ಬಿಸಿಯಾದ ಮಾತಿಗೆ ಶಾಂತವಾಗಿ ಮಾತನಾಡುವುದಂತೂ ಅತ್ಯಪರೂಪವಾದ ದೇವ ಗುಣ" ಎಂಬ ಸರ್ ಲುಬ್ಬಾಕ್ ನುಡಿ ನಮಗೆ ಸದಾ ನೆನಪಿನಲ್ಲಿರಲಿ. ●

ಇತಿಹಾಸ

# ಕವಿ-ಕಲಿ ಖಾನ್‌ಖಾನಾ

• ಆದ್ಯ ರಾಮಾಚಾರ್ಯ

"ಹೇ ಕೃಷ್ಣ, ನಿನ್ನ ಮನೋರಂಜನೆಗಾಗಿ ಅನೇಕ ವೇಷಗಳಿಂದ ನಿನ್ನ ಮುಂದೆ ನಾನಾ ರೀತಿಯಲ್ಲಿ ಕುಣಿಯುವಂತೆ ಮಾಡಿದೆ. ಪ್ರತಿ ಸಲವೂ ನಾನು ಕೇಳಿದುದನ್ನೆಲ್ಲ ಕೊಟ್ಟು ಅನುಗ್ರಹಿಸಿದೆ. ನನ್ನ ಈ ಬದುಕು ನಿನಗೆ ಸಂತೋಷವನ್ನುಂಟು ಮಾಡಿದಲ್ಲಿ ಇನ್ನು ಒಂದೇ ಒಂದು ಸಲ ಅನುಗ್ರಹಿಸು. ಈ ನರಜನ್ಮದಿಂದ ಶಾಶ್ವತ ಮುಕ್ತಿಯನ್ನು ಕೊಡು...."

ಶ್ರೀಕೃಷ್ಣನಿಗೆ ಈ ರೀತಿ ಪ್ರಾರ್ಥನೆ ಮಾಡಿಕೊಂಡ ಭಕ್ತನ ಹೆಸರು ರಹೀಮ್ ಖಾನ್‌ಖಾನಾ. ಯಾಕೆ, ಅಚ್ಚರಿಯಾಯಿತೇನು? ಈ ಕವಿಯು ಭಾರತದ ಪವಿತ್ರ ತೀರ್ಥವೆನಿಸಿಕೊಂಡ ಗಂಗೆಯನ್ನು ವರ್ಣಿಸಿದ ರೀತಿಯನ್ನಿಷ್ಟು ನೋಡಿರಿ:

"ಹೇ ಗಂಗೆ, ನೀನು ವಿಷ್ಣುಪಾದದಿಂದ ಜನಿಸಿದವಳು ನಿಜ. ಆದರೆ ಮುಂದೆ ಮಾಲತೀ ಪುಷ್ಪದಂತೆ ನೀನು ಶಿವನ ಮುಡಿಯನ್ನಲಂಕರಿಸಿದವಳು. ಆದುದರಿಂದ ವಿಷ್ಣು ರೂಪಕ್ಕಿಂತ ಶಿವ ರೂಪವೇ ನನಗೆ ಮೋಜೆನಿಸುತ್ತಿದೆ. ನನಗೆ ನಿನ್ನನ್ನು ತಲೆಯ ಮೇಲಿಟ್ಟುಕೊಂಡು ಕುಣಿದಾಡಬೇಕೆನಿಸಿದೆ. ನಿನ್ನ ಪ್ರವಾಹವು ಪಾದದಿಂದ ಹುಟ್ಟಿದರೂ ನಿನ್ನ ಶಿವಶಿರೋಭೂಷಣವೇ ನನಗೆ ಮೆಚ್ಚಿಗೆಯಾಗಿದೆ."

ಈ ಕವಿಯು ಕಾಶಿ ಅಥವಾ ಪೈಠಣ ನಿವಾಸಿಯಾದ ಪಂಡಿತನಾಗಿರಬಹುದು ಎನಿಸುತ್ತದೆ. ಆದರೆ ಈತ ತುರ್ಕಿ ಮೂಲದವನು ಎಂಬ ಅಂಶ ಈ ಕವಿಯ ಬಗ್ಗೆ ಹೆಚ್ಚು ತಿಳಿದುಕೊಳ್ಳುವ ಕುತೂಹಲ ಹುಟ್ಟಿಸುತ್ತದೆ. ಅರಬ್ಬಿ, ಫಾರಸಿ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಅಮೋಘವಾದ ಅನೇಕ ಕೃತಿಗಳನ್ನಿತ್ತ ಈ ಮಹಾನುಭಾವನ ಹೆಸರು ರಹೀಮನೆಂದು ತಿಳಿಯುವದು. ಜನಸಾಮಾನ್ಯರ ದೈನಂದಿನ ಅನುಭವಗಳನ್ನಾಧರಿಸಿ ಬಹು ಸುಲಭವಾದ ರೀತಿಯಲ್ಲಿ ಅನೇಕ ಕೃತಿಗಳನ್ನು ಈತ ರಚಿಸಿದ್ದಾನೆ. ಈತನ ಸಾಹಿತ್ಯವನ್ನು ಅಭ್ಯಸಿಸಿದ ಪಂಡಿತರು ಡಾಕ್ಟರೇಟ್ ಪದವಿಯನ್ನು ಸಂಪಾದಿಸಿದ್ದಾರೆ. ಇಂದು ಆ ಗ್ರಂಥಗಳೆಲ್ಲ ಉತ್ತರ ಭಾರತದ ವಿಶ್ವವಿದ್ಯಾಲಯಗಳಿಂದ ಪ್ರಕಟಗೊಂಡಿವೆ.

ಅಕಬರನ ಕಾಲದಲ್ಲಿ ಆತನ ದರ್ಬಾರಿನಲ್ಲಿ 'ನವರತ್ನ'ಗಳೆಂದು ಕರೆಸಿಕೊಳ್ಳುತ್ತಿದ್ದ ಅನೇಕ ಪಂಡಿತೋತ್ತಮರಿದ್ದರೆಂಬುದನ್ನು ಓದಿದ್ದೀರಿ. ಅಂಥ ನವರತ್ನಗಳ ಮಾಲಿಕೆಯಲ್ಲಿ ರಹೀಮ್‌ಖಾನನೂ ಒಬ್ಬ. ಈತನ ಸಂಪೂರ್ಣ ಹೆಸರು ಅಬ್ದುಲ್ ರಹೀಂ ಎಂದು ತಿಳಿದು ಬರುವದು. ಮುಂದೆ ಬಾದಶಹನಿಂದ ಈತನಿಗೆ "ಖಾನ್‌ಖಾನಾ" ಎಂಬ ಬಿರುದು ಪ್ರಾಪ್ತವಾಯಿತು. ೧೫೫೬ ರಿಂದ ೧೬೨೬ರ ಅವಧಿಯಲ್ಲಿ ಬದುಕಿದ ಈತ ಹಿಂದಿಯಲ್ಲಿ ಅನೇಕ ದ್ವಿಪದಿಗಳನ್ನು ರಚಿಸಿದ್ದು ಇವು ಇಂದಿಗೂ ಉತ್ತರ ಭಾರತದ ಜನಸಾಮಾನ್ಯರ ನಾಲಿಗೆಯ ಮೇಲೆ ನಲಿದಾಡುತ್ತವೆ. ಫಾರಸಿ ಭಾಷೆಯ ಮಹಾ ಪಂಡಿತನೆಂದೆನಿಸಿಕೊಂಡಿದ್ದ ಖಾನ್‌ಖಾನಾ ಬಾಬರನ ಆತ್ಮ ಚರಿತ್ರೆಯನ್ನು ಆ ಭಾಷೆಯಿಂದ ತುರ್ಕಿಗೆ ಅನುವಾದ ಮಾಡಿದ.

ಜಗನ್ನಾಥ ಪಂಡಿತನು ತನ್ನ ಪರಮಾಪ್ತ ಮಿತ್ರನೆಂದೂ ತಾವಿಬ್ಬರೂ ಸಮಕಾಲೀನರೆಂದೂ ಹೇಳಿಕೊಂಡ ಈ ಕವಿಯು ತಮ್ಮಿಬ್ಬರಲ್ಲಿ ನಡೆದ ಸಂಸ್ಕೃತ ಸಂವಾದಗಳನ್ನು ಬರೆದಿಟ್ಟಿದ್ದಾನೆ.

ಈತನ ಪೂರ್ವಜರು ಮೊದಲು ಕಾಸ್ಪಿಯನ್ ಸಮುದ್ರ ತೀರದಲ್ಲಿರುವ ಕಾರಾಕೋರಮ್ ಪರ್ವತಾವಳಿಯ ತಪ್ಪಲು ಪ್ರದೇಶದ ನಿವಾಸಿಗಳು. ಈತನ ತಂದೆ ಬೈರಾಮ್‌ಖಾನ್. ಬೈರಾಮ್‌ಖಾನ್ ತನ್ನ ಹದಿಮೂರನೇ ವರ್ಷದಲ್ಲಿಯೇ ಹುಟ್ಟೂರನ್ನು

ಬಿಟ್ಟು ಪ್ರಯಾಣವನ್ನಾರಂಭಿಸಿ ಹಿಂದೂಸ್ತಾನಕ್ಕೆ ಬಂದು ತಲುಪಿದ. ಮೊಗಲ್ ಬಾದಶಹ ಬಾಬರನಲ್ಲಿ ಚಾಕರಿಗೆ ನಿಂತ. ತನ್ನ ಕಾರ್ಯದಕ್ಷತೆಯಿಂದ ಒಳ್ಳೆ ಹೆಸರನ್ನು ಸಂಪಾದಿಸಿದ್ದರಿಂದ ಮುಂದೆ ಹುಮಾಯೂನನ ಆಪ್ತ ಸಲಹೆಗಾರನೂ ಆದ. ಹುಮಾಯೂನನ ಮರಣಾನಂತರ ಹದಿನಾಲ್ಕು ವರುಷದ ಅಕಬರ್ ಪಟ್ಟಕ್ಕೆ ಬಂದ. ಬೈರಾಮ್‌ಖಾನನ ತಾಯಿ ಹಾಗೂ ಹುಮಾಯೂನನ ಪತ್ನಿ ಇಬ್ಬರೂ ಒಡಹುಟ್ಟಿದ ಸಹೋದರಿಯರಂತಿದ್ದರು. ಇದರಿಂದಾಗಿ ರಾಜವಂಶದಲ್ಲಿ ಈತನ ಪ್ರಭಾವವು ಇನ್ನಷ್ಟು ಬೆಳೆಯಲು ಕಾರಣವಾಯಿತು. ಬೈರಾಮ್‌ಖಾನ್ ಒಳ್ಳೆ ರಾಜನೀತಿಜ್ಞನೆಂದು ಖ್ಯಾತಿ ಪಡೆದಿದ್ದ.

೧೫೫೬ರ ಡಿಸೆಂಬರ್ ೧೭ರಂದು ರಹೀಮ್ ಖಾನ್ ಲಾಹೋರಿನಲ್ಲಿ ಜನ್ಮತಾಳಿದ. ತಂದೆ ಬೈರಾಮ್‌ಖಾನನು ತನ್ನ ಪರಿವಾರದೊಂದಿಗೆ ಮಕ್ಕಾ ಯಾತ್ರೆಯನ್ನಾರಂಭಿಸಿದಾಗ ವಿದ್ರೋಹಿಗಳು ಆತನನ್ನು ನಡುದಾರಿಯಲ್ಲಿಯೇ ಕೊಂದರು. ಈ ದುರಂತ ವಾರ್ತೆಯನ್ನು ಕೇಳಿದ ಅಕಬರ ಬಾದಶಹನು ತಕ್ಷಣವೇ ಆ ಕುಟುಂಬವನ್ನು ಕರೆತರಿಸಿ ತನ್ನ ಆಶ್ರಯದಲ್ಲಿಯೇ ರಾಜಧಾನಿಯಲ್ಲಿರುವಂತೆ ನೋಡಿಕೊಂಡ. ಬಾಲಕ ರಹೀಮನಿಗೆ ಅರಬ್ಬಿ, ತುರ್ಕಿ, ಫಾರಸಿ ಭಾಷೆಗಳಲ್ಲಿ ಶಿಕ್ಷಣವನ್ನು ಕೊಡಿಸಿದ. ದರ್ಬಾರಿನಲ್ಲಿದ್ದ ರಾಜಾ ತೋಡರಮಲ್(ಕಂದಾಯ ಸಚಿವ)ನಿಂದ ಈತನಿಗೆ ಹಿಂದೀ ಹಾಗೂ ಸಂಸ್ಕೃತ ವಿದ್ಯಾಭ್ಯಾಸವಾಗುವಂತೆ ನೋಡಿಕೊಂಡ. ಕ್ರಮೇಣ ರಹೀಮನಿಗೆ ಹಿಂದೂ ಪುರಾಣಗಳ ಅಭ್ಯಾಸದಲ್ಲಿ ಆಸಕ್ತಿ ಬೆಳೆಯತೊಡಗಿತು.

ಬಾನೋ ಬೇಗಂ ಆತನ ಹೆಂಡತಿ. ಅತ್ಯಂತ ಸುಶೀಲಳಾಗಿ ಪತಿಯ ನೆರಳಿನಂತಿದ್ದು ಆತನೊಂದಿಗೆ ಸುಖ ಸಂಸಾರವನ್ನು ಸಾಗಿಸಿದಳು. ಅಪರೂಪದ ಈ ಜೋಡಿಯಲ್ಲಿ ಮೂವರು ಗಂಡು ಮಕ್ಕಳು ಹಾಗೂ ಇಬ್ಬರು ಹೆಣ್ಣುಮಕ್ಕಳು ಹುಟ್ಟಿದರು. ಈತನ ಮಕ್ಕಳಲ್ಲಿ ಇರಿಜ್ ಹಾಗೂ ದರಾಜ್ ಎಂಬಿಬ್ಬರು ಮಹಾ ಪರಾಕ್ರಮಿಗಳಾಗಿದ್ದರು. ದೈವದ ಅವಕೃಪೆಗೆ ಈಡಾದ ಈ ಇಬ್ಬರೂ ಅಕಾಲ ಮರಣ ಹೊಂದಿದರು. ಕೊನೆಯ ಮಗನಂತೂ ಅಲ್ಪಾಯುಷಿಯಾದ. ರಹೀಮ್‌ಖಾನ್ ತನ್ನಿಬ್ಬರು ಹೆಣ್ಣು ಮಕ್ಕಳಲ್ಲಿ ಒಬ್ಬಳನ್ನು ಅಕಬರನ ಮಗನಾದ ದಾಸಿಯಾ ಎಂಬವವನಿಗೆ ಕೊಟ್ಟು ವಿವಾಹ ಮಾಡಿದ. ಇನ್ನೊಬ್ಬಳನ್ನು ಓರ್ವ ಸರದಾರನಿಗೆ ಕೊಡಲಾಗಿತ್ತು. ವಿಧಿಲಿಖಿತವೆಂಬಂತೆ ಇವರಿಬ್ಬರೂ ವಿಧವೆಯರಾಗಿ ಹೆತ್ತ ಮನೆಗೆ ಮರಳಿದ್ದರು.

ರಹಿಮಾನ ತನ್ನ ಹದಿನಾರನೇ ವರುಷದಲ್ಲಿಯೇ ಗುಜರಾಥದಲ್ಲಿ ನಡೆದ ಯುದ್ಧದಲ್ಲಿ ಭಾಗವಹಿಸಿದನು. ಅನಂತರ ಇಪ್ಪತ್ತೊಂದನೇ ವಯಸ್ಸಿನಲ್ಲಿ ಆತನನ್ನು ಗುಜರಾಥದ ಸುಬೇದಾರನೆಂದು ನಿಯುಕ್ತಿ ಮಾಡಲಾಯಿತು. ರಣಾಂಗಣದಲ್ಲಿ ಆತ ಅಪ್ರತಿಮ ಶೂರನೆಂದು ಹೆಸರು ಗಳಿಸಿದ. ಅಕಬರನ ನಂತರ ಜಹಾಂಗೀರ್ ಬಾದಶಹನು ನಾನಾ ರೀತಿಯಲ್ಲಿ ಈತನಿಗೆ ಹಿಂಸೆಯನ್ನೀಯತೊಡಗಿದ. ಇದರಿಂದಾಗಿ ಮಾನಸಿಕವಾಗಿಯೂ ಶಾರೀರಿಕವಾಗಿಯೂ ಆತ ದುರ್ಬಲನಾಗುತ್ತಾ ನಡೆದ. ಕಾಲಾಂತರದಲ್ಲಿ ರಹೀಮ್ ನಿರ್ದೋಷಿ ಎಂಬ ತೀರ್ಪಿಗೆ ಬರಲಾಯಿತು. ಆಗ ಜಹಾಂಗೀರ ಬಾದಶಹನು ಒಂದು ಲಕ್ಷ ಅಶರ್ಫಿಗಳೊಂದಿಗೆ ಕನೋಜದ ಜಹಗೀರಿಯನ್ನಿತ್ತು ಆತನಿಗೆ ಸನ್ಮಾನ ಮಾಡಿದನು. ಮೊಗಲ್ ಸಾಮ್ರಾಜ್ಯದ ವಿದ್ರೋಹಿ ಎಂದೆನಿಸಿಕೊಂಡಿದ್ದ ಮಹಬತ್‌ಖಾನನ ಕೊಬ್ಬನ್ನಡಗಿಸಲು ಈತನನ್ನು ನಿಯಮಿಸಲಾಯಿತು. ತನ್ನ ಸೇನೆಯೊಂದಿಗೆ ಹೊರಟಾಗ ಮಾರ್ಗ ಮಧ್ಯದಲ್ಲಿ ರಹಿಮಾನ್ ಖಾನ್ ವಿಪರೀತ ಖಾಯಿಲೆಯಿಂದ ಬಳಲತೊಡಗಿದನು. ಬಾದಶಹನಿಗೆ ಈ ವಿಷಯವು ತಿಳಿದು ಬಂದಾಗ ತಕ್ಷಣವೇ ಆತನನ್ನು ರಾಜಧಾನಿಗೆ ಮರಳಿ ಬರುವಂತೆ ಅಪ್ಪಣೆ ಮಾಡಿದನು. ಈ ಕವಿಯು ೧೬೨೭ರಲ್ಲಿ ತನ್ನ ಎಪ್ಪತ್ತನೆ ವಯಸ್ಸಿನಲ್ಲಿ ಮರಣ ಹೊಂದಿದನು. ಇಂದಿಗೂ ಈತನ ಸಮಾಧಿಯನ್ನು ಹುಮಾಯೂನ್ ಬಾದಶಹನ ಗೋರಿಯ ಪಕ್ಕದಲ್ಲಿರುವುದನ್ನು ನೋಡಬಹುದು. ●

ವಿಚಾರ

# ನಡೆವುದೊಂದೇ ಭೂಮಿ

● ಕೆ. ಚಂದ್ರಮೌಳಿ

'ನಡೆವುದೊಂದೇ ಭೂಮಿ, ಕುಡಿವುದೊಂದೇ ಜಲವು' ಆದರೂ ನಮ್ಮ ನಮ್ಮಲ್ಲಿ ಏಕೆ ಭಿನ್ನತೆ, ಏಕೆ ಹೊಡೆದಾಟ ಅನ್ನುವ ಅರ್ಥದಲ್ಲಿ ಸರ್ವಜ್ಞ ತನ್ನ ವಚನ ಹೇಳಿದ್ದ. ಏಕೆ ಹೊಡೆದಾಟ ಅನ್ನುವ ಪ್ರಶ್ನೆಗೆ ಉತ್ತರ ಸುಲಭವಲ್ಲ. ಒಮ್ಮೆ ಇದನ್ನೇ ಯೋಚಿಸುತ್ತಾ ಕಾಡಿನಲ್ಲಿ ನಡೆಯುತ್ತಿದ್ದಾಗ, ಎಲ್ಲಾ ಕಡೆಯೂ ಹಚ್ಚಹಸಿರು, ನೂರಾರು ಬಗೆಯ ಗಿಡ, ಬಳ್ಳಿ, ಮರಗಳು, ನೂರಾರು ಪ್ರಾಣಿ-ಪಕ್ಷಿಗಳು ಕಾಣಿಸಿದವು. ತಕ್ಷಣ ಸರ್ವಜ್ಞ ಹೇಳದೇ ಬಿಟ್ಟದ್ದೂ ಹೊಳೆಯಿತು:

**ನಡೆವುದೊಂದೇ ಭೂಮಿ, ಕುಡಿವುದೊಂದೇ ಜಲವು**
**ಉಸಿರದೊಂದೆ ಗಾಳಿ, ಬಿಸಿಯದೊಂದೆ ರಕ್ತ**
**ಚಿಗುರುವುದಾರು ಸಸಿ, ಜಿಗಿಯುವುದಾರು ಚರ**

ಇಲ್ಲಿ ಆರು ಅನ್ನುವುದು ಸಾವಿರಾರು ಅಂದ ಹಾಗೆ; ಅನೇಕ ಅನ್ನುವುದರ ಸೂಚಕ ಪದ ಅಷ್ಟೆ. ಹುಲಿ, ಕರಡಿ, ಚಿರತೆ ಎಲ್ಲವೂ ಬೇರೆ ಬೇರೆಯಾದರೂ ಅವೆಲ್ಲವನ್ನೂ ಪ್ರಾಣಿವರ್ಗ ಅನ್ನಬಹುದು. ಇದೇ ರೀತಿ ಎಲ್ಲ ಮನುಜರನ್ನೂ ಸೇರಿಸಿ ಮನುಷ್ಯವರ್ಗ ಅನ್ನಲಾಗುವುದಿಲ್ಲ. ಒಬ್ಬನೇ ಮನುಷ್ಯ ದಿನಕ್ಕೆ ಹಲವಾರು ಬಾರಿ ಮುಖವಾಡ ಬದಲಾಯಿಸುತ್ತಾ ಓಡಾಡುತ್ತಾನೆ. ಹೆಂಡತಿಗೊಂದು, ಟೈಪಿಸ್ಟ್‌ಗೊಂದು, ಮಕ್ಕಳಿಗೊಂದು, ಮುದುಕರಿಗೊಂದು, ಸ್ನೇಹಿತರಿಗೊಂದು, ಹೊಸಬರಿಗೊಂದು ಹೀಗೆ ಅವನ ಮುಖವಾಡಗಳು ಹಲವಾರು. ಹೀಗೆ ಒಬ್ಬನ ವ್ಯಕ್ತಿತ್ವ ಹಲವಾರು ಚೂರುಗಳಾಗಿ ಒಡೆದಂತೆಲ್ಲಾ ಅವನ ಒಳಗಿನ ತುಮುಲ ಹೆಚ್ಚುತ್ತಲೇ ಹೋಗುತ್ತದೆ. ಮನಸ್ಸಿನ ತುಮುಲ ಹೆಚ್ಚಾದಂತೆ, ಯೋಚನೆ ಅಲ್ಲೋಲ ಕಲ್ಲೋಲವಾಗುತ್ತದೆ, ಬುದ್ಧಿ ಗಲಿಬಿಲಿಯಿಂದ ಗಾಬರಿಗೊಂಡು ಕಂಗೆಡುತ್ತದೆ. ಇದರಿಂದ ಒಳಗೆ ಅಶಾಂತಿ ಹೆಚ್ಚುತ್ತದೆ, ಉಕ್ಕಿ ಹೊರಗೂ ಹರಿಯುತ್ತದೆ. ಒಟ್ಟಿನಲ್ಲಿ ಮನುಷ್ಯ ದುಃಖಿಯಾಗುತ್ತಾನೆ. ಸಂತ ಕಬೀರ ಹೇಳುವಂತೆ ಅಂತಃಶಾಂತಿ, ಸುಖ ಬೇಕಿದ್ದರೆ ಒಳಗೂ ಹೊರಗೂ ಒಂದೇ ಮುಖ, ಒಂದೇ ವ್ಯಕ್ತಿತ್ವವಿರಬೇಕು. ಸಾಧು ಸಂತರಿಗೂ ಯೋಗಿಗಳಿಗೂ ಕಷ್ಟಸಾಧ್ಯವೆನಿಸಿದ ತಿಳಿನೀರಿನ, ಹೊಳೆ ಗಾಜಿನ, ನಿರ್ಮಲ ಹೃದಯವಿರಬೇಕು!

ಒಬ್ಬ ಮನುಷ್ಯನ ತುಮುಲಗಳನ್ನು ಬಿಡಿ, ಈಗ ಒಂದು ಕುಟುಂಬದೊಳಗಿನ ಆಗುಹೋಗುಗಳನ್ನೇ ನೋಡಿ. ಗಂಡನ ದಬ್ಬಾಳಿಕೆ ಹೆಂಡತಿಗೆ ಅಳು, ಅಮ್ಮನ ಹಿತವಾಣಿ ಮಕ್ಕಳಿಗೆ ಕಠೋರ, ಮಕ್ಕಳ ವರ್ತನೆ ಹಿರಿಯರಿಗೆ ಹಿಂಸೆ. ಒಟ್ಟಿನಲ್ಲಿ ಒಂದಲ್ಲ ಒಂದು ರೀತಿಯ ಚಕಮಕಿ ನಡೆಯುತ್ತಲೇ ಇರುತ್ತದೆ. ಕೆಲವೊಮ್ಮೆ ಅಲ್ಲೇ ಶಾಂತವಾಗುತ್ತದೆ. ಕೆಲ ವೇಳೆ ಕೋಪ-ಕೂಗಾಟದಲ್ಲಿ ಕಿಡಿಯಾಗಿ ಹಾರುತ್ತದೆ, ಮಿತಿಮೀರಿದಾಗ ಲಟಪಟ ಹೊಡೆದಾಟದಲ್ಲಿ

ಕೊನೆಗೊಳ್ಳುತ್ತದೆ. ಯಾಕೆಂದರೆ ಇಲ್ಲಿ ನಾಲ್ಕು ಜನರ ನಲವತ್ತು ಮುಖಗಳು, ತಮಗನಿಸಿದಂತೆ ತಮ್ಮ ಬೇಕು-ಬೇಡಗಳನ್ನು ಪೂರೈಸಲು ಹೊರಟಿರುತ್ತವೆ. ಹೀಗೆ ಒಬ್ಬ ಮನುಷ್ಯನಿಗೆ ನಾಲ್ಕಾರು ಮುಖ, ಒಂದು ಕುಟುಂಬಕ್ಕೆ ನಲವತ್ತು ಮುಖಗಳಾದ್ಧರೆ, ಇನ್ನು ಒಂದು ಹಳ್ಳಿಗೆಷ್ಟು, ಒಂದು ರಾಜ್ಯಕ್ಕೆಷ್ಟು, ಮತ್ತು ಒಂದು ಇಡೀ ದೇಶಕ್ಕೆಷ್ಟು ಮುಖಗಳಿದ್ದಾವೆಂದು ನೀವೇ ಊಹಿಸಿಕೊಳ್ಳಿ. ನಮ್ಮೊಬ್ಬರಲ್ಲೇ ನಾಲ್ಕು ಮುಖದ ಗೊಂದಲವಿರುವಾಗ, ನಾವೊಬ್ಬರೇ ಒಳಗೂ-ಹೊರಗೂ ಒಂದೇ ಆಗಲು ಸಾಧ್ಯವಿರದಾಗ, ಇಡೀ ದೇಶದ ಜನತೆಯೆಲ್ಲಾ ಒಂದೇ ಆಗಿರಬೇಕು ಅನ್ನುವುದು ಯೋಚನೆಗೂ ಕಷ್ಟ. ವೈವಿಧ್ಯವೂ ಇರುವುದೇ, ಭಿನ್ನಾಭಿಪ್ರಾಯಗಳಿರುವುದೂ ಸಹಜವೇ.

ಆದರೆ ಏನಿದ್ದರೂ ಎಲ್ಲವೂ ತಿಳಿಯಾಗಿ-ಸರಳವಾಗಿ ವನದ ಝರಿಯಂತೆ ನಿರ್ಮಲ-ಶುಭ್ರವಾಗಿರಲಿ ಎನ್ನುವುದು ಅಭಿಪ್ರಾಯ. ಸಾಧುಗಳಿಗೂ ಈ ಸ್ಥಿತಿ ಕಷ್ಟವೆಂದಮೇಲೆ, ದೇಶದ ಬಡಜನತೆ ತಾನೆ ಹೇಗೆ ತಿಳಿಶುಭ್ರರಾದಾರು!

ಕಾಡಿನ ಪ್ರಾಣಿಗಳಲ್ಲಿ ವೈವಿಧ್ಯವಿಲ್ಲವೆ? ಅವಕ್ಕಿಲ್ಲದ ಜಂಜಾಟ ನಮಗೇಕೆ? ಅಂತ ಇನ್ನೊಂದು ಪ್ರಶ್ನೆ. ಇದೇ ತಮಾಷೆ ನೋಡಿ. ಕಾಡಿನ ಪ್ರಾಣಿಗಳು ಮಾಂಸಕ್ಕಾಗಿ ಬೇಟೆಯಾಡುತ್ತವೆ, ಸಸ್ಯಕ್ಕಾಗಿ ಅಲೆದಾಡುತ್ತವೆ, ಆದರೆ ಆಹಾರಕ್ಕಾಗಿ ತಮ್ಮೊಳಗೇ ಕಿತ್ತಾಡುವುದಿಲ್ಲ. ಮನುಜ ಜನ್ಮ ಇವೆಲ್ಲಾ ಪ್ರಾಣಿಗಳಿಗಿಂತ ಉತ್ತಮ ಅಂದರೂ, ಒಂದು ತುತ್ತು ಕೂಳಿಗಾಗಿ ಪರದಾಡುತ್ತಾನೆ, ಕಾದಾಡುತ್ತಾನೆ. ತನ್ನ ಹೊಟ್ಟೆ ತುಂಬುವಷ್ಟು ತಿಂದು ತೇಗಿದರೂ, ಒಂದಿಷ್ಟು ಶೇಖರಿಸಿಟ್ಟುಕೊಳ್ಳಲು ಹವಣಿಸುತ್ತಾನೆ. ಅದಕ್ಕಾಗಿ ಭೂಮಿಯನ್ನು ಹರಿದು ಕಿತ್ತು ತಿನ್ನುವಂತೆ ಜಗಳ ಆಡುತ್ತಾನೆ. ಬರೀ ಹೊಟ್ಟೆಗೊಂದೇ ಅಲ್ಲದೆ, ಗೇಣು ಬಟ್ಟೆಗಾಗಿ, ಒಂದು ಸೂರಿಗಾಗಿಯೂ ಮನುಷ್ಯ ಜಗಳ ಆಡುತ್ತಾನೆ. ಹೀಗೆ ಶುರುವಾಗುತ್ತದೆ ಮನುಷ್ಯನ 'ಬೇಕು' ಎಂಬ ದಾಹ. ರಕ್ತಾಸುರನ ರಕ್ತ ಬಿಂದುವಿನಿಂದ ಹುಟ್ಟಿ ಬರುವ ವಿಕಟ ರಾಕ್ಷಸರ ಕಥೆ ಕೇಳಿದ್ದೀರಿ. ಅದೇ ರೀತಿ ಬೇಕು ಎಂಬ ದಾಹವೂ ಎಷ್ಟು ತಣಿಸಿದರೂ ತಣಿಯದು. ಮಡಕೆ-ಕುಡಿಕೆಯಿಂದ ಹಿಡಿದು ಟೀವಿ, ಟೆಲಿಫೋನ್ ಇತ್ಯಾದಿಯಾಗಿ ದಿನಕ್ಕೊಂದು ಹೊಸ ಅವತಾರ ತಾಳಿ ಈ ದಾಹ ನಮ್ಮನ್ನು ಕಾಡುತ್ತದೆ. ಈ ಒಂದು ಜನ್ಮದಲ್ಲಿ ಎಲ್ಲಾ 'ಬೇಕು'ಗಳನ್ನೂ ಪೂರೈಸುವುದು ಸಾಧ್ಯವೇ ಇಲ್ಲ, ಹೀಗಿರುವಾಗ ಬಡಪ್ರಾಣಿ ಮನುಷ್ಯನಿಗೆ ವ್ಯಾಮೋಹದ ನಂಟು ಬೇರೆ. ನಾನು, ನನ್ನದು, ನನ್ನ ಹೆಂಡತಿ, ನನ್ನ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು.... ಹೀಗೆ ಮುಂದಿನ ಏಳೇಳು ಪೀಳಿಗೆಗೆ, ತನ್ನದೇ ಏಳೇಳು ಜನ್ಮಕ್ಕೆ ಕೂಡಿಸಿಟ್ಟರೂ "ಬೇಕು" ಅನ್ನುವ ಇವನ ದಾಹ ಮಾತ್ರ ತಣಿಯುವುದಿಲ್ಲ. ತುಪ್ಪ ಸುರಿದಷ್ಟೂ ದಾಹ ಮಿಡಿಯುತ್ತದೆ, ಕಿಡಿಯಾಗುತ್ತದೆ, ಸಿಡಿಯುತ್ತದೆ, ಭುಗಿಲ್ಲೆಂದು ಹತ್ತುತ್ತದೆ, ಕಾಳ್ಗಿಚ್ಚಿನಂತೆ ಹರಡುತ್ತದೆ. ಕೆಲವರು ಒಂದು ದಿನದ ದಾಹವನ್ನೂ ತಣಿಸಲಾಗದ ನತದೃಷ್ಟರು. ಕೆಲವರು ತಮ್ಮ ಜೀವನವಿಡೀ ದುಡಿದು ದಣಿದು ಬಳಲುವವರು. ಇನ್ನೂ ಕೆಲವರು ಏಳೇಳು ಪೀಳಿಗೆಗಳ ದಾಹವನ್ನು ಪೂರೈಸಲು ಶಕ್ತರಾದವರು.

ಪ್ರಪಂಚದಲ್ಲಿ ನಡೆದಿರುವ ಹೋರಾಟಗಳೆಲ್ಲಾ ಹೆಣ್ಣು-ಹೊನ್ನು-ಮಣ್ಣು ಇವುಗಳಿಗಾಗಿಯೇ ಆಗಿವೆ ಅಂತ ಹೇಳುವುದು ವಾಡಿಕೆ. ಎಲ್ಲಾ ಹೊಡೆದಾಟವೂ ಆಸೆಬುರುಕತನ ಅಥವಾ ಅಸೂಯೆಯಿಂದಲೇ ಶುರುವಾಗುತ್ತದೆ ಅನ್ನಬಹುದು. ಆದರೆ ಹೊಡೆದಾಟಗಳಿಗೆ ಇನ್ನೂ ಒಂದು ಪ್ರಬಲ ಕಾರಣವಿದೆ. ಅದೇ ಮನುಷ್ಯನ ಬುದ್ಧಿಶಕ್ತಿ ಅಥವಾ ಯೋಚನಾಶಕ್ತಿ. ಮನುಷ್ಯನಿಗೂ ಪ್ರಾಣಿಗೂ ಇರುವ ಮೂಲಭೂತ ವ್ಯತ್ಯಾಸವೇ ಈ ಬುದ್ಧಿ ಅಥವಾ ಯೋಚನಾ ಶಕ್ತಿ. ಇವನು ತನ್ನ ಪ್ರಚಂಡ ಬುದ್ಧಿಯಿಂದ ನೆಲದ ಮೇಲೆ ನಡೆಯುವುದಿರಲಿ, ನೆಲದ ಮೇಲೂ ಹಾರಬಲ್ಲ, ನೀರ ಮೇಲೂ ನಡೆಯಬಲ್ಲ ಮತ್ತು ಆಕಾಶದಲ್ಲೂ ನಿಲ್ಲಬಲ್ಲ. ಈ ಮನಸ್ಸು-ಯೋಚನೆ-ಬುದ್ಧಿಯಿಂದಲೇ ಹೊಸ ತತ್ವಗಳನ್ನು ಪ್ರತಿಪಾದಿಸಬಲ್ಲ, ಹಳೆಯದನ್ನು ಒಡೆಯಬಲ್ಲ ಅಥವಾ ಎಲ್ಲವನ್ನೂ ಕಲಸು ಮೇಲೋಗರ ಮಾಡಿ ಗೊಂದಲವಾಗಿಸಬಲ್ಲ. ಬುದ್ಧಿವಂತರು ನಡೆಸುವ ತಿಕ್ಕಾಟಗಳನ್ನು ನೋಡಿ-ದೇವರಿದ್ದಾನೆ-ಇಲ್ಲ, ಕರ್ಮದಿಂದಲೇ ಫಲಇದೆ-ಇಲ್ಲ,

ಪುನರ್ಜನ್ಮವಿದೆ-ಇಲ್ಲ, ಸಗುಣ-ನಿರ್ಗುಣ, ದ್ವೈತ-ಅದ್ವೈತ, ಮಾಯೆ-ಸತ್ಯ..... ಇತ್ಯಾದಿ ಇತ್ಯಾದಿ. ಬರೀ ಬುದ್ಧಿವಂತರು ತಿಕ್ಕಾಟ ನಡೆಸಿದರೆ ಪರವಾಗಿಲ್ಲ, ಆದರೆ ಅವರ ಬೆಂಬಲಕ್ಕೆ ನಿಂತಿದ್ದಾರೆ ಅನೇಕ ಬುದ್ಧಿಮಂಕರು ಸುಮ್ಮನೇ ನಿಂತಿದ್ದಾರೋ, ಅದೂ ಇಲ್ಲ, ತಮ್ಮ ಗುರು, ಪಂಗಡ, ಮತ, ಜಾತಿ ಇವುಗಳ ಕುರುಹು, ಚಿಹ್ನೆಯನ್ನು ಧರಿಸಿ, ಕೊಂಬು-ಕಹಳೆ-ತುತ್ತೂರಿ ಊದುತ್ತಾ ತಮ್ಮ ಮೇಲ್ಮೆಯ ಪ್ರದರ್ಶನಕ್ಕಾಗಿ ಹಾತೊರೆಯುತ್ತಾ ಕಾಲು ಕೆರೆಯುತ್ತಾ ನಿಂತಿದ್ದಾರೆ. ಗುರುವಾಣಿಯನ್ನು ತುತ್ತೂರಿಯಲ್ಲಿ ಊದುತ್ತಾರೆ, ಎದುರಾಳಿಯ ಮಾತನ್ನು ತಮ್ಮ ಕಹಳೆಯ ಕೂಗಿನಲ್ಲಿ ಮುಳುಗಿಸುತ್ತಾರೆ. ಅದಕ್ಕೂ ಬಗ್ಗದವರ ಮೇಲೆ ಕತ್ತಿ-ಗುರಾಣಿ ಮಸೆದು ಯುದ್ಧಕ್ಕೆ ನಿಲ್ಲುತ್ತಾರೆ. ಸಿಡಿಮದ್ದು ಬಾಂಬಿನಿಂದ ಅವರನ್ನು ನೆಲಸಮ ಮಾಡಲು ಹವಣಿಸುತ್ತಾರೆ. ಹೀಗೆ ಸಣ್ಣದಾಗಿ ಹುಟ್ಟಿದ ಜಾತಿ-ಮತ ಕಲಹಗಳು, ಭೀಕರ ಯುದ್ಧಗಳಾಗಿ ಪರಿಣಮಿಸಿವೆ.

ಒಳ್ಳೆಯ ಯೋಚನೆಯನ್ನು ಮಾಡುವ ಒಬ್ಬ ಸದ್ಗುರುವಿನ ಹಿಂದೆ ಬರುವ ಶಿಷ್ಯಕೋಟಿ ಹೇಗೆ ಚಾಂಡಾಲ ವೃತ್ತಿಗಿಳಿಯಲೂ ಹೇಸುವುದಿಲ್ಲ ಅನ್ನುವುದಕ್ಕೆ ಚರಿತ್ರೆಯೇ ಸಾಕ್ಷಿ. ಇನ್ನೂ ಕೆಟ್ಟ ಯೋಚನೆಯನ್ನೇ ಮಾಡುವ ಚಾಂಡಾಲ ಮುಖಂಡರ ಕಥೆಯನ್ನೇನು ಹೇಳೋಣ? ಇವರ ಆಸೆ ಕೇವಲ ನೆರೆಯವನ ನೆಲ, ಮಗ್ಗಲು ಮನೆ ಅಥವಾ ಪರ ಹೆಣ್ಣಿಗೆ ಮಾತ್ರ ಸೀಮಿತವಾಗಿರುವುದಿಲ್ಲ, ಸಕಲ ಸಂಪತ್ತು, ತಡೆಯಿಲ್ಲದ ಅಧಿಕಾರ ಲಾಲಸೆ ಇವರ ನಿತ್ಯದ ಕನಸು. ಚಂಗೀಸ್‌ಖಾನನ ದಾಳಿ, ತೈಮೂರ್‌ಲಂಗ್ನ ದಾಳಿ, ಹಿಟ್ಲರನ ಹಾವಳಿ.... ಇವೆಲ್ಲವನ್ನೂ ಭೀಕರ ಭೂಕಂಪಕ್ಕೆ ಹೋಲಿಸಬಹುದು. ಹೀಗೆ ನಮ್ಮ ಬುದ್ಧಿ ಶಕ್ತಿಯು ಎಷ್ಟು ಪ್ರಬಲವೋ ಪ್ರಭಾವಶಾಲಿಯೋ, ಅಷ್ಟೇ ವಿಲಕ್ಷಣವೂ ವಿಪರೀತವೂ ಪ್ರಳಯಕಾರಿಯೂ ವಿನಾಶಕಾರಿಯೂ ಆಗಬಹುದು. ಈ ವಿಲಕ್ಷಣ-ವಿನಾಶಕಾರಿ ಬುದ್ಧಿ ಶಕ್ತಿಯನ್ನು ಅಡಗಿಸುವುದಾದರೂ ಹೇಗೆ?

ಹಾಗೆಂದರೆ, ವಿವಿಧ ಯೋಚನೆ ಮಾಡದೆ ಇರುವುದು ಸಾಧ್ಯವೇ? ಖಂಡಿತಾ ಇಲ್ಲ. ಮನುಷ್ಯನಿಗೆ ಬುದ್ಧಿ ಇರುವವರೆಗೂ ವಿವಿಧ ಯೋಚನೆಗಳು, ವಿಕಾರಗಳು ಇರುವುದೇ. ಅವನ್ನು ತಪ್ಪಿಸಲು ಸಾಧ್ಯವಿಲ್ಲ. ಪ್ರತಿಯೊಬ್ಬನೂ ತನ್ನ ಪ್ರಧಾನ ಗುಣಕ್ಕನುಸಾರವಾಗಿ ಸತ್ವ, ರಜಸ್, ತಮಸ್ ಯೋಚನೆಗಳನ್ನು ಉಗುಳುತ್ತಲೇ ಇರುತ್ತಾನೆ, ತನ್ನ ಶ್ವಾಸ ನಿಃಶ್ವಾಸದಂತೆ. ಗೊಂದಲ-ಗಲಾಟೆಗಳನ್ನು ಕಡಿಮೆ ಮಾಡುವ ಒಂದೇ ದಾರಿಯೆಂದರೆ ಸಾತ್ವಿಕ ಗುಣಗಳನ್ನು ಬೆಳೆಸುವ ರೀತಿ-ನೀತಿ, ನುಡಿ-ನಡೆ, ಜೀವನ ಮೌಲ್ಯಗಳು, ಪರಿಪಾಠ ಮತ್ತು ಕಾನೂನು-ಕಾಯ್ದೆಗಳನ್ನು ಸಮರ್ಥಿಸುವುದು. ಕಲಿಯುಗದಲ್ಲಿ ಇದು ಸಾಧ್ಯವಿಲ್ಲೆಂದು ಹೇಳಿರುವುದು ಸರಿಯಾಗೇ ಇದೆಯೆಂದು ದಿನವೂ ಕಂಡುಬರುತ್ತಿದೆ. ಇದನ್ನು ಸಾಧ್ಯವಾಗಿಸುವ ಧೈರ್ಯ, ಪ್ರಯತ್ನಪಡುವ ಸ್ಥೈರ್ಯ ಯಾರಿಗಾದರೂ ಇದೆಯೆ?

ಒಟ್ಟಿನಲ್ಲಿ 'ನಡೆವುದೊಂದೆ ಭೂಮಿ, ಕುಡಿವುದೊಂದೇ ಜಲವು' ಎಂಬ ಭಾವನೆ ಹುಟ್ಟಲು ಅನೇಕ ಮಹತ್ತಾದ ಪ್ರಯತ್ನಗಳು ನಡೆಯಬೇಕು. ಮೊದಲಾಗಿ ಶಿವಶರಣರು ಹೇಳಿದಂತೆ ಅಂತರ್ ಶುದ್ಧಿ ಬಹಿರ್‌ಶುದ್ಧಿ ಅಥವಾ ಕಬೀರ ಹೇಳಿದಂತೆ, ಒಳಹೊರಗೂ ತಿಳಿಯಾಗಿ ಒಂದೇ ಆಗಿರಬೇಕು. ಎರಡನೆಯದಾಗಿ, ತಿಳಿ-ಸರಳ ಸ್ವಭಾವದವರ ಶೋಷಣೆಯಾಗಬಾರದು, ಪೋಷಣೆಯಾಗಬೇಕು. ಮೂರನೆಯದಾಗಿ 'ಬೇಕು'ಗಳ ಬೇಡಿಕೆಗೆ ಸ್ವನಿಯಂತ್ರಣದಿಂದ ಕಡಿವಾಣ ಹಾಕಬೇಕು. ಇದರ ಜೊತೆಗೆ ಅನ್ನ-ಬಟ್ಟೆ-ಸೂರಿಗಾಗಿ ತಾರತಮ್ಯವಿರಬಾರದು. ನಾಲ್ಕನೆಯದಾಗಿ ಎಲ್ಲಾ ರೀತಿಯ ಪಂಗಡ, ಜಾತಿ, ಮತಗಳ ನಡುವಿನ ತಿಕ್ಕಾಟಕ್ಕೆಡೆಕೊಡದೆ, ರಾಜ್ಯ ತನ್ನದೇ ಆದ ಸಾರ್ವತ್ರಿಕ ಸಾಮಾನ್ಯ ನೀತಿಯಂತೆ ಕಾರುಭಾರು ನಡೆಸಬೇಕು. ಕೊನೆಯದಾಗಿ, ಇಂದಿನ ಪರಿಸ್ಥಿತಿಗೆ ಅನುಕೂಲವಾಗುವಂತೆ ಸಾತ್ವಿಕ ಪ್ರೇರಣೆ ಪೋಷಣೆಗೆ ಹೊಂದುವಂತೆ ಹೊಸ ಜೀವನ ಮೌಲ್ಯಗಳನ್ನು ರೂಢಿಸಿಕೊಳ್ಳಬೇಕು. ಆಗ ನಾವು ನಡೆವುದೊಂದೇ ಭೂಮಿ, ಕುಡಿವುದೊಂದೇ ಜಲ.... ನಾವೆಲ್ಲಾ ಒಂದೇ ಮನುಜಕುಲ.

(ಮುಂಬಯಿ ಆಕಾಶವಾಣಿಯಿಂದ ಪ್ರಸಾರಿತ)

# ಕಥಾನುವಾದ



ಉರ್ದು ಮೂಲ:
**ಪ್ರೊ. ಜಫರ್ ಅಹಮದ್ ನಿಝಾಮಿ**
ಅನುವಾದ:
**ಮಾಧವರಾವ್ ಮುಧೋಳ್**

ಬೆಳಗಿನ ನಸುಗೆಂಪು ಎಲ್ಲ ಕಡೆಗೂ ಹರಡಿತ್ತು. ದೀರ್ಘ ನಿಟ್ಟುಸಿರುಬಿಟ್ಟು ಅವನು ಕುರ್ಚಿಯಿಂದ ಮೈಮುರಿದೆದ್ದ. ಎಂದಿನಂತೆ- ಇಂದು ರಾತ್ರಿಯನ್ನೂ ಜಾಗರಣೆಯಲ್ಲೇ ಕಳೆದಿದ್ದ. ಬೀದಿಗಳಲ್ಲಿ ಸದ್ದೇ ಇರಲಿಲ್ಲ. ವಾತಾವರಣ ದುಃಖ

ಭರಿತ ನಿಶ್ಯಬ್ದದಿಂದ ತುಂಬಿತ್ತು. ಪೇಪರಿನವರು, ಹಾಲಿನವರು ಮಾತ್ರ ಒಬ್ಬೊಬ್ಬರು ಅಲ್ಲಿ ಇಲ್ಲಿ ಕಾಣುತ್ತಿದ್ದರು. ಎಲ್ಲರ ಮುಖಗಳೂ ಕಳವಳದಿಂದ ಕಂಗೆಟ್ಟಿದ್ದವು. ಹೃದಯಗಳು ಭಯದಿಂದ ನಡಗುತ್ತಿದ್ದವು. ತಮ್ಮನ್ನು ಯಾರಾದರೂ ಹಿಂಬಾಲಿಸುತ್ತಿದ್ದಾರೋ ಎಂದು ಸಂಶಯದಿಂದ ಸುತ್ತಮುತ್ತ ನೋಡುತ್ತ ಅವರು ಮುಂದೆ ಸಾಗಿದ್ದರು. ತಮ್ಮ ನಿತ್ಯ ಜೀವನದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಾತ್ರ ಜನರು ಹೊರಬಂದಿದ್ದರು. ಇಲ್ಲವಾದರೆ ಈ ಭಯಾನಕ ಪರಿಸ್ಥಿತಿಯಲ್ಲಿ ಯಾರೂ ಮನೆ ಬಿಟ್ಟು ಹೊರಗೆ ಬರುವ ಧೈರ್ಯ ಮಾಡುತ್ತಿರಲಿಲ್ಲ.

ಪಟ್ಟಣದ ಈ ದುಃಸ್ಥಿತಿ ಕಂಡು ಅವನ ತುಟಿಗಳ ಮೇಲೆ ಮುಗುಳುನಗು ಸುಳಿಯಿತು. ಮುಖದಲ್ಲಿ ಗೆಲುವು ಮೂಡಿತು. ಎದುರಿನ ಕಿಟಕಿಯ ಬಾಗಿಲು ಮುಚ್ಚಿ ತೃಪ್ತಿಯಿಂದ ದೀರ್ಘ ಉಸಿರೆಳೆದು ಹಿಂಬದಿಯ ಕೋಣೆಗೆ ತೆರಳಿ ತನ್ನ ಮೂವರು ಸಂಗಡಿಗರನ್ನು ಮಾತನಾಡಿಸಿದ.

"ಪಟ್ಟಣವೆಲ್ಲ ಸ್ಮಶಾನದಂತಾಗಿದೆ."

"ಹೌದು! ಸ್ಮಶಾನಕ್ಕೂ ಈ ಪಟ್ಟಣಕ್ಕೂ ಯಾವ ವ್ಯತ್ಯಾಸವೂ ಕಾಣುತ್ತಿಲ್ಲ" ಎಂದ ಅವನ ಒಬ್ಬ ಸಂಗಡಿಗ.

"ಸ್ಮಶಾನದಲ್ಲಾದರೂ ಸ್ವಲ್ಪ ಕಳೆಯಿರುತ್ತದೆ. ಇಲ್ಲಿ ಅದೂ ಇಲ್ಲ," ಎರಡನೆಯವ ಧ್ವನಿಗೂಡಿಸಿದ.

"ಸ್ಮಶಾನ ಮತ್ತು ಪಟ್ಟಣ ಇವುಗಳಲ್ಲಿರುವ ವ್ಯತ್ಯಾಸವನ್ನು ಕಿತ್ತು ಹಾಕಿ! ಈ ಹೊಣೆ ನಿಮ್ಮನ್ನೇ ಕೂಡಿದೆ," ಮೂರನೆಯವನೆಂದ.

"ನಿಜ! ಈ ಹೊಣೆ ನನ್ನದು. ನೀವೂ ಇದರಲ್ಲಿ ಸಮಾನಪಾಲುಗಾರರು. ನಾವು ಈ ಭಯೋತ್ಪಾದಕ ವೃತ್ತಿಯ ದಾರಿಯನ್ನು ಎಂದಿನಿಂದ ತುಳಿಯಲು ಪ್ರಾರಂಭಿಸಿದ್ದೇವೋ ಅಂದಿನಿಂದ ಹಿಂದೆ ತಿರುಗಿಯೂ ನೋಡಿಲ್ಲ, ನೋಡುವುದೂ ಇಲ್ಲ. ಸಂಗಡಿಗರೇ! ಹಿಂದಿನದನ್ನೆಲ್ಲ ಮರೆತುಬಿಡಿ. ಅಚಲ ವಿಶ್ವಾಸದಿಂದ, ಧೈರ್ಯದಿಂದ ಭವಿಷ್ಯತ್ತಿನತ್ತ ದಿಟ್ಟಹೆಜ್ಜೆ ಇರಿಸುತ್ತ ಸಾಗಿ, ಹಾಂ! ನೀವು ಪತ್ರಿಕೆಯ ಹೆಡ್‌ಲೈನ್ಸ್ ಓದಿರಬಹುದಲ್ಲವೆ? ಹೊಸ ಸಮಾಚಾರ ಏನಾದರೂ ಇದ್ದರೆ ತಿಳಿಸಿ," ಎಂದ.

"ಸಮಾಚಾರ? ಸಮಾಚಾರವೆಲ್ಲಾ ಅದೇ. ನಾವು ಏನೇನು ಮಾಡಿದ್ದೇವೋ, ಅದೆ. ಎಲ್ಲ ಪತ್ರಿಕೆಗಳೂ ನಮ್ಮನ್ನೇ ಹೊಗಳುತ್ತಿವೆ. ಪತ್ರಿಕೆಯಲ್ಲಿ ನಮ್ಮನ್ನೂ ನಮ್ಮ ಸಂಗಡಿಗರ ಸಾಹಸಗಳನ್ನೂ ಹೊಗಳದ ಯಾವ ಪುಟಗಳೂ ಇಲ್ಲ," ಮೊದಲ ಸಂಗಡಿಗ ಹುಮ್ಮಸ್ಸಿನಿಂದ ನುಡಿದ.

"ಇದು ಹೊಗಳಿಕೆಯ ಸಮಯವಲ್ಲ. ಸ್ವಲ್ಪ ವಿವರವಾಗಿ ವಿಷಯ ತಿಳಿಸಿರಿ," ಗಡಸು ದನಿಯಲ್ಲಿ ಅವನು ನುಡಿದ.

"ಹಿಂದಿನ ಇಪ್ಪತ್ನಾಲ್ಕು ಗಂಟೆಗಳಲ್ಲಿ ಸತ್ತವರ ಸಂಖ್ಯೆ ಇಪ್ಪತ್ತಾಗಿದೆ."



"ಕೇವಲ ಇಪ್ಪತ್ತೇ? ಇದು ಬಹಳ ಕಡಿಮೆ..... ಸರಾಸರಿ ಗಂಟೆಗೆ ಒಬ್ಬನಾದರೂ ಸತ್ತಂತಾಗಲಿಲ್ಲ."

"ಆದೀತು. ಹಾಗೂ ಆದೀತು. ಹಿಂದಿನ ದಿನಗಳಲ್ಲಿ ಸತ್ತವರ ಈ ಪ್ರಮಾಣ ದಿವಸಕ್ಕೆ ನಲವತ್ತರವರೆಗೂ ಏರಿತ್ತು. ಹಾಗೆ ನೋಡಿದರೆ ಇವತ್ತಿನ ಸಮಾಚಾರದಲ್ಲಿ ಇಪ್ಪತ್ತು ಸಾವು ಬೇರೆ ಬೇರೆ ಆಕಸ್ಮಿಕಗಳಲ್ಲಿ ಸಂಭವಿಸಿವೆ. ಬೇರೆ ಇನ್ನೂ ಅನೇಕ ದುರ್ಘಟನೆಗಳೂ ಇವೆ."

"ಹಾಗಾದರೆ ಒಳ್ಳೇ ಸಮಾಚಾರವೇ.... ಹೂಂ! ಮುಂದೆ ಹೇಳಿ," ಎಂದು ಕೈ ಮಾಡಿ ಸೂಚಿಸಿದ.

"ಮೂರು ಕಟ್ಟಡಗಳಿಗೆ ಬೆಂಕಿ ಬಿದ್ದಿವೆ.

ಮೂರು ಸ್ಥಳಗಳಲ್ಲಿ ಬಾಂಬ್ ಸ್ಫೋಟದಿಂದ ಅನೇಕ ಜನ ಗಾಯಗೊಂಡಿದ್ದಾರೆ."

"ಯಾರೂ ಸತ್ತಿಲ್ಲವೆ?... ಬರೀ ಗಾಯಗೊಂಡಿದ್ದಾರೆಯೆ?" ಕೇಳಿದ ಅವನು.

"ಗಾಯಗೊಂಡವರಲ್ಲಿ ಅನೇಕರ ಸ್ಥಿತಿ ಚಿಂತಾಜನಕವಿದೆ. ಸಂಜೆಯ ಹೊತ್ತಿಗೆ ಇನ್ನೂ ಕೆಲವರು ಸತ್ತ ಶುಭ ಸಮಾಚಾರ ಬರಬಹುದು," ಎಂದ ಇನ್ನೊಬ್ಬ.

"ಸರಿ. ಈ ಎಲ್ಲ ಕಾರ್ಯಗಳಂತು ನಾವು ಮನಸ್ಸು ಮಾಡಿದಂತೇ ಆಗಿವೆ. ಆದರೆ ನನಗೆ ಬಹುದಿನಗಳಿಂದ ಸಿದ್ಧತೆ-ಮಾಡುತ್ತಿದ್ದೆವಲ್ಲ, ಅದರ ಸಮಾಚಾರ ಏನಾದರೂ...." ಎಂದು ಚಿಂತಾಮಗ್ನನಾಗಿ ನುಡಿದ.

"ಓ! ಅದೇ!! ಗಂಗಾ- ಜಮುನಾ ಮೇಲ್ ಪ್ಲಾನೆ?" ಎಂದು ಪ್ರಶ್ನಾರ್ಥಕ ದೃಷ್ಟಿಯಿಂದ ಸಂಗಡಿಗನೊಬ್ಬ ನೋಡಿದ.

"ಹಾಂ! ಅದೇ!!"

"ಅದೋ.... ಅದು ಕಳೆದ ರಾತ್ರಿನೇ ಆಗಬೇಕಿತ್ತು. ಆ ಕೆಲಸ, ನೀವು ನಿಮ್ಮ ಯಾವ ಸಂಗಡಿಗರಿಗೆ ಒಪ್ಪಿಸಿದ್ದೀರೋ, ಅವರು ಈಗಾಗಲೇ ಅದನ್ನು ಯಶಸ್ವಿಮಾಡಿರಬೇಕು."

"ದೇವರು ಹಾಗೆ ಮಾಡಿಸಲಿ, ಈಗಾಗಲೇ ಪೊಲೀಸರು, ದಂಡಿನ ಸೈನಿಕರು ಬಹಳ ಜಾಗರೂಕರಾಗಿದ್ದಾರೆ. ಗುಪ್ತಪೊಲೀಸ್ ಅಧಿಕಾರಿಗಳು ಬೇಟೆಯ ನಾಯಿಗಳಂತೆ ನಮ್ಮ ವಾಸನೆ ಕಂಡು ಹಿಡಿಯುವುದಕ್ಕೆ ಎಲ್ಲ ಕಡೆಯಲ್ಲೂ ಪ್ರಯತ್ನಿಸುತ್ತಿದ್ದಾರೆ. ಪ್ರಾಯಶಃ ಅದೇ ಕಾರಣದಿಂದ ಈ ವರೆಗೆ ನಮ್ಮ ಸಂಗಡಿಗರಾರೂ ಈ ವಿಷಯ ತಿಳಿಸಿಲ್ಲ."

"ಹೌದು! ಎಚ್ಚರಿಕೆ ಬಹಳ ಅವಶ್ಯ. ನನ್ನನ್ನು ಜೀವಂತ ಅಥವಾ ನಿರ್ಜೀವ ಹಿಡಿದುಕೊಟ್ಟವರಿಗೆ ಲಕ್ಷರೂಪಾಯಿ ಬಹುಮಾನವಿದೆ. ನಿಮ್ಮ ಒಬ್ಬೊಬ್ಬರ ತಲೆಗೂ ಐವತ್ತು ಸಾವಿರ ಬೆಲೆ! ಗೊತ್ತೇ?"

"ಹಾಗೆ ನೋಡಿದರೆ ಇಂಥ ಸಾವಿರಾರು ಬಹುಮಾನಗಳನ್ನು ನಾವು ಖುದ್ದಾಗಿ ಈಗಾಗಲೇ ಅನೇಕ ಜನರಲ್ಲಿ ಹಂಚಿದ್ದೇವೆ. ಏನು? ನಮ್ಮ ಹತ್ತಿರ ಆಯುಧಗಳಾಗಲಿ, ಹಣಕ್ಕಾಗಲಿ ಕೊರತೆ ಇಲ್ಲವೆಂಬುದು ಸರಕಾರಕ್ಕೆ ಗೊತ್ತಿಲ್ಲವೆ? ನಮ್ಮ ತಲೆಗಳ ಮೇಲೆ ವಿದೇಶಿ ಶಕ್ತಿಗಳ ವರದ ಹಸ್ತವಿದೆಯೆಂದು ಗೊತ್ತಿಲ್ಲವೆ?"

"ಖಂಡಿತವಾಗಿ ನಾವು ಸರಕಾರವನ್ನು ತತ್ತರಿಸಿ, ಸೋಲಿಸಬೇಕಾಗಿದೆ. ಅದರ ಚಾಲಕ ಯಂತ್ರವನ್ನೇ ನಾಶಮಾಡಬೇಕಾಗಿದೆ. ರಾಜಕೀಯ ಗುಂಪಿನ ಪ್ರಭಾವವನ್ನು ಸದ್ದಿಲ್ಲದಂತೆ ಅಡಗಿಸಬೇಕಾಗಿದೆ. ಸಂಬಂಧಪಟ್ಟ ಮುಖಂಡರುಗಳನ್ನು ದಾರಿಯಿಂದ ದೂರ ಎಸೆಯಬೇಕಾಗಿದೆ. ಸುಸೂತ್ರವಾಗುತ್ತಿದ್ದ ಜೀವನ ಕ್ರಮವನ್ನು ಭಯದ ಅಗ್ನಿಜ್ವಾಲೆಯಲ್ಲಿ ಬೇಯಿಸಬೇಕಾಗಿದೆ. ನಮಗೆ ವಿಧಾಯಕ ಕಾರ್ಯವೆಂದರೆ ಅಸಹ್ಯ, ತಿರಸ್ಕಾರ. ನಮಗೆ ವಿಧ್ವಂಸಕತೆಯಲ್ಲಿ ವಿಶ್ವಾಸವಿದೆ. ನಮ್ಮದು ಒಂದೆ ಧರ್ಮ, ಹಿಂಸೆ ಮತ್ತು ವಿಧ್ವಂಸಕತೆ.... ಕೌರ್ಯ, ಗುಂಡು, ಬಾಂಬು, ಬೆಂಕಿ ನಮ್ಮ ಆಯುಧಗಳು. ನಾವು ಜನರಲ್ಲಿ ಭೀತಿಯನ್ನು ಹುಟ್ಟಿಸಿ ಸರಕಾರ ನಿಷ್ಕ್ರಿಯವಾಗುವಂತೆ ಮಾಡುತ್ತೇವೆ. ಅಂದರೆ, ನಮ್ಮ ಒಡೆಯರು, ನಮ್ಮ ವಿದೇಶಿ ಒಡೆಯರು-ತಮ್ಮ ಪ್ರಭಾವಲಯದಲ್ಲಿ, ನಮ್ಮ ದೇಶವನ್ನು ಇಟ್ಟುಕೊಂಡಾರು."

"ಅರೆ! ಏಳು ಗಂಟೆಯಾಗುತ್ತಿದೆ. ಟಿ.ವಿ. ಸ್ವಿಚ್ ಆನ್ ಮಾಡಿ. ಸಮಾಚಾರದ ಸಮಯವಾಗಿದೆ," ಎಂದು ಸ್ನೇಹಿತನೊಬ್ಬ ಕುತೂಹಲದಿಂದ ನುಡಿದ.... ಟಿ.ವಿ.ಯಿಂದ ಸಮಾಚಾರ ಬಿತ್ತರಣೆ ಪ್ರಾರಂಭವಾಯಿತು.

"ಕಳೆದ, ರಾತ್ರಿಯ ಕೊನೆಯ ಜಾವದಲ್ಲಿ ಪಟ್ಟಣದಿಂದ ಇಪ್ಪತ್ತು ಕಿಲೋಮೀಟರ್ ದೂರದಲ್ಲಿ 'ಗಂಗಾ-ಜಮುನಾ ಮೇಲ್' ಅಪಘಾತಕ್ಕೀಡಾಯಿತು. ಮುಂದಿನ ಬೋಗಿಯಲ್ಲಿದ್ದ ಎಲ್ಲ ಪ್ರಯಾಣಿಕರು ಮೃತ್ಯುವಿಗೆ ತುತ್ತಾದರು. ಇತರ ಬೋಗಿಗಳಲ್ಲಿದ್ದ ಪ್ರಯಾಣಿಕರೂ ಬಹು ಸಂಖ್ಯೆಯಲ್ಲಿ ಗಾಯಗೊಂಡಿದ್ದಾರೆ. ಅವರಿಗೆ ವೈದ್ಯಕೀಯ ನೆರವು ನೀಡಲಾಗುತ್ತಿದೆ. ರೇಲ್ವೆಯ ಎಲ್ಲ ಸಿಬ್ಬಂದಿ ತೀವ್ರಗತಿಯಿಂದ ಗಾಯಗೊಂಡವರಿಗೆ ಚಿಕಿತ್ಸಾ ಸೌಕರ್ಯ ನೀಡುವ ಕಾರ್ಯದಲ್ಲಿ ನಿರತವಾಗಿದೆ. ಸತ್ತವರ ಸಂಖ್ಯೆ ಖಚಿತವಾಗಿ ಗೊತ್ತಾಗಿಲ್ಲ. ಮೃತದೇಹಗಳನ್ನು ಗುರುತಿಸುವ ಕೆಲಸ ನಡೆದಿದೆ. ಈ ಅಪಘಾತ ಕಂಬಿಗಳ ಮೇಲಿಟ್ಟ ಬಾಂಬ್ ಸಿಡಿತ

ದಿಂದ ಆಗಿದೆಯೆಂದು ಊಹಿಸಲಾಗಿದೆ. ಈ ವರೆಗಂತೂ ಯಾವ ಭಯೋತ್ಪಾದಕರ ಗುಂಪೂ ಈ ಕಾರ್ಯ ತಮ್ಮದ್ದೆಂದು ಹೊಣೆ ಹೊತ್ತು ಒಪ್ಪಿಕೊಂಡಿಲ್ಲ."

"ಶಬಾಷ್! ಸಂಗಡಿಗರೇ ಶಬಾಷ್!!" ಅವನು ಚೀರಿಕೊಂಡ.

"ನೀವು ಪ್ರತಿಜ್ಞೆ ಮಾಡಿದಂತೆಯೆ ಮಾಡಿ ತೋರಿಸಿದ್ದೀರಿ. ನಾವು ಈ ದುರ್ಘಟನೆಯ ಹೊಣೆಯನ್ನು ಒಪ್ಪಿಕೊಳ್ಳುತ್ತೇವೆ. ಢಾಣಾಢಂಗುರವಾಗಿ ಈ ಮಾತನ್ನು ಘೋಷಿಸುತ್ತೇವೆ. ತೆವಳುತ್ತಿರುವ ಈ ರೈಲಿನ ಸಂಚಾರ ನಿಂತು ಹೋಗಬೇಕು. ತಲೆ ಎತ್ತಿದ ಕಟ್ಟಡಗಳು ಉರುಳಿ ನೆಲಸಮವಾಗಬೇಕು. ಮೋಟಾರ್ ವಾಹನಗಳು, ಕಾರಖಾನೆಗಳ ಚಕ್ರಗಳು ಚಲಿಸದಂತಾಗಬೇಕು. ಚಲಿಸುತ್ತಿರುವ ಕಾಲುಗಳಿಲ್ಲ ತಡೆಯುಂಟಾಗಬೇಕು. ಈ ರೈಲಿನ ದುರಂತ ನಮ್ಮ ಮುಂದಿನ ಮಹಾಕಾರ್ಯಕ್ಕೆ ಮಹತ್ವದ ಬೆಸುಗೆಯಾಗಿದೆ."

"ಖಂಡಿತವಾಗಿಯೂ ಈ ದುರ್ಘಟನೆ ನಮಗೂ ಸರಕಾರಕ್ಕೂ ಮಹತ್ವದ್ದಾಗಿ ಪರಿಣಮಿಸುವುದು!" ಎಂದು ಸಂಗಡಿಗರು ಉದ್ಗರಿಸಿದರು.

ಅವನು ಮತ್ತೆ ಗೊಣಗತೊಡಗಿದ. "ಬಾಂಬ್ ಸಿಡಿತದಿಂದ, ಜನರ ದೇಹ ಛಿದ್ರಛಿದ್ರವಾಗಿ ಆಕಾಶಕ್ಕೆ ತೂರಿ ಭೂಮಿಗೆರಗಿದಾಗ ಅದೆಷ್ಟು ಸಂತೋಷವಾಗಿರಬೇಕು! ಅವರ ಚೀತ್ಕಾರ ವಾತಾವರಣವನ್ನೆಲ್ಲ ದುಃಖದಿಂದ ತುಂಬಿ, ಭಯಗ್ರಸ್ತ ಮಾಡಿರಬೇಕು. ಬೆಂಕಿಯಿಂದ ಬೆಂದ ದೇಹಗಳೆಲ್ಲ ಕಂದಿ ಕರಕಾಗಿ ಇದ್ದಲಿಯಾಗಿ ಹೋಗಿರಬೇಕು.... ಹ! ಹ!! ಹ!!!.... "

"ಮತ್ತೆ ಶವಗಳು.... ಸಿದಿಗೆಗಳು..... ಮಸಣಗಳು..... ಸ್ಮಶಾನಗಳು.... ಕಣ್ಣೀರು, ಚೀತ್ಕಾರ, ನಿಟ್ಟುಸಿರು, ಬಿಕ್ಕಿ ಬಿಕ್ಕಿ ಅಳುವುದು.... ಜೀವನದುದ್ದಕ್ಕೂ ಅಳಿಯದ ಸಂಕಟ..... ಹೀಗೆಯೇ ಎಲ್ಲವೂ ಆಗುವುದು.... ಮತ್ತೆ ಎಲ್ಲ ಹೀಗೆ ಆಗುತ್ತಲೇ ಹೋಗುವುದು.... ಭಯೋತ್ಪಾದಕತೆಗೆ ಜಯವಾಗಲಿ!.... ವಿಧ್ವಂಸಕತೆ ಚಿರಾಯುವಾಗಲಿ...." ಅವನಿಗೆ ಒಂದು ಒಗೆಯ ಉನ್ಮಾದ ಆವರಿಸಿದ್ದಿತು.

ಅವನೊಬ್ಬ ಒಳ್ಳೆಯ ಕುಟುಂಬದ ವ್ಯಕ್ತಿ.



ತಂದೆ ತಾಯಿಗಳನ್ನು ಪ್ರೀತಿಸುತ್ತಿದ್ದ. ಹೆಂಡತಿ, ಸ್ವೀಟೀಗಾಗಿ ಪ್ರಾಣವನ್ನೇ ಬಿಡುತ್ತಿದ್ದ. ಅವನು ಎರಡು ಮಕ್ಕಳ ತಂದೆ. ಮಕ್ಕಳು ಅವನ ಕಣ್ಮಣಿಗಳು. ಪೋಲೀಸರು ತನ್ನ ಅನ್ವೇಷಣೆಯಲ್ಲಿದ್ದರೂ ಅವನು ಪ್ರಾಣವನ್ನೂ ಲೆಕ್ಕಿಸದೆ, ಪ್ರತಿವಾರ, ಹದಿನೈದು ದಿವಸಕ್ಕೊಮ್ಮೆ ತಮ್ಮೂರಿಗೆ ಹೋಗಿ ಎಲ್ಲರನ್ನೂ ಕಂಡು ಬರುತ್ತಿದ್ದ. ಇದರಿಂದ ಅವನಿಗೆ ಮಾನಸಿಕ ಶಾಂತಿ ದೊರೆಯುತ್ತಿತ್ತು.

ತಂದೆ ತಾಯಿಗಳ ಶುಭಾಶೀರ್ವಾದ, ಹೆಂಡತಿಯ ಅಗಾಧ ಪ್ರೀತಿ, ಮಕ್ಕಳ ಬತ್ತದ ಅಂತಃಕರಣಗಳೆಲ್ಲವೂ ಅವನ ಜೀವನ ಸಂಪತ್ತಾಗಿದ್ದವು. ಭಯೋತ್ಪಾದಕನಾಗಿದ್ದರೂ ಅಂತರಂಗದಲ್ಲಿ ಅಡಗಿದ್ದ, ಅವನ ಮಗುತನ, ಗಂಡತನ, ತಂದೆತನ ಆಗಾಗ ಸಿಡಿದೇಳುತ್ತಿದ್ದವು. ಈಗಲೂ ತನಗರಿಯದಂತೆ, ಅವನು ಮಾನಸಿಕವಾಗಿ ತನ್ನ ಮನೆಯಂಗಳದಲ್ಲಿ ನಿಂತುಕೊಂಡಿದ್ದ.

ಅಷ್ಟರಲ್ಲಿ ಕರೆಗಂಟೆ ಯಾರದೋ ಬರುವನ್ನು ಸೂಚಿಸಿತು. ಅವನು ಜಾಗ್ರತನಾಗಿ ಕುರ್ಚಿಯ ಮೇಲೆ ಕುಳಿತ. ಕಿಸೆಯಲ್ಲಿರುವ ಪಿಸ್ತೂಲಿನ ಗುಂಡಿಯ ಮೇಲೆ ಅವನ ಕೈ ದೃಢವಾಯಿತು. ಸ್ವಲ್ಪ ಸಮಯದಲ್ಲೇ ಅವನ ಚಿಕ್ಕ ಸೋದರ ಎದುರಿಗೆ ಬಂದಿದ್ದ. ಅನೇಕ ಸಲ ಅವನು, ತನ್ನ ಅಣ್ಣನಿಗೆ ಭಯೋತ್ಪಾದಕರ ಪಥ ತುಳಿಯಬಾರ



ದೆಂದೂ, ಘನತೆ-ಗೌರವದ ಜೀವನ ಸಾಗಿಸಬೇಕೆಂದೂ ಬುದ್ಧಿವಾದ ಹೇಳುತ್ತಲೇ ಇದ್ದ.

ತನ್ನ ತಮ್ಮನನ್ನು ನೋಡುತ್ತಲೂ ಅವನು ವ್ಯಗ್ರವಾಗಿ, "... ಹೇಗೆ ಬಂದೆ ಇಲ್ಲಿ? ನಿನ್ನನ್ನು ಇಲ್ಲಿಯವರೆಗೆ ಯಾರು ಬಿಟ್ಟರು?... ಏಕೆ ಬಂದಿರುವಿ?.... ಏನು? ಮತ್ತೆ ಅದೇ ಆ ಶಾಂತಿ ಸೌಹಾರ್ದದ ಗಿಳಿಪಾಠ ನನಗೆ ಒಪ್ಪಿಸಲು ಬಂದಿರುವೆಯಾ..? ಅದೆಲ್ಲಾ ನನಗೆ ಅರ್ಥಹೀನ... ಹೊರಟು ಹೋಗು ಇಲ್ಲಿಂದ," ಎಂದು ಕಿರುಚಿಕೊಂಡ.

"ಹೊರಟು ಹೋಗುತ್ತೇನೆ. ಆದರೆ ನಿನಗೆ ಕೇವಲ ಇಷ್ಟು ಸುದ್ದಿ ಹೇಳಬೇಕೆಂದು ಬಂದಿದ್ದೇನೆ. ನಿನ್ನೆ ಮಮ್ಮಿ ಡ್ಯಾಡಿ, ಸ್ವೀಟೀ ಭಾಬಿ ಮತ್ತು ನಿನ್ನ ಎರಡೂ ಮಕ್ಕಳು ಅಕಸ್ಮಾತ್ತಾಗಿ ಈ ಪಟ್ಟಣಕ್ಕೆ ಹೊರಟಿದ್ದರು. ಆದರೆ 'ಗಂಗಾ-ಜಮುನಾ ಮೇಲ್'ನ ಯಾವ ಬೋಗಿಯಲ್ಲಿ ಅವರು ಕುಳಿತಿದ್ದರೋ ಅದು ಬಾಂಬ್ ಸಿಡಿತದಿಂದ ಅಪಘಾತಕ್ಕೀಡಾಯಿತು. ನಾನು ಕೊನೆಯ ಬೋಗಿಯಲ್ಲಿದ್ದೆ. ಅದರಿಂದಾಗಿ ಉಳಿದುಕೊಂಡೆ. ಅವರ ದೇಹಗಳು ಛಿದ್ರಛಿದ್ರವಾಗಿ ಗಾಳಿಯಲ್ಲಿ ತೂರಿ ನೆಲಕ್ಕುರುಳಿ ದಿಕ್ಕಾಪಾಲಾದವು. ಅವರ ಚೀತ್ಕಾರ ವಾತಾವರಣವನ್ನೆಲ್ಲ ಭಯಗ್ರಸ್ತ ಮಾಡಿತು. ಬೆಂಕಿಯಲ್ಲಿ ಬೆಂದುಹೋದ ಅವರ ದೇಹದ ತುಣುಕುಗಳು ಕಂದಿ ಕರ್ರಗಾಗಿ ಇದ್ದಲಿಯಾಗಿ ಹೋದವು. ಅವಕ್ಕೆ ಈಗ ಸಿದಿಗೆಯ ಅಥವಾ ಸ್ಮಶಾನದ ಅವಶ್ಯಕತೆ ಇಲ್ಲ. ಆಯಿತು. ಇನ್ನು ನಾನು ಹೊರಡುತ್ತೇನೆ."

ಇದನ್ನು ಕೇಳಿ ಅವನಿಗೆ ರೈಲು ಕಂಬಿಯ ಮೇಲಿಟ್ಟ ಬಾಂಬು, ತನ್ನ ತಲೆಯಲ್ಲಿಯೇ ಸಿಡಿದಂತಾಯಿತು. ಕರುಳು ಕಿತ್ತಿ ಬರುವ ಧ್ವನಿಯಲ್ಲಿ, "ಮಮ್ಮಿ ಡ್ಯಾಡಿ, ಸ್ವೀಟೀ... ಹಾಗೂ ಮಕ್ಕಳು ಎಲ್ಲರೂ ತೀರಿಹೋದರು. ಆದರೆ ಏಕೆ? ಅವರಂತೂ ದೇವಲೋಕದ ಪುಣ್ಯಜೀವಿಗಳಂತೆ ಮುಗ್ಧರಾಗಿದ್ದರು. ಪಾಪದ ಲವಲೇಶವೂ ಅವರಲ್ಲಿರಲಿಲ್ಲ. ಅತ್ಯಂತ ನಿರಪರಾಧಿಗಳು. ಅವರು ನನ್ನ ತಾಯಿ, ತಂದೆಗಳು. ನನ್ನ ಹೆಂಡತಿ ಮಕ್ಕಳು...." ಎಂದು ದುಃಖಾತಿಶಯದಿಂದ ರೋದಿಸುತ್ತ ಅತಿ ದುರ್ಬಲನಾಗಿ, ಕುರ್ಚಿಯಲ್ಲಿ ಕುಸಿದು ಬಿದ್ದ.

---

## ರೋಮಾನ್ಸ್ ಮಾಡುವ ಕಾಲ

ಉತ್ಕಲ ವಿಶ್ವವಿದ್ಯಾಲಯದಲ್ಲಿ ಟಿ.ಎನ್. ಶೇಷನ್ ಭಾಷಣ ಮಾಡುತ್ತಿದ್ದರು. ವಿಶ್ವವಿದ್ಯಾಲಯದಂತಹ ಸರಸ್ವತೀ ಪೀಠದಲ್ಲಿ ನಡೆಯುತ್ತಿರುವ ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಸಾಮೂಹಿಕ ನಕಲು ಮಾಡುವಿಕೆಗಳನ್ನು ಪ್ರಸ್ತಾಪಿಸುತ್ತ ತಮ್ಮ ವಿಷಾದವನ್ನು ಸೂಚಿಸಿದರು. ಅವರ ಭಾಷಣ ಮುಗಿದ ನಂತರ ಹದಿನೆಂಟು ವರ್ಷದ ಯುವತಿಯೊಬ್ಬಳು, "ನೀವು ಹದಿನೆಂಟು ವಯಸ್ಸಾದ ಗಂಡು ಹೆಣ್ಣುಗಳಿಗೆ ಓಟು ಮಾಡುವ ಅಧಿಕಾರವನ್ನು ಕೊಟ್ಟಿದ್ದೀರಿ. ಧನ್ಯವಾದಗಳು. ಆದರೆ ಅವರಿಗೆ ಚುನಾವಣೆಗೆ ನಿಲ್ಲುವ ಹಕ್ಕನ್ನು ಏಕೆ ಕೊಟ್ಟಿಲ್ಲ?" ಎಂದು ಪ್ರಶ್ನಿಸಿದಳು. ಶರವೇಗದಲ್ಲಿ ಬಂತು ಶೇಷನ್ನರ ಉತ್ತರ, "೧೮ರ ಹರೆಯ ರೋಮಾನ್ಸ್ ಮಾಡುವ ಕಾಲ; ಚುನಾವಣೆಗಳಲ್ಲಿ ಸ್ಪರ್ಧಿಸುವ ಕಾಲವಲ್ಲ."

● ಡಿ. ಗುಂಡೂರಾವ್

---

ಮಹಾತ್ಮಾಜಿ ದೇಶದಲ್ಲೆಲ್ಲಾ ಸಂಚರಿಸುತ್ತಿದ್ದ ಸಂದರ್ಭ. ಗಾಂಧೀಜಿಯ ನಿಕಟವರ್ತಿಗಳಲ್ಲೊಬ್ಬರಾಗಿದ್ದ ಮಹಾವೀರ ತ್ಯಾಗಿಯವರು ಮಹಿಳೆಯರಿಗಾಗಿಯೇ ಪ್ರತ್ಯೇಕ ಸಭೆಯೊಂದನ್ನು ಏರ್ಪಡಿಸಿದ್ದರು. ಈ ಸಭೆಗೆ ಎಲ್ಲೆಲ್ಲಿಂದಲೋ ಅಸಂಖ್ಯಾತ ಮಹಿಳೆಯರು ಗುಂಪುಗುಂಪಾಗಿ ಬರಹತ್ತಿದರು. ವಿಶಾಲವಾಗಿದ್ದ ಸಭಾಂಗಣ ಮಹಿಳೆಯರು ಹಾಗೂ ಮಕ್ಕಳಿಂದ ತುಂಬಿಹೋಗಿತ್ತು. ನಗರಗಳಿಂದಷ್ಟೇ ಅಲ್ಲ, ಹಳ್ಳಿಗಳಿಂದಲೂ ಬೆಳ್ಳಿ ಬಂಗಾರದ ಒಡವೆಗಳನ್ನು ಧರಿಸಿದ್ದ ಹೆಣ್ಣು ಮಕ್ಕಳು ಎತ್ತಿನ ಬಂಡಿಗಳಲ್ಲಿ ಕುಳಿತು ಸಂಭ್ರಮದಿಂದ ಡೋಲುಗಳನ್ನು ಬಾರಿಸುತ್ತ ಹಾಡು ಹೇಳುತ್ತ ಬಂದುಸೇರಿದ್ದರು.

ತ್ಯಾಗಿಯವರ ಸಹಧರ್ಮಿಣಿ ಶ್ರೀಮತಿ ಶರ್ಮದೆಯವರಿಂದ ಸ್ವಾಗತ ಭಾಷಣವಾಗಿ ಸುಮಾರು ಎರಡು ಸಾವಿರ ರೂಪಾಯಿಗಳ ರಾಷ್ಟ್ರ ಕಲ್ಯಾಣ ನಿಧಿಯ ಅರ್ಪಣೆಯೂ ಆಯಿತು. ನಂತರ ಸಮಾಜದಲ್ಲಿ ಸ್ತ್ರೀಯರ ಮಹತ್ವ ಕುರಿತು ಮಹಾತ್ಮರ ಭಾಷಣವಾಯಿತು.

ಗಾಂಧೀಜಿ ತುಂಬಾ ಹರ್ಷಗೊಂಡಿದ್ದರು. ತಮ್ಮ ಭಾಷಣದದಲ್ಲಿ, "ನಾನು ನಿಮ್ಮ ಒಡವೆ-ಆಭರಣಗಳನ್ನು ಬೇಡುವೆ. ದೇಶಕ್ಕಾಗಿ ನಿಮ್ಮ ಉಂಗುರಗಳನ್ನು ಬೇಡುವೆ. ಬಳೆಗಳನ್ನು ಪಡೆಯುವೆ. ನಿಮ್ಮ ಒಡವೆ ಆಭರಣಗಳ ದಾನಕ್ಕೆ ನಿಮ್ಮ ಗಂಡಸರ ಅನುಮತಿಯೇನೂ ಬೇಕಾಗಿಲ್ಲ. ಕಾರಣ ಅದೆಲ್ಲವೂ ನಿಮ್ಮದಲ್ಲವೇ...? ಅಂದ ಮೇಲೆ ಕೊಡಲು ಅನುಮಾನವೇಕೆ? ನೀವೆಲ್ಲ ನಿಮ್ಮ ನಿಮ್ಮ ಒಡವೆ-ಆಭರಣಗಳಲ್ಲಿ ಕೆಲವನ್ನಾದರೂ ನನಗೆ ಕೊಟ್ಟುಬಿಡಿ. ಅದರಿಂದ ನೀವೇನೂ ಬಡವಾಗಲಾರಿರಿ. ಅದಕ್ಕಾಗಿ ನನ್ನೆಡೆಗೆ ನೀವು ಬರಬೇಕಾಗಿಲ್ಲ. ನಾನೇ ನೀವಿದ್ದಲ್ಲಿಗೆ ಬಂದು ಅದನ್ನೆಲ್ಲ ಸ್ವೀಕರಿಸುವೆ," ಎಂದು ಹೇಳಿದವರೇ ಕುರ್ಚಿಯಿಂದಿಳಿದು ಮಹಿಳೆಯರ ಮಧ್ಯದಲ್ಲಿ ಜೋಗಸೆಯನ್ನೊಡ್ಡಿ ಭಿಕ್ಷುಕನಂತೆ ಬೇಡ ಹತ್ತಿದರು. ಮಹಿಳೆಯರಲ್ಲಿ ಭಾವೋದ್ವೇಗ ತುಂಬಿ ಬಂದಿತ್ತು. ತಾ ಮುಂದೆ ತಾ ಮುಂದೆ ಎಂದು ಮುನ್ನುಗ್ಗಿದರು. ಗದ್ದಲ, ಕೂಗಾಟ. "ಮಹಾತ್ಮಾಜಿ ಇದನ್ನು



# ಕಣ್ಣು ತೆರೆಯಿಸಿದ ಕಿವಿ ಒಡವೆ!

• ತಾರಾ ಎನ್. ಹೆಗಡೆ, ಅಜ್ಜೀಬಳ

ತೆಗೆದುಕೊಳ್ಳಿ," ಎಂದು ತಮ್ಮ ಮೈಮೇಲಿದ್ದ ಆಭರಣಗಳನ್ನು ತೆಗೆದುಕೊಡುತ್ತ ಬಂದಾಗ ನೂಕಾಟ ಶುರುವಾಯಿತು. ಈ ನೂಕುನುಗ್ಗಲಿನಲ್ಲಿ ಮಹಾತ್ಮರು ಸೇರಿಹೋದರು. ಹೀಗಾಗಿ ಅವರು ಆಗಾಗ ಜೋಲಿತಪ್ಪಿ ಬೀಳುವಂತಾಗುತ್ತಿತ್ತು. ಆದರೆ ಅವರೇನೂ ಮಾಡುವಂತಿರಲಿಲ್ಲ. ಭಾವಾ

ವೇಶಕ್ಕೆ ಅವರೂ ಬಗ್ಗಿ ಹೋಗಿದ್ದರು. ಗಂಡಸರ ಸಭೆಯಾಗಿದ್ದರೆ ಕೂಗಿ, ಹೆದರಿಸಿ, ಬೆದರಿಸಿ, ಸರಿಸಿ ದಾರಿ ಮಾಡಬಹುದಾಗಿತ್ತು. ಆದರೆ ಈ ಸನ್ನಿವೇಶದಲ್ಲಿ ಅದು ಸಾಧ್ಯವಿರಲಿಲ್ಲ. ಗಾಂಧಿಯವರು ನುಗ್ಗಾದರೂ ನಗುತ್ತಲೇ ಇದ್ದರು.

ಬಡವಿಯೊಬ್ಬಳು ಎರಡು ಬೆರಳುಗಳ ಮಧ್ಯದಲ್ಲಿ ಒಂದು ಆಣೆಯ ನಾಣ್ಯವನ್ನು ಹಿಡಿದು ಕೈ ಮುಂದೆ ಮಾಡುತ್ತ, "ಮಹಾತ್ಮಾಜೀ, ನನ್ನ ಈ ಆಣೆಯನ್ನು ಬೇಗ ತೆಗೆದುಕೊಳ್ಳಿ,' ಎಂದು ಕೂಗಿಕೊಂಡಳು. ಗಾಂಧೀಜಿ ಮಹಿಳೆಯರ ಮಸ್ತಕದ ಮೇಲಿಂದ ಕೈ ಚಾಚಿ ಅದನ್ನು ತೆಗೆದುಕೊಂಡರು. "ಸ್ವಲ್ಪ ತಾಳಿ, ತಮ್ಮ ಪಾದವನ್ನು ಮುಟ್ಟಬೇಕಾಗಿದೆ," ಎಂದು ಅವಳು ಹೇಳಲು, "ಹಾಗಾದರೆ ಅದಕ್ಕೆ ಇನ್ನೊಂದಾಣೆ," ಎಂದು ಗಾಂಧೀಜಿ ನಗುತ್ತ ನುಡಿದರು. "ಏನು ಸ್ವಾಮಿ, ಅದಕ್ಕೂ ಆಣೆಯೆ! ಆಯಿತು, ಇದೋ ಇನ್ನೊಂದಾಣೆ ತೆಗೆದುಕೊಳ್ಳಿ," ಎಂದು ಕೊಡುತ್ತ ಆಕೆ ಅವರ ಕಾಲು ಮುಟ್ಟಿ ವಂದಿಸಿ ಧನ್ಯಳಾಗಿ ಹೊರಟುಹೋದಳು.

ಕೈ ಬೊಗಸೆ ನೋಟು, ನಾಣ್ಯ ಹಾಗೂ ಒಡವೆ ಆಭರಣಗಳಿಂದ ಭರ್ತಿಯಾದ ಕೂಡಲೆ ಗಾಂಧೀಜಿ ಅದನ್ನು ಚಿಕ್ಕಮಕ್ಕಳಂತೆ ನೆಲಕ್ಕೆ ಚೆಲ್ಲಿಬಿಡುತ್ತಿದ್ದರು. ಖಾಲಿಯಾದ ಬೊಗಸೆಯನ್ನು ಪುನಃ ಮುಂದೊಡ್ಡುತ್ತಿದ್ದರು. ಈ ರೀತಿಯಾಗಿ ಬೊಗಸೆಯನ್ನು ತುಂಬುವದು, ಖಾಲಿ ಮಾಡುವದು, ಪುನಃ ತುಂಬುವದು, ಪುನಃ ಖಾಲಿ ಮಾಡುವದು ಸಾಗಿಯೇ ಸಾಗಿತು. ಇಡೀ ಸಭಾಂಗಣ ಎಲ್ಲಿ ನೋಡಿದರೂ ನೋಟು ನಾಣ್ಯ ಹಾಗೂ ಆಭರಣಗಳ ರಾಶಿಯಿಂದ ತುಂಬಿ ಹೋಗಿತ್ತು. ಹೀಗಾಗಿ ಉಂಗುರವನ್ನು ಕೊಡುತ್ತಲಿದ್ದ ಓರ್ವ ಮಹಿಳೆಗೆ ಮಹಾತ್ಮಾಜಿ, "ಇದೇನು ನಿನ್ನ ಬೆರಳಿನದೋ ಅಥವಾ ಈ ರಾಶಿಯಲ್ಲಿನದೋ" ಎಂದು ಹಾಸ್ಯ ಮಾಡಿದರು!

ಸಭಾಂಗಣವನ್ನು ಬಿಡುವಾಗ ತ್ಯಾಗಿಯವರನ್ನು ಕರೆದು, "ಸ್ವತಃ ನಿಂತು ಇಲ್ಲೆಲ್ಲ ಚೆನ್ನಾಗಿ ಗುಡಿಸಿ ಒಂದು ಪೈ ಕೂಡಾ ಬಿಡದಂತೆ ಸಂಗ್ರಹಿಸಿರಿ," ಎಂದು ಹೇಳಿ ಗಾಂಧೀಜಿ ತಮ್ಮ ಕ್ಯಾಂಪಿಗೆ ತೆರಳಿದರು.

ಮಹಿಳೆಯರೆಲ್ಲ ತಮ್ಮ ತಮ್ಮ ಮನೆಗೆ ಹೋದ ಮೇಲೆ ಸಭಾಂಗಣದಲ್ಲಿ ರಾಶಿಯಾಗಿದ್ದ ನೋಟು, ನಾಣ್ಯ, ಆಭರಣಗಳನ್ನೆಲ್ಲ ಒಟ್ಟುಗೂಡಿಸಿ ಗಾಂಧೀಜಿಯ ಕ್ಯಾಂಪಿಗೆ ತರಲಾಯಿತು. ಗಾಂಧೀಜಿ ತಮ್ಮ ದಿನದ ಪ್ರಾರ್ಥನೆ ಮುಗಿಸಿ ತ್ಯಾಗಿಯವರನ್ನು ಕರೆಸಿದರು. ತ್ಯಾಗಿಯವರು ತಮ್ಮ ಕೆಲಸದ ಕುರಿತು ಮೆಚ್ಚುಗೆ ವ್ಯಕ್ತಪಡಿಸಲು ಕರೆದಿರಬಹುದೆಂದು ಭಾವಿಸಿ ನಗುತ್ತ ಮಹಾತ್ಮಾಜಿಯ ಮುಂದೆ ಹಾಜರಾದರು. ಆದರೆ ಗಾಂಧೀಜಿ, "ತ್ಯಾಗಿಯವರೆ ಎಲ್ಲ ಕೆಲಸವನ್ನು ಸ್ವತಃ ನಿಂತು ಮಾಡಲು ನಿಮಗೆ ಹೇಳಿದ್ದೆ, ಆದರೆ ನೀವು ಆ ಕೆಲಸವನ್ನು ಬೇರೆಯವರಿಗೆ ಒಪ್ಪಿಸಿರಬೇಕಾಗಿ ಕಾಣುತ್ತದೆ. ಅದಕ್ಕೆ ಕಾರಣ ಅಲ್ಲಿ ಕೊಡಲಾದ ಎಲ್ಲ ವಸ್ತುಗಳು ಇಲ್ಲಿ ಬಂದಿರುವದಿಲ್ಲ!" ಎಂದರು.

"ಇಲ್ಲ, ಸ್ವತಃ ನಾನೇ ನಿಂತು ಆ ಕೆಲಸವನ್ನು ಮಾಡಿಸಿರುವೆ," ಎಂದು ತ್ಯಾಗಿಯವರು ತಮ್ಮನ್ನು ಸಮರ್ಥಿಸಿಕೊಂಡರು.

ಗಾಂಧೀಜಿ ಸ್ಪಷ್ಟವಾಗಿ ಮತ್ತೆ ಹೇಳಿದರು, "ಹೀಗೆ ಏನಾದರೂ ಹೇಳುವುದು ಬೇಕಾಗಿಲ್ಲ. ನಿಮ್ಮ ಮೇಲೆ ನನಗೆ ವಿಶ್ವಾಸವಿಲ್ಲ. ಯಾರು ತಮ್ಮ ಮೇಲಿನ ಹೊಣೆಯನ್ನು ಪರರ ಮೇಲೆ ಹೇರುವರೋ ಅವರು ನಿರುಪಯೋಗಿಯೇ ಸರಿ. ನೀವು ಸ್ವತಃ ಮಾಡಬೇಕಾಗಿದ್ದಿತು. ನಿಮ್ಮ ಮೇಲಿನ ವಿಶ್ವಾಸದಿಂದಲೇ ನಾನು ಅದನ್ನೆಲ್ಲ ನೆಲದ ಮೇಲೆ ಚೆಲ್ಲುತ್ತ ಬಂದೆ."

ತ್ಯಾಗಿಯವರಿಗೆ ಸಖೇದಾಶ್ಚರ್ಯವಾಯಿತು. "ಮಹಾತ್ಮಾಜಿ ನಾನು ಅಲ್ಲಿ ಇರಲಿಲ್ಲವೆಂದು ನಿಮಗೆ ಯಾರು ಹೇಳಿದರು?"

ಅದಕ್ಕೆ ಗಾಂಧೀಜಿ ಕಿವಿಯ ಆಭರಣವೊಂದನ್ನು ತ್ಯಾಗಿಯವರಿಗೆ ತೋರಿಸುತ್ತ, "ನೀವು ಅಲ್ಲಿ ಇರಲಿಲ್ಲ ಎನ್ನುವದನ್ನು ಈ ಆಭರಣವೇ ನನಗೆ ಹೇಳುತ್ತಿದೆ. ಯಾವ ಮಹಿಳೆಯೇ ಆಗಲಿ ತನ್ನ ಒಂದೇ ಕಿವಿಯ ಆಭರಣವನ್ನು ನನಗೆ ಕೊಟ್ಟು ಇನ್ನೊಂದನ್ನು ತನ್ನ ಹತ್ತಿರವೇ ಇಟ್ಟುಕೊಳ್ಳಬಲ್ಲಳೇ...? ಇದರ ಜೊತೆಯ ಇನ್ನೊಂದು ಎಲ್ಲಿ? ಚೆನ್ನಾಗಿ ಹುಡುಕಿದ್ದರೆ ಅದು ಸಿಗುತ್ತಿತ್ತು. ಸಾರ್ವಜ

ನಿಕ ಸಂಪತ್ತನ್ನು ನಿರ್ಲಕ್ಷಿಸುವದು ಮಹಾಪರಾಧ. ಅಂಥವರು ವಿಶ್ವಾಸಕ್ಕೆ ಪಾತ್ರರೇ ಅಲ್ಲ. ನನಗೆ ಸ್ವಂತದ್ದಾದ ಆಸ್ತಿಯೇನೂ ಇಲ್ಲ. ಅಂದಮೇಲೆ ಈ ಹಾನಿಯನ್ನು ನಾನು ಹೇಗೆ ತುಂಬಲಿ? ಕಾರಣ, ಸಭಾಂಗಣಕ್ಕೆ ಹೋಗಿ ಮತ್ತೊಮ್ಮೆ ಸಿಗುವವರೆಗೂ ಗುಡಿಸುತ್ತ ಇದ್ದುಬಿಡಿ," ಎಂದು ಬಿಟ್ಟರು.

ರಾತ್ರಿಯಾಗಿದ್ದಿತು. ತ್ಯಾಗಿಯವರು ಸಭಾಸ್ಥಾನಕ್ಕೆ ಹೋದರು. ಗ್ಯಾಸಿನ ದೀಪಗಳನ್ನು ತರಿಸಲಾಯಿತು. ಕೈಯಲ್ಲಿ ಟಾರ್ಚ್ ಕೂಡಾ ತೆಗೆದುಕೊಂಡರು. ಅಲ್ಲಿ ಹಾಸಿದ್ದ ಚಾಪೆ, ಗುಡಾರ, ಜಮಖಾನ ಮೊದಲಾದವುಗಳನ್ನೆಲ್ಲ ಮತ್ತೆ ಮತ್ತೆ ಕೊಡವಿ ಮಗುಚಿ ನೋಡಲಾಯಿತು.

ಸುದೈವದಿಂದ ಕಿವಿಯ ಆಭರಣ ಸಿಕ್ಕಿತು. ಮೇಲಾಗಿ ಅದರ ಜೊತೆಗೆ ಮುದ್ದೆಯಾಗಿದ್ದ ನೋಟುಗಳು, ನಾಣ್ಯಗಳು, ಚಿಕ್ಕ ಚಿಕ್ಕ ಆಭರಣಗಳು ಹೀಗೆ ಸಾಧಾರಣ ೨೫೦ ರೂಪಾಯಿಗಳ ಸಾಮಾನುಗಳು ಸಿಕ್ಕಿತು. ಇದನ್ನೆಲ್ಲ ತೆಗೆದುಕೊಂಡು ಮಹಾತ್ಮಾಜಿಯ ಬಳಿಗೆ ಹೋಗುವುದು ಹೇಗೆ? ಎಂದು ತ್ಯಾಗಿಯವರು ಭಾರಿ ಗೊಂದಲದಲ್ಲಿ ಬಿದ್ದರು. ಆದರೆ 'ಗಾಂಧೀಜಿಯಿಂದ ಯಾವು 'ದನ್ನೂ ಮುಚ್ಚಿಡ ಬೇಡ' ಎಂದು ವಿವೇಕವು ಅವರನ್ನು ಎಚ್ಚರಿಸಿತು.

ಕೊನೆಗೆ ಆ ವಸ್ತುಗಳನ್ನೆಲ್ಲ ಓರ್ವ ಮಿತ್ರನ ಕೈಯಲ್ಲಿ ಕೊಟ್ಟು ಅವನ ಮುಖಾಂತರ ತ್ಯಾಗಿಯವರು ಮಹಾತ್ಮಾಜಿಗೆ ಹೇಳಿ ಕಳಿಸಿದ್ದೇನೆಂದರೆ, "ಪುನಃ ಸಭಾಂಗಣ ಶೋಧಿಸಲಾಗಿ ಸಿಕ್ಕ ವಸ್ತುಗಳನ್ನು ಕಳಿಸಲಾಗಿದೆ. ನಿಮ್ಮ ಕ್ಯಾಂಪಿನ ಗೇಟಿನವರೆಗೆ ಬಂದು ತಿರುಗಿ ಹೋಗುತ್ತಿದ್ದೇನೆ. ಕಾರಣ, ಲಜ್ಜೆಯ ಮೂಲಕ ತಮ್ಮ ಎದುರಿಗೆ ಬರಲಾಗದಾಗಿದ್ದೇನೆ. ದಯವಿಟ್ಟು ಕ್ಷಮಿಸಬೇಕು."

(ಮಹಾವೀರ ತ್ಯಾಗಿಯವರ ಉಪನ್ಯಾಸ ವೊಂದರ ಆಧಾರದದಿಂದ)

---

**ಅ**ತ್ಯಂತ ಭೀಕರವಾದ ಏಡ್ಸ್ ರೋಗವನ್ನು ಗುಣಪಡಿಸುವ ಶಕ್ತಿ ಹಲಸಿನ ಹಣ್ಣಿಗೆ ಇದೆಯೆಂದು ಫ್ರೆಂಚ್ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ.

**ಇ**ವತ್ತು ವಿಶ್ವದ ಒಟ್ಟು ಹೂವಿನ ವ್ಯಾಪಾರದ ಮೌಲ್ಯ ಸುಮಾರು ಒಂದು ಲಕ್ಷದ ಇಪ್ಪತ್ತು ಸಾವಿರ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ!

**ಎಸ್**.ಎಲ್. ಭೈರಪ್ಪನವರು ರಚಿಸಿರುವ 'ಶಂಕರಾಚಾರ್ಯ' ಎಂಬ ಕಾದಂಬರಿಯ ಬೆಲೆ ಒಂದು ಸಾವಿರ ರೂಪಾಯಿಗಳು.

**ಮ**ಧ್ಯಪ್ರದೇಶದ ಶರದ್ ರತ್ನಾಕರ ಕುಲಕರ್ಣಿ ಮತ್ತು ಅವರ ಪತ್ನಿ ಸಂಜೋತ್ ಭಾರತದಲ್ಲೇ ಅತ್ಯಂತ ಎತ್ತರವಾದ ಜೋಡಿ ಎಂದು ಹೇಳಲಾಗಿದೆ. ಗಂಡನ ಎತ್ತರ ೭ ಅಡಿ ೨ ಅಂಗುಲ; ಹೆಂಡತಿಯದು ೬ ಅಡಿ ೩ ಅಂಗುಲ.

**ಒ**ಲುಮೆಯ ಅಮರ ಸ್ಮಾರಕವಾದ ತಾಜಮಹಲನ್ನು ನೋಡಲು ಪ್ರತಿದಿನ ಸರಾಸರಿ ೨೫೦೦ ಜನರು ಬರುತ್ತಾರೆ.

**ಅ**ತ್ಯಂತ ಎತ್ತರವಾದ ಈಶ್ವರ ವಿಗ್ರಹ ಬೆಂಗಳೂರಿನಲ್ಲಿದೆ. ಅದರ ಎತ್ತರ ೬೫ ಅಡಿಗಳು!

ಸಂಗ್ರಹ: **ಡಿ. ಗುಂಡೂರಾವ್**

---

# ಮಾತು ಮಾಣಿಕ್ಯ

## ೨೪

# ಗಟ್ಟಿ ಜೀವದ ಖೊಟ್ಟಿತನ

**ಜೀ**ವ ಬಲು ಸ್ವಾರ್ಥಿ. ತಾನು ನೆಮ್ಮದಿಯಿಂದ ಬದುಕಲು ಬೆಚ್ಚನೆಯ ಮನೆಯ ಆಯ್ಕೆ. ತನ್ನ ವಾಸಸ್ಥಾನ ಅಂದ-ಚಂದವಾಗಿರಬೇಕೆಂಬ ಬಯಕೆ. ತನ್ನ ಎಲ್ಲ ಅನುಕೂಲಕ್ಕೆ ತಕ್ಕಂತೆ ವರ್ತಿಸುವ ಇಂದ್ರಿಯಗಳೆಂಬ ಆಳು-ಕಾಳು ಸದಾಸಿದ್ಧವಾಗಿರಬೇಕೆಂಬ ಬೇಡಿಕೆ. ಅವಯವಗಳೆಲ್ಲ ತನ್ನ ಸೇವೆಯಲ್ಲಿಯೇ ನಿರತವಾಗಿರಬೇಕೆಂಬ ಆಕಾಂಕ್ಷೆ. ಅನ್ಯ ಜೀವರ ಮನೆಗಳಿಗಿಂತ ತನ್ನದು ಅಧಿಕ ಸುಂದರವಾಗಿರಬೇಕೆಂಬ ಅಪೇಕ್ಷೆ. ಲೋಕವೆಲ್ಲ ತನ್ನ ಆಣತಿಗನುಗುಣವಾಗಿ ನಡೆಯಬೇಕೆಂಬ ನಿರೀಕ್ಷೆ. ತನ್ನ ಇಚ್ಛೆಗೆ ಕೊಂಚ ಚ್ಯುತಿ ಒದಗಿದರೂ ಸಾಕು, ಸಿಡಿಮಿಡಿಗೊಳ್ಳುತ್ತದೆ. ಉಗ್ರವಾಗಿ ಪ್ರತಿಭಟಿಸಲು, ಹುಬ್ಬೇರಿಸಿ, ಕಣ್ಣು ಕೆಂಪಗಾಗಿಸಿ ಫೂತ್ಕರಿಸಿ, ಕೈ ಮಾಡಿ ಕಾಲು ಜಾಡಿಸುತ್ತದೆ. ಅವಯವಗಳೂ ಇಂದ್ರಿಯಗಳೂ ಈ ಮಹಾಶಯನಿಗೆ ಅದೆಷ್ಟು ಕಾಲ ಸೇವೆ ಸಲ್ಲಿಸಿಯಾವು? ಒಂದಿಲ್ಲೊಂದು ದಿನ ಅವು ಹಿಂದೇಟು ಹಾಕುವ ಸೂಚನೆ ತೋರಿಸಿದವೋ ಅವುಗಳಿಗೆ ಹೇಳದೇ ಕೇಳದೇ ಮನೆಯಿಂದ ಕಾಲು ಕಿತ್ತು ಯಾರಕಣ್ಣಿಗೂ ಬೀಳದಂತೆ ಹೊರಟು ಹೋಗುವ ಈ ಜೀವ ಬಲು ಸ್ವಾರ್ಥಿ ಅಲ್ಲದೆ ಇನ್ನೇನು?

ಸಾವಿಲ್ಲ ಎಂದಮೇಲೆ ತನಗಾರು ಮಿಗಿಲು? ಎಂಬ ದುರಭಿಮಾನ ಈ ಜೀವಕ್ಕೆ. ಬಲು ಖೊಟ್ಟಿ ಇದರ ಸ್ವಭಾವ. ಒಂದನ್ನು ಕಂಡರೆ ಜೀವ ಪ್ರಾಣ ಎನ್ನುವಷ್ಟು ಅತೀವ ಆದರ. ಇನ್ನೊಂದನ್ನು ಮೂಸಿ ನೋಡಲಾರದಷ್ಟು ತಾತ್ಸಾರ. ಎಷ್ಟಿದ್ದರೂ ಸಾಕೆನ್ನಿಸುವದಿಲ್ಲ, ಎಷ್ಟು ಪಡೆದರೂ ಸಂತೃಪ್ತಿ ಎಂಬುದಿಲ್ಲ. ಇದನ್ನೆಲ್ಲ ನೆನೆದುಕೊಂಡೆ ಇದು ಹೊರಟು ನಿಂತಿತೆಂದರೆ, ಇದನ್ನಾದರೂ ಅನುಸರಿಸಲು ಒಡಂಬಡುವದಿಲ್ಲ. ಬೆವರು ಸುರಿಸಿ ಸಂಪಾದಿಸಿದ ಸಂಪತ್ತು, ಸಾಕಿ ಸಲುಹಿದ ದನಕರು, ಸ್ನೇಹಪೂರ್ವಕವಾಗಿ ಕೈ ಹಿಡಿದ ಮಡದಿ, 'ಜೀವಸ್ಯ ಕಂಠಸ್ಯ" ಎಂದು ನಂಬಲಾದ ಬಂಧು ಜನ. ಸುಖ ದುಃಖದಲ್ಲಿ ಸದಾ ಸರ್ವತ್ರ ಸಹಕರಿಸಿದ ಮಿತ್ರವರ್ಗ- ಇವರಲ್ಲಿ ಯಾರೂ ಸಂಗಡ ಬಹರಿಲ್ಲ." ನಿರ್ಗಮಿಸುತ್ತಿರುವ ಪತಿಯ ಜೀವನವನ್ನು ಅನುಸರಿಸಿ ಯಮರಾಜನಿಗೇ ಸಮಸ್ಯೆಯನ್ನು ತಂದೊಡ್ಡಿದ ಉದಾಹರಣೆ ಎಲ್ಲಿಯೋ ಒಂದು- ಸತಿ ಸಾವಿತ್ರಿಯಂಥದು. ಆದರೆ ಇಂಥ ಅಪವಾದ, ಅಪವಾದವೇ; ಸಾಮಾನ್ಯ ನಿಯಮವಲ್ಲ!

ನಿತ್ಯವೂ ನಿಕಟ ಸಂಪರ್ಕ ಹೊಂದಿ, ಸಹವಾಸ ಮಾಡಿದ ತನುವಿಗೆ ಜೀವದ ಖೊಟ್ಟತನ ಚೆನ್ನಾಗಿ ಗೊತ್ತು. ಧಗಧಗಿಸುವ ಅಗ್ನಿಯಲ್ಲಿ ಬೆಂದು ಹೋಗಲು ಸಿದ್ಧವಾಗುವದೇ ಹೊರತು ಇಂಥ ಸ್ವಾರ್ಥಸಾಧಕನ ಸಂಗಡ ಹೊರಡಲು ಈ ತನು ಸುತರಾಂ ಸಮ್ಮತಿಸುವದಿಲ್ಲ. ನೆಲದಾಳದ ಕುಣಿಯಲ್ಲಿ ತಣ್ಣಗೆ ಕುಳಿತುಕೊಳ್ಳಲು ಅಣಿಯಾಗುವದೇ ವಿನಾ ಈ ನೀಚನ ಜೊತೆ ತಪ್ಪಿದುದಕ್ಕೆ ಎಳ್ಳನಿತೂ ಹಳಹಳಿಸುವದಿಲ್ಲ.

ಹೆಬ್ಬೊಟ್ಟನ ಮಾಟದ ಪುಟ್ಟ ಪೋರ ಈ ಜೀವ. ಸಾವಿನ ಹಿಡಿತದಿಂದ ನುಸುಳಿಕೊಂಡು ಹಕ್ಕಿಯಂತೆ ಗರಿಗೆದರಿ ಗಗನ ಮಂಡಲದತ್ತ ಸಾಗುತ್ತದೆ. ಈ ಜೀವ ಬಲು ಬುದ್ಧಿಶಾಲಿ. ಮನದಣಿಯೆ ಬೆಣ್ಣೆಯನ್ನು ಮೆದ್ದು ಒಂದಿನಿತು

ಆಡಿನ ಬಾಯಿಗೆ ಸವರಿ ಮರದ ರೆಂಬೆಗೆ ಹಾರಿ ಪಾರಾಗುವುದು ಮಂಗ; ಸಿಕ್ಕು ಬೀಳುವುದು ತಿಳಿಗೇಡಿ ಆಡು. ಅದರಂತೆ ಭೋಗಿಸಬೇಕಾದುದನ್ನೆಲ್ಲ ಭೋಗಿಸಿ ಸಾವಿನ ದವಡೆಯಿಂದ ತಪ್ಪಿಸಿಕೊಂಡು ದೂರಕ್ಕೆ ಸರಿದುಕೊಳ್ಳುವದು ಈ ಜೀವದ ಸ್ವಭಾವ; ಸಾವಿನ ಹಿಡಿತಕ್ಕೆ ಸಿಕ್ಕು ಬೀಳುವುದು ಈ ಶರೀರ. ಎಷ್ಟಾದರೂ ಇದು ಜಡ ವಸ್ತು. ಜಡತ್ವ ಅರ್ಥಾತ್ ಮೂಢತನ ಜಡಿದು ತುಂಬಿಕೊಂಡಿದೆ ಇದರಲ್ಲಿ.

ತನಗೆ ಸೇರುವವರನ್ನೂ, ಸೇರದವರನ್ನೂ ತೊರೆದು ಹೊರಟುಹೋದ ನಂತರವೂ ಜೀವದ ಭೇದವೆಣಿಸುವ ಹಳೆಯ ಅಭ್ಯಾಸ ನಿಲ್ಲದು. ಎಂತಲೆ ಒಬ್ಬ ಕೈಲಾಸವಾಸಿ; ಇನ್ನೊಬ್ಬ ವೈಕುಂಠವಾಸಿ; ಮತ್ತೊಬ್ಬ ಲಿಂಗೈಕ್ಯ, ಮಗದೊಬ್ಬ ಜಿನೈಕ್ಯ, ಬೇರೊಬ್ಬ ಪೈಗಂಬರವಾಸಿ, ಯಾವನಿಗೋ ಬ್ರಹ್ಮ ಸಾಯುಜ್ಯ. ಹೀಗೇ ಏನೇನೋ. ಶರೀರದಲ್ಲಿ ಇರುವ ತನಕ ಕೋಮು-ಧರ್ಮ, ಭಾಷೆ-ವೇಷ, ಧಾಮ-ಗ್ರಾಮ, ಸ್ವದೇಶ-ವಿದೇಶ ಮುಂತಾದ ಹತ್ತು ಹಲವು ಎತ್ತರ ಭಿತ್ತಿಗಳನ್ನು ನಿರ್ಮಿಸುವ ಜೀವದ ಸಂಕುಚಿತತನದ ದೇಹ ಬಿದ್ದುಹೋದ ನಂತರವೂ ಚಕಬಂದಿಯಲ್ಲಿಯೇ ಉಳಿದುಕೊಳ್ಳಲು ತವಕಿಸುತ್ತದೆ.

ಪತ್ರಿಕೆಯವರು, ಸಮಾಜಬಾಂಧವರು, ಗುರುವರ್ಗದವರು, ಧರ್ಮಾಧಿಕಾರಿಗಳು, ವಠಾರಗಳೇ ಇಲ್ಲದ ಕೊಠಡಿಗಳೇ ಇಲ್ಲದ, ಆಕಾಶದಲ್ಲಿ ಸೀಮೆಗಳನ್ನು ನಿರ್ಮಿಸುತ್ತಾರೆ ಈ ಜನ. ಗಡಿಯ ಗೆರೆಗಳನ್ನು ಎಳೆಯಲು ಎಳಸುತ್ತಾರೆ. ವಿಶಿಷ್ಟ ತರಗತಿಯ ತಿಕೀಟು ಹೊಂದಿದ ರೈಲು ಪ್ರಯಾಣಿಕರು ಆಯಾ ಡಬ್ಬಿಗೆ ಸೇರಿಕೊಳ್ಳುವಂತೆ, ಕೈಲಾಸವಾಸಿ, ವೈಕುಂಠವಾಸಿ, ಇತ್ಯಾದಿಯಾಗಿ ಬೇರೆ ಬೇರೆ ಕೋಣೆಗಳಿಗೆ ತಲುಪಿಸುತ್ತಾರೆ. ಹುಗಿಯುವುದಕ್ಕೂ, ಸುಡುವುದಕ್ಕೂ ಮುನ್ನವೆ ಎಲ್ಲಿಗೋ ಸಾಗಿಬಿಡುವ ಜೀವಕ್ಕೆ ಇಂಥ ಬಂಧನವೆ?

ಜೀವ ಹಕ್ಕಿ ಎಂಬ ಭಾವನೆ ಬಲ್ಲವರದು. ವಿಶೇಷ ವೈದ್ಯಕೀಯ ಉಪಚಾರಕ್ಕೆಂದು ರೋಗಿಯನ್ನು ಆಸ್ಪತ್ರೆಗೆ ಸೇರಿಸುವ ದಾರಿಯಲ್ಲಿಯೆ ಪ್ರಾಣಪಕ್ಷಿ ಹಾರಿಹೋಗಿತ್ತು ಎಂದು ಹಲವು ಬಾರಿ ಕೇಳಿಬರುವುದು ಈ ಮಾತಿಗೆ ಸಾಕ್ಷಿ. ಸಾಮಾನ್ಯ ಹಕ್ಕಿಯ ಹಾರಾಟ ನಮ್ಮ ನೋಟಕ್ಕೆ ನಿಲುಕುವಂಥದು; ಜೀವಪಕ್ಷಿಯದು ಹಾಗಲ್ಲ! ಸಾಮಾನ್ಯ ಹಕ್ಕಿ ಬೆಳಗಾಗುತ್ತಲೇ ಆಹಾರವನ್ನು ಅರಸಲೆಂದು ಗೂಡು ತೊರೆಯುತ್ತದೆ. ಮೊಟ್ಟೆಮರಿಗಳ ಆರೈಕೆಗಾಗಿ ಆಗಾಗ ಮರಳಿ ಬಂದರೂ ವಿಶ್ರಮಿಸಲೆಂದು ಅಲ್ಲಿಗೆ ಬರುವುದು ಸಂಜೆಗೇನೆ. ಜೀವಪಕ್ಷಿಯ ರೀತಿಯೇ ಬೇರೆ.

ಬೆಳಗಾಗುತ್ತಲೆ ಗೂಡಿನೊಳಕ್ಕೆ ನುಸುಳುತ್ತದೆ. ಹಗಲೆಲ್ಲ ಅಲ್ಲಿಯೆ ಉಳಿಯುತ್ತದೆ. ಆಸೆ-ನಿರಾಸೆ, ನೋವು-ನಲಿವು, ಸೋಲು-ಗೆಲವುಗಳಂತಹ ದ್ವಂದ್ವಗಳನ್ನು ಅನುಭವಿಸುತ್ತದೆ. ಸಂಜೆಯಾಗುತ್ತಲೇ ತನಗೆ ಇದುವರೆಗೆ ಆಸರೆ ಒದಗಿಸಿದ ಮತ್ತು ವಿಧವಿಧದ ಸೌಕರ್ಯಗಳನ್ನು ನೀಡಿದ ಗೂಡನ್ನು ತೊರೆದು ಹೊರಟು ಹೋಗುತ್ತದೆ. ಯಾರು ಎಷ್ಟೇ ಅಂಗಲಾಚಿ ಬೇಡಿಕೊಳ್ಳಲಿ, ಸಿಷ್ಣಾತ ವೈದ್ಯರು, ಮಂತ್ರ-ತಂತ್ರ ಕೋವಿದರು ಶತ ಪ್ರಯತ್ನ ಗೈಯಲಿ ತನ್ನ ಚಿರಪರಿಚಿತ ಸದನದತ್ತ ಕಣ್ಣೆತ್ತಿ ಕೂಡ ನೋಡುವುದಿಲ್ಲ. ಅಲ್ಲಿ ಕಳೆದ ಕ್ಷಣಗಳನ್ನು ತಿಲ ಮಾತ್ರವೂ ನೆನೆಯುವುದಿಲ್ಲ. ಬಿಧನೆ ಎಲ್ಲಿಗೋ ಸಾಗಿಬಿಡುತ್ತದೆ. ಇಂತು ಕೃತಘ್ನ ಈ ಜೀವ.

ದುರ್ದಮ್ಯವೆನಿಸಿದ ದೇನುಕಾಸುರನೆಂಬ ಗೂಳಿಯನ್ನು ಶ್ರೀಕೃಷ್ಣನಂತಹ ಧೈರ್ಯಶಾಲಿ ದಮನ ಮಾಡಿಯಾನು. ದಾಟಲಶಕ್ಯವೆನಿಸಿದ ಸಾಗರದ ಆಚೆಯ ತೀರವನ್ನು ಸೇರಲು ವಾನರ ವೀರರು ಸೇತುವೆ ನಿರ್ಮಿಸಿಯಾರು. ಕಪಿಲನ ಕೋಪಾಟೋಪದಿಂದ ಭಸ್ಮೀಭೂತರಾದ ತನ್ನ ಪೂರ್ವಜರನ್ನು ಉದ್ಧರಿಸಲೆಂದು ದೇವಲೋಕದಿಂದ ಗಂಗೆಯನ್ನು ಭಗೀರಥ ಮಹಾರಾಜನು ಭೂಮಿಗೆ ಇಳಿಸಿಯಾನು. ಆದರೆ....? ಹೊರಗಣ ಮಹಾ ಉಸಿರಿನಲ್ಲಿ ಮರಳಿ ಬೆರೆತುಕೊಳ್ಳಲೆಂದು ದೇಹದಿಂದ ನಿಷ್ಕ್ರಮಿಸಲು ಒಂದು ಸಲ ನಿರ್ಧರಿಸಿದ ಜೀವದ ಉಸಿರನ್ನು ಅರ್ಥಾತ್ ಪ್ರಾಣವಾಯುವನ್ನು ಅದಾರುತಾನೆ ತಡೆಗಟ್ಟಿ ನಿಲ್ಲಿಸಿಯಾರು? ಮರಳಿ ಮನೆಗೆ ಬರುವಂತೆ ಮಾಡಿಯಾರು? ಇಲ್ಲವಾದರೆ, ಹದಿನಾರರ ಹರಯದ ಅಭಿಮನ್ಯುವಿನಂತಹನು ಅದೇಕೆ ಅಕಾಲ ಮೃತ್ಯುವಿಗೆ ಗುರಿಯಾಗಬೇಕಿತ್ತು? ಎಂತಲೆ "ಮರಣಂ ಪ್ರಕೃತಿಃ ಶರೀರಿಣಾಂ" ಎಂಬ ಕಾಳಿದಾಸನ ಉಕ್ತಿ ಮರಣವೆಂಬುದು ದೇಹಧಾರಿಗಳಿಗೆ ಅದೆಷ್ಟು ಸ್ವಾಭಾವಿಕ ಕ್ರಿಯೆ ಎಂಬುದನ್ನು ಮನಗಾಣಿಸಿಕೊಡುತ್ತದೆ.

• ಪ್ರೊ. ಶ್ರೀನಿವಾಸ ತೋಫಖಾನೆ

ರಹಸ್ಯ

# ಬೋರ್ಲೆ ರೆಕ್ಟರಿಯ ಪ್ರೇತಾತ್ಮ ಪ್ರಕರಣ

**ನಡುರಾತ್ರಿಯಲ್ಲಿ ಧಗಧಗನೆ ಹೊತ್ತಿ ಉರಿಯುತ್ತಿದ್ದ ಆ ನಿವಾಸದಲ್ಲಿ ಅಗ್ನಿ ಜ್ವಾಲೆಗಳು ಎತ್ತರೆತ್ತರಕ್ಕೆ ವ್ಯಾಪಿಸುತ್ತಿದ್ದಾಗ ಮಾನವಾಕೃತಿಯ ನೆರಳೊಂದು ಬೆಂಕಿ-ಹೊಗೆಗಳ ಮಧ್ಯೆ ತೇಲುತ್ತಾ ಹೋಗುತ್ತಿರುವುದನ್ನು ಗ್ರೆಗ್‌ಸನ್ ಗಮನಿಸಿದ!**

**ಈ ಶತಮಾನದ ಆರಂಭದಲ್ಲಿ ಇಡೀ ಇಂಗ್ಲೆಂಡನ್ನು ನಡುಗಿಸಿದ ರೋಚಕ ಪ್ರೇತ ಪ್ರಕರಣ.**

ಇಂಗ್ಲೆಂಡಿನ ಪೂರ್ವ ಕರಾವಳಿಯಲ್ಲಿ ಸಫೋಕ್‌ನ ಗಡಿಭಾಗದಲ್ಲಿ ಎಸೆಕ್ಸ್ ಎಂಬ ನಗರ ವಿದೆ. ಈ ಶತಮಾನದ ಆರಂಭದಲ್ಲಿ ಜನವಸತಿ ತೀರಾ ವಿರಳವೆನಿಸಿದ ಈ ಸ್ಥಳದಲ್ಲಿ ಬೋರ್ಲೆ ರೆಕ್ಟರಿ ಎಂಬ ಪುಟ್ಟದೊಂದು ಪ್ಯಾರಿಷ್ (ಕ್ರೈಸ್ತ ಪಾದ್ರಿಯ ಆಡಳಿತ ವ್ಯಾಪ್ತಿಗೆ ಒಳಗಾಗಿದ್ದ ಪ್ರದೇಶ) ಅಲ್ಲಿತ್ತು. ಈ ಪ್ಯಾರಿಷ್ ಯಾರಲ್ಲಿಯೂ ವಿಶೇಷ ಆಸಕ್ತಿ ಮೂಡಿಸದೆ ಸದಾ ಮಂಕು ಮಬ್ಬು ಕವಿದ ಸ್ಥಳ. ಆದರೆ ಇಂಗ್ಲೆಂಡಿನ ಇತಿಹಾಸದಲ್ಲಿಯೇ ಅತಿ ಭಯಾನಕವೆನಿಸುವ ಪ್ರೇತಾತ್ಮದ ಪ್ರಕರಣವೊಂದು ಅಲ್ಲಿ ಸಂಭವಿಸಿತು.

ಬೋರ್ಲೆ ರೆಕ್ಟರಿ (ಕ್ರೈಸ್ತ ಮಠ) ೧೮೬೩ರಲ್ಲಿ ನಿರ್ಮಾಣವಾಯಿತು. ಕೆಂಪು ಇಟ್ಟಿಗೆಗಳ ಭವ್ಯ ಬಂಗಲೆಯದು. ಸ್ಥಳೀಯ ಚರ್ಚಿನ ಪಾದ್ರಿಗಳು ಆ ಮಠದಲ್ಲಿ ನೆಲೆಸಿದ್ದರು. ೧೯೨೦-೩೦ರ ನಡುವಣ ಅವಧಿಯಲ್ಲಿ ಬೋರ್ಲೆ ರೆಕ್ಟರಿಯಲ್ಲಿ ನಿಗೂಢ ವಿದ್ಯಮಾನಗಳು ಸಂಭವಿಸತೊಡಗಿದವು. ಕ್ರೈಸ್ತ ಮಠದಲ್ಲಿರುವ ಪಾದ್ರಿಗಳು ಬೋರ್ಲೆ ರೆಕ್ಟರಿಯ ಹೊರಗೆ ಅಂಗಳದಲ್ಲಿ ಬೆಳದಿಂಗಳ ರಾತ್ರಿಯಲ್ಲಿ ಒಂದು ಜೋಡಿ ಪ್ರೇತಗಳು ಅಡ್ಡಾಡುತ್ತಿರುವುದನ್ನು ಗಮನಿಸಿದರು.

ತಲೆ ಇಲ್ಲದ ಪುರುಷನ ಪ್ರೇತ, ಇನ್ನೊಂದು ಬಿಳಿ ಉಡುಪು ಧರಿಸಿದ ಯುವತಿಯೊಬ್ಬಳ ಪ್ರೇತ. ಯುವತಿಯ ಪ್ರೇತ ತೀವ್ರ ದುಃಖದಿಂದ ತಲೆ ತಗ್ಗಿಸಿ ಹೂಗಿಡಗಳ ಪೊದೆಗಳ ಬಳಿ ಸಾಗಿ ಕಣ್ಮರೆಯಾಗುತ್ತಿತ್ತು. ಪುರುಷ ಪ್ರೇತ ರೆಕ್ಟರಿಯ ಅಂಗಳದ ಮೂಲೆಯಲ್ಲಿ ನಿಲ್ಲಿಸಿದ್ದ ಕೋಚ್ ಗಾಡಿ ಏರಿ ಕಣ್ಮರೆಯಾಗುತ್ತಿತ್ತು. ರೆಕ್ಟರಿಯ ಭವ್ಯ ನಿವಾಸದೊಳಗೆ ಯಾರೋ ಶತಪಥ ಹೆಜ್ಜೆ ಹಾಕುತ್ತಿರುವ ಸದ್ದು, ಬಾಗಿಲು ತಟ್ಟಿದ ಸದ್ದು ಆಗಾಗ ಕೇಳಿಸುತ್ತಿತ್ತು.

ನಿವಾಸದೊಳಗಿನ ಕರೆಗಂಟೆ ಯಾರೂ ಸ್ಪರ್ಶಿಸದೆಯೆ ಇದ್ದಕ್ಕಿದ್ದಂತೆ ಬಾರಿಸಿಕೊಳ್ಳುತ್ತಿತ್ತು. ದೀಪಗಳು ಥಟ್ಟನೆ ಆರಿಹೋಗುತ್ತಿದ್ದವು. ಮನೆಯೊಳಗಿನ ವಸ್ತುಗಳು ಗಾಳಿಯಲ್ಲಿ ಹಾರಾಡುತ್ತಿದ್ದವು.

• ಅರುಣ

(ಕೃಪೆ: 'ಮಿಸ್ಟರೀಸ್ ಆಫ್ ದಿ ಅನ್ನೋನ್')

೧೯೩೦ರಲ್ಲಿ ರೆವರಂಡ್ ಲಿಯೊನೆಲ್ ಫಾಯೆಸ್ಟರ್ ಮತ್ತು ಅವನ ಚೆಲುವೆ ಪತ್ನಿ ಮೇರಿ ರೆಕ್ಟರಿಯಲ್ಲಿ ವಾಸಿಸಲು ತೊಡಗಿದರು. ಅನಂತರದ ದಿನಗಳಲ್ಲಿ ಅತಿಮಾನುಷ ಶಕ್ತಿಗಳ ಉಪಟಳ ಇನ್ನಷ್ಟು ತೀವ್ರವಾಯಿತು. ನಿವಾಸದ ಗೋಡೆಗಳ ಮೇಲೆ ನಿಗೂಢ ಸಂದೇಶಗಳು ಕಾಣಿಸಿಕೊಂಡವು. ಕಾಗದದ ಚೂರಿನಲ್ಲಿ ಬರೆದ ಸಂದೇಶಗಳು ಮನೆಯಲ್ಲೆಲ್ಲ ಚೆಲ್ಲಾಪಿಲ್ಲಿಯಾಗಿ ಚದುರಿ ಹರಡಿಕೊಳ್ಳುತ್ತಿದ್ದವು.

ಬೋರ್ಲೆ ರೆಕ್ಟರಿಯಲ್ಲಿ ಸಂಭವಿಸುತ್ತಿದ್ದ ಈ ವಿಚಿತ್ರ ವಿದ್ಯಮಾನ ಅಂದಿನ ಕಾಲದ ಹೆಸರಾಂತ ಮನಃಶಾಸ್ತ್ರಜ್ಞ ಹ್ಯಾರಿ ಪ್ರೈಸ್ ಎಂಬಾತನ ಗಮನ ಸೆಳೆಯಿತು. ಈತ ಅತಿಮಾನುಷ ಶಕ್ತಿಗಳ ವಿದ್ಯಮಾನಗಳ ಕುರಿತು ಅಧ್ಯಯನ ಹಾಗೂ ಸಂಶೋಧನೆಗಳನ್ನು ನಡೆಸಲು ಸಂಸ್ಥೆಯೊಂದನ್ನು ಹುಟ್ಟುಹಾಕಿದ್ದ. ಹ್ಯಾರಿ ಪ್ರೈಸ್ ೧೯೩೦ರ ದಶಕದಲ್ಲಿ ಇಡೀ ಇಂಗ್ಲೆಂಡಿನಲ್ಲಿ ಹೆಸರುವಾಸಿಯಾದ 'ಪ್ರೇತ ಅನ್ವೇಷಕ'ನೆನಿಸಿದ್ದ.

೧೯೩೭ರಲ್ಲಿ ಬೋರ್ಲೆ ರೆಕ್ಟರಿಯನ್ನು ಕ್ರೈಸ್ತ ಧರ್ಮಾಧಿಕಾರಿಗಳ ನಿವಾಸವಾಗಿ ಪರಿವರ್ತಿಸಲಾಯಿತು. ಈ ನಿವಾಸದಲ್ಲಿ ನಡೆಯುತ್ತಿದ್ದ ನಿಗೂಢ ವಿದ್ಯಮಾನಗಳನ್ನು ದಾಖಲಿಸಿ ಇಡಲು ತಜ್ಞರ ತಂಡವೊಂದನ್ನು ಪ್ರೈಸ್ ನಿಯುಕ್ತಿಗೊಳಿಸಿದ. ಅಲ್ಲಿನ ವಿಚಿತ್ರ ವಿದ್ಯಮಾನಗಳಿಗೆ ಸಂಬಂಧಿಸಿದಂತೆ ತಜ್ಞರೊಂದಿಗೆ ವ್ಯಾಪಕವಾಗಿ ಚರ್ಚಿಸಿ ಎರಡು ಪುಸ್ತಕಗಳನ್ನು ಬರೆದ. ಆಕಾಶವಾಣಿಯಲ್ಲಿ ಕಾರ್ಯಕ್ರಮಗಳನ್ನೂ ನೀಡಿದ.

ಫಾಯೆಸ್ಟರ್ ದಂಪತಿಗಳು ಬೋರ್ಲೆ ರೆಕ್ಟರಿಯಲ್ಲಿ ವಾಸವಾಗಿದ್ದ ದಿನಗಳಲ್ಲಿ ಅತಿಮಾನುಷ ಶಕ್ತಿಗಳ ಉಪಟಳ ಮೇರೆ ಮೀರಿತ್ತು. ಹಗಲೂ ರಾತ್ರಿ ಎತ್ತಣಿಂದಲೋ ಭಾರವಾದ ವಸ್ತುಗಳು ನಿವಾಸದೊಳಗೆ ಎಸೆಯಲ್ಪಡುತ್ತಿದ್ದವು. ಮೈಮೇಲೆಲ್ಲ ಹರಿತವಾದ ಪರಚಿದ ಗಾಯಗಳಾಗುತ್ತಿದ್ದವು. ಸುಮಾರು ಐದು ವರ್ಷಗಳವರೆಗೆ ಫಾಯೆಸ್ಟರ್ ದಂಪತಿಗಳು ಬೋರ್ಲೆ ರೆಕ್ಟರಿಯಲ್ಲಿ ಪ್ರೇತಗಳ ಹಿಂಸೆಯನ್ನು ಸಹಿಸಿಕೊಂಡರು. ಸಹಿಸಲು ಸಾಧ್ಯವೇ ಇಲ್ಲವೆನಿಸಿದಾಗ ನಿವಾಸವನ್ನು ತ್ಯಜಿಸಿ ಹೊರಟುಹೋದರು.

ಅನಂತರ ಹೆನ್ರಿ ಡೌಸನ್ ಎಲ್ಲಿಸ್ ಬುಲ್ ಎಂಬಾತ ಬೋರ್ಲೆ ಚರ್ಚಿನ ಮುಖ್ಯ ಪಾದ್ರಿಯಾಗಿ ಅಧಿಕಾರವಹಿಸಿಕೊಂಡ. ಬೋರ್ಲೆ ರೆಕ್ಟರಿಯಲ್ಲಿ ಹಿಂದೆ ವಾಸವಾಗಿದ್ದ ಧರ್ಮಗುರುಗಳು ಹೇಳುತ್ತಿದ್ದ ಅಲೌಕಿಕ ಶಕ್ತಿಗಳ ಉಪಟಳದ ವಿವರಗಳಿಂದ ಆತ ಕಿಂಚಿತ್ತಾದರೂ ವಿಚಲಿತನಾಗಲಿಲ್ಲ. ಬೋರ್ಲೆ ಚರ್ಚಿನ ಪರಿಸರದಲ್ಲಿಯೇ ಚಿರಶಾಂತಿ ಪಡೆಯದ ಪ್ರೇತಾತ್ಮಗಳು ಅಲೆದಾಡುತ್ತಿವೆ ಎಂಬ ಪ್ರತೀತಿ ಇದ್ದ ಸ್ಥಳದಲ್ಲಿ ಪಾದ್ರಿ ಡೌಸನ್ ಹೊಸ ಮನೆಯೊಂದನ್ನು ಕಟ್ಟಿಸಿದ. ಹೊಸ ಮನೆಯಲ್ಲಿ ಬುಲ್ ಕುಟುಂಬಕ್ಕೆ ಪ್ರೇತಗಳ ಕಾಟ ಆರಂಭವಾಯಿತು. ಮಧ್ಯ ರಾತ್ರಿ ವೇಳೆ ಯಾರೋ ಬಾಗಿಲು ತಟ್ಟಿದ ಸದ್ದು, ಭಾರವಾದ ಹೆಜ್ಜೆಗಳನ್ನು ಊರಿ ನಿವಾಸದೊಳಗೆಲ್ಲ ನಡೆದಾಡುತ್ತಿದ್ದ ಸದ್ದು ಕೇಳಿಬರತೊಡಗಿತು. ಬುಲ್‌ನ ಏಕಮಾತ್ರ ಪುತ್ರಿ ಹಾಗೂ ಸೇವಕರು ಈ ನಿಗೂಢ ವಿದ್ಯಮಾನಗಳಿಂದ ಭಯವಿಹ್ವಲರಾದರು.

ಆದರೆ ದೈವಭಕ್ತನಾದ ಬುಲ್ ಇವೆಲ್ಲ ಕೀಟಲೆಗಳನ್ನು ಅದ್ಭುತ ಮನರಂಜನೆ ಎಂದೇ ಪರಿಗಣಿಸಿದ್ದ. ರಾತ್ರಿ ಊಟವಾದ ಬಳಿಕ ನಿವಾಸದ ಹೊರಗೆ ಅಂಗಳದಲ್ಲಿ ಆರಾಮ ಕುರ್ಚಿಯಲ್ಲಿ ಕುಳಿತು ಸಿಗಾರ್ ಸೇದುತ್ತಿರುವಾಗ ಬುಲ್ ಮತ್ತು ಅವನ ಹಿರಿಯ ಮಗ ಹ್ಯಾರಿ ಮರಗಿಡಗಳ ಮಧ್ಯದಿಂದ ಗಾಳಿಯಲ್ಲಿ ತೇಲುತ್ತಾ ಹೋಗುತ್ತಿದೆಯೋ ಎಂದು ಭಾಸವಾಗುತ್ತಿದ್ದ ನನ್‌ಳ ಪ್ರೇತವನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದರು.

೧೮೯೨ರಲ್ಲಿ ಡೌಸನ್ ಬುಲ್ ತೀರಿಕೊಂಡ ಬಳಿಕ ಅವನ ಮಗ ಹ್ಯಾರಿ ಬುಲ್ ಬೋರ್ಲೆ ರೆಕ್ಟರಿಯ ಮುಖ್ಯ ಪಾದ್ರಿಯಾಗಿ ಅಧಿಕಾರ ವಹಿಸಿಕೊಂಡ. ಅದರೊಂದಿಗೆ ಬೋರ್ಲೆ ರೆಕ್ಟರಿಯ ಪ್ರೇತಗಳ ಯೋಗಕ್ಷೇಮ ನೋಡಿಕೊಳ್ಳುವ ಹೊಣೆಯೂ ಅವನ ಮೇಲೆ ಬಿದ್ದಿತು. ೧೯೨೭ರವರೆಗೂ- ಅಂದರೆ ಅವನ ಸಾವಿನವರೆಗೂ- ಆತ ಈ ಹುದ್ದೆಯಲ್ಲಿ ಮುಂದುವರೆದ. ಹ್ಯಾರಿ ಬುಲ್‌ನ ಉತ್ತರಾಧಿಕಾರಿಯಾಗಿ ಅಲ್ಲಿಗೆ ಬಂದ ರೆವರೆಂಡ್ ಗೈಸ್ಮಿತ್‌ನಿಗೆ ಪ್ರೇತಗಳ ಕಿರುಕುಳ



ಬೋರ್ಲೆ ರೆಕ್ಟರಿ ನಿವಾಸ

ಸಹಿಸಲಾಗಲಿಲ್ಲ. ಆತ ಒಂದು ವರ್ಷವೂ ಸೇವೆ ಪೂರ್ತಿಗೊಳಿಸದೆ ಅಲ್ಲಿಂದ ನಿರ್ಗಮಿಸಿದ.

ಬೋರ್ಲೆ ರೆಕ್ಟರಿಯ ಅಲೌಕಿಕ ವಿದ್ಯಮಾನಗಳ ರಹಸ್ಯ ಭೇದಿಸಲು ಹ್ಯಾರಿ ಪ್ರೈಸ್ ನೇಮಿಸಿದ ತಜ್ಞರ ತಂಡ ಹೊಸದೇನನ್ನೂ ಪತ್ತೆ ಹಚ್ಚಲಿಲ್ಲ. ಆಗ ಪ್ರೈಸ್ "ಪ್ಲಾಂಚೆಟ್" ಎಂಬ ವಿಶಿಷ್ಟ ರಾಸಾಯನಿಕ ಶಕ್ತಿಯನ್ನೊಳಗೊಂಡ ಪೆನ್ಸಿಲ್ ಒಂದನ್ನು ಆ ನಿವಾಸದ ಅಧ್ಯಯನದ ಕೊಠಡಿಯ ಟೇಬಲ್ ಒಂದರಲ್ಲಿರಿಸಿದ. ಪಕ್ಕದಲ್ಲಿ ಒಂದಷ್ಟು ಖಾಲಿ ಹಾಳೆಗಳು. ಅತಿಮಾನುಷ ಶಕ್ತಿಯ ಮಾರ್ಗದರ್ಶನದಲ್ಲಿ ಆ ಪೆನ್ಸಿಲ್‌ಗೆ ಖಾಲಿ ಹಾಳೆಗಳ ಮೇಲೆ ಬರೆಯುವ ಶಕ್ತಿ ಇದ್ದಿತು. ಕೆಲವು ದಿನಗಳ ಬಳಿಕ ಖಾಲಿ ಹಾಳೆಯ ಮೇಲೆ ಸೊಟ್ಟ ಸೊಟ್ಟಗಾದ ಅಕ್ಷರಗಳು ಮೂಡಿದವು. ಆ ಅಕ್ಷರಗಳನ್ನೆಲ್ಲ ವ್ಯವಸ್ಥಿತವಾಗಿ ಜೋಡಿಸಿ ಓದಿದಾಗ ಎದೆ ನಡುಗಿಸುವ ವೃತ್ತಾಂತ ಬೆಳಕಿಗೆ ಬಂದಿತು.

## ನನ್‌ಳ ಪ್ರೇತಾತ್ಮ

ಬೋರ್ಲೆ ರೆಕ್ಟರಿಯಲ್ಲಿ ಮುಕ್ತಿ ಕಾಣದೆ ಅಲೆದಾಡುತ್ತಿದ್ದ ಪ್ರೇತ ೧೭ನೇ ಶತಮಾನದ ನನ್ ಒಬ್ಬಳದ್ದಾಗಿತ್ತು. ೧೭ನೇ ಶತಮಾನದ ಫ್ರಾನ್ಸ್‌ನಲ್ಲಿದ್ದ ೧೮ರ ಹರೆಯದ ಮರಿಯಾ ಲೈಕ್ಟೆ ಎಂಬ ಯುವತಿ ಕ್ರೈಸ್ತ ಸಂನ್ಯಾಸಿನಿಯಾಗಿ ದೀಕ್ಷೆ ಪಡೆಯಲು ಹಿಂದೆ ಬೋರ್ಲೆ ರೆಕ್ಟರಿ ಇದ್ದ ಸ್ಥಳದಲ್ಲಿ ಕಾನ್ವೆಂಟಿಗೆ ಬಂದಳು. ಈ ಕಾನ್ವೆಂಟ್ ಪಕ್ಕದಲ್ಲಿ ಒಂದು ಕ್ರೈಸ್ತ ಮಠವಿದ್ದಿತು. ಅಲ್ಲೊಬ್ಬ ಯುವಕ ಪಾದ್ರಿಯಿದ್ದ. ಅವನ ಹೆಸರು ಹೆನ್ರಿ ವಾಲ್ಡ್‌ಗ್ರೇವ್. ದಿನಗಳೆದಂತೆ ಹೆನ್ರಿ ಮತ್ತು ಮರಿಯಾ ಲೈಕ್ಟೆ ಮಧ್ಯೆ ಪ್ರಣಯ ಅಂಕುರಿಸಿತು. ಮರಿಯಾ ಲೈಕ್ಟೆ ಧಾರ್ಮಿಕ ಶಿಕ್ಷಣವನ್ನು ಅರ್ಧದಲ್ಲಿಯೇ ನಿಲ್ಲಿಸಿ ಹೆನ್ರಿ ವಾಲ್ಡ್‌ಗ್ರೇವ್‌ನನ್ನು ಮದುವೆಯಾದಳು. ಅವರ ದಾಂಪತ್ಯ ಜೀವನ ಮುಂದುವರಿಯಿತು. ಹೆನ್ರಿಗೆ ತನ್ನ ಪತ್ನಿಯ ಶೀಲದ ಬಗ್ಗೆ ಶಂಕೆಯುಂಟಾಯಿತು. ಒಂದು ದಿನ ಆತ ಪತ್ನಿಯ ಕತ್ತು ಹಿಸುಕಿ ಕೊಂದು ಕ್ರೈಸ್ತ ಮಠದ ನೆಲ ಮಾಳಿಗೆಯಲ್ಲಿ ಹೂತಿರಿಸಿದ. ನನ್ ಆಗುವ ಮಹಾತ್ವಾಕಾಂಕ್ಷೆ ಹೊಂದಿದ್ದ ಮರಿಯಾ ಲೈಕ್ಟೆಗೆ ಇತ್ತ ಆ ಆಶಯವೂ ಈಡೇರಲಿಲ್ಲ. ದಾಂಪತ್ಯ ಜೀವನದಲ್ಲಿಯೂ ಸುಖ ಸಿಗದೆ ಅಕಾಲಿಕ ದುರ್ಮರಣ ಹೊಂದಿದಳು. ಮುಕ್ತಿ ದೊರಕದ ಅವಳ ಪ್ರೇತಾತ್ಮ ಆ ನಿವಾಸದಲ್ಲಿ

ಅಲೆದಾಡಲು ಆರಂಭಿಸಿತು.

೧೯೩೬ರ ಮಾರ್ಚ್‌ನಲ್ಲಿ ಮರಿಯಾ ಲೈಕ್ವೆಯ ಪ್ರೇತಾತ್ಮದ ಮಾರ್ಗದರ್ಶನದಲ್ಲಿ ಖಾಲಿ ಹಾಳೆಯ ಮೇಲೆ ಇಷ್ಟು ವಿವರಗಳು ಮೂಡಿದವು. ಅವಳ ಪೂರ್ವಜನ್ಮದ ಬದುಕಿಗೆ ಸಂಬಂಧಿಸಿದ ವಿವರಗಳವು.

೧೯೩೮ರ ಮಾರ್ಚಿನಲ್ಲಿ ಮರಿಯಾ ಲೈಕ್ವೆಯ ಪ್ರೇತಾತ್ಮ ತನ್ನ ಪೂರ್ವಜನ್ಮದ ಬದುಕಿನ ವಿವರಗಳನ್ನು ತಿಳಿಸಿದ ಬಳಿಕ ಐದು ತಿಂಗಳ ತರುವಾಯ ಇನ್ನೊಂದು ಪ್ರೇತಾತ್ಮ ಅಲ್ಲಿ ಕಾಣಿಸಿಕೊಂಡಿತು. ಅಗ್ನಿ ದುರಂತದಲ್ಲಿ ಇಡೀ ಬೋರ್ಲೆ ರೆಕ್ಟರಿ ನಾಶವಾದ ಬಳಿಕ ಕ್ರೈಸ್ತ ಸಂನ್ಯಾಸಿನಿಯ ಕೊಲೆಯ ಪುರಾವೆಗಳು ಅಲ್ಲಿ ದೊರಕಲಿವೆ ಎಂದು ಆ ಪ್ರೇತಾತ್ಮ ತಿಳಿಸಿತು. ಆದರೆ ಬೋರ್ಲೆ ರೆಕ್ಟರಿ ತಕ್ಷಣ ಅಗ್ನಿ ಅನಾಹುತದಲ್ಲಿ ನಾಶವಾಗಲಿಲ್ಲ, ೧೯೩೮ರ ಸಪ್ಟಂಬರ್ ತಿಂಗಳಲ್ಲಿ ಕ್ಯಾಪ್ಟನ್ ಡಬ್ಲ್ಯು.ಎಚ್. ಗ್ರೆಗ್‌ಸನ್ ಬೋರ್ಲೆ ರೆಕ್ಟರಿಯ ಹೊಸ ಮಾಲಿಕನಾಗಿ ಆ ನಿವಾಸದಲ್ಲಿ ವಾಸಿಸತೊಡಗಿದ. ಒಂದು ರಾತ್ರಿ ಆತ ತನ್ನ ಖಾಸಗಿ ವಾಚನಾಲಯದಲ್ಲಿ ಪುಸ್ತಕಗಳನ್ನು ವ್ಯವಸ್ಥಿತವಾಗಿ ಜೋಡಿಸುವಾಗ ಹಾಲ್‌ನಲ್ಲಿದ್ದ ದೀಪವೊಂದು ಆಕಸ್ಮಿಕವಾಗಿ ಉರುಳಿ ಬೆಂಕಿ ಉದ್ಭವಿಸಿತು. ಕ್ಷಣ ಮಾತ್ರದಲ್ಲಿ ಬೆಂಕಿ ಇಡೀ ಮನೆಯನ್ನು ಆವರಿಸಿತು. ಬೆಂಕಿ ನಂದಿಸಲು ಗ್ರೆಗ್‌ಸನ್ ಶತಪ್ರಯತ್ನ ಮಾಡಿದರೂ ಫಲಕಾರಿಯಾಗಲಿಲ್ಲ. ಬೋರ್ಲೆ ರೆಕ್ಟರಿ ಸುಟ್ಟು ನಾಶವಾಯಿತು. ನಡುರಾತ್ರಿಯಲ್ಲಿ ಧಗಧಗನೆ ಹೊತ್ತಿ ಉರಿಯುತ್ತಿದ್ದ ಆ ನಿವಾಸದಲ್ಲಿ ಅಗ್ನಿ ಜ್ವಾಲೆಗಳು ಎತ್ತರೆತ್ತರಕ್ಕೆ ವ್ಯಾಪಿಸುತ್ತಿದ್ದಾಗ ಮಾನವಾಕೃತಿಯ ನೆರಳೊಂದು ಬೆಂಕಿ ಹೊಗೆಯ ಮಧ್ಯೆ ತೇಲುತ್ತಾ ಹೋಗುತ್ತಿರುವುದನ್ನು ಗ್ರೆಗ್‌ಸನ್ ಗಮನಿಸಿದ.

ಅಂತೂ ಹ್ಯಾರಿ ಪ್ರೈಸ್ ನಿರೀಕ್ಷಿಸುತ್ತಿದ್ದಂತೆ ಬೋರ್ಲೆ ರೆಕ್ಟರಿಯ ನೆಲದಾಳದಲ್ಲಿ ಹೂತಿಟ್ಟಿರಬಹುದಾದ ಶವದ ಅವಶೇಷಗಳ ಪತ್ತೆಗೆ ಸೂಕ್ತ ಅವಕಾಶ ದೊರಕಿದಂತಾಯಿತು.

ಆದರೆ ಹಲವು ಕಾರಣಗಳಿಂದ ಪ್ರೈಸ್ ಆ ಸ್ಥಳದಲ್ಲಿ ಭೂ ಉತ್ಖನನ ನಡೆಸಲು ಗ್ರೆಗ್‌ಸನ್‌ನ ಅನುಮತಿ ಕೇಳಲಿಲ್ಲ. ಕೊನೆಗೊಂದು ದಿನ ಆತ ಅನುಮತಿ ಪಡೆದದ್ದೂ ಆಯಿತು. ಪ್ರೈಸ್ ಮತ್ತು ಅವನ ಸಹಾಯಕರ ತಂಡ ಸುಟ್ಟು ನಾಶವಾದ ಆ ಭವ್ಯ ನಿವಾಸದ ಪಾಳುಬಿದ್ದ ಸ್ಥಳದಲ್ಲಿ ಭೂ ಉತ್ಖನನಗಳನ್ನು ಆರಂಭಿಸಿದರು. ಒಂದು ಹಗಲಿಡೀ ಅಗೆದಾಗ ಮಾನವ ದೇಹದ ಮೂಳೆಗಳು, ತಲೆಬುರುಡೆ, ದವಡೆ ಹಲ್ಲುಗಳು ಅಲ್ಲಿ ಕಂಡು ಬಂದವು. ಕೊಲೆಗೀಡಾದ ಕ್ರೈಸ್ತ ಸಂನ್ಯಾಸಿನಿಯ ಕಳೇಬರದ ಅವಶೇಷಗಳು ಅವಾಗಿರಬಹುದು ಎಂಬುದು ಪ್ರೈಸ್‌ಗೆ ಖಾತ್ರಿಯಾಯಿತು.

ಅರ್ಧಂಬರ್ಧ ಸುಟ್ಟು ಕರಕಾದ ಬೋರ್ಲೆ ರೆಕ್ಟರಿಯನ್ನು ೧೯೪೪ರಲ್ಲಿ ಸಂಪೂರ್ಣ ನೆಲಸಮಗೊಳಿಸಲಾಯಿತು. ಉತ್ಖನನದ ಸಂದರ್ಭದಲ್ಲಿ ದೊರೆತ ತಲೆಬುರುಡೆ, ದವಡೆಹಲ್ಲುಗಳನ್ನು ತನಿಖಾ ಶಾಸ್ತ್ರ ತಜ್ಞರು, ದಂತ ವೈದ್ಯರು ಕೂಲಂಕಷವಾಗಿ ವಿಶ್ಲೇಷಿಸಿದಾಗ ಅದು ೨೦ರ ಹರೆಯದ ಮಹಿಳೆಯೊಬ್ಬಳ ದೇಹದ ಅವಶೇಷಗಳೆಂದು ತಿಳಿದು ಬಂತು.

## ಮಾತೆಯೊ? ಮಡದಿಯೊ?

ಅಮೆರಿಕದ ಒಂದು ಕಾಲೇಜು. ಅಲ್ಲಿ ಓದುತ್ತಿದ್ದ ವಿದ್ಯಾರ್ಥಿ-ವಿದ್ಯಾರ್ಥಿನಿಯರಲ್ಲಿ ಪಾಶ್ಚಾತ್ಯ ಹಾಗೂ ಪೌರಸ್ತ್ಯ ದೇಶಗಳಿಂದ ಬಂದವರು ಬಹು ಸಂಖ್ಯೆಯಲ್ಲಿದ್ದರು. ಒಮ್ಮೆ ಪ್ರೊಫೆಸರ್ ಒಬ್ಬ "ನಿಮ್ಮ ಮಡದಿ ಮತ್ತು ತಾಯಿ ಇಬ್ಬರೂ ನೀರಿನಲ್ಲಿ ಮುಳುಗುತ್ತಿದ್ದಾರೆಂದಿಟ್ಟುಕೊಳ್ಳಿ. ನೀವು ಈ ಇಬ್ಬರಲ್ಲಿ ಯಾರನ್ನು ಬದುಕಿಸಿಕೊಳ್ಳುತ್ತೀರಿ?" ಎಂದು ಕೇಳಿದರಂತೆ.

ಪಾಶ್ಚಾತ್ಯ ವಿದ್ಯಾರ್ಥಿಗಳೆಲ್ಲಾ "ಹೆಂಡತಿಯನ್ನು" ಎಂದು ಉತ್ತರಿಸಿದರೆ ಪೌರಸ್ತ್ಯ ವಿದ್ಯಾರ್ಥಿಗಳು "ತಾಯಿಯನ್ನು" ಎಂದು ಹೇಳಿದರಂತೆ.

• "ಮಾಧವಪ್ರಿಯೆ"




೧೯೭೫ನೇ ಇಸವಿ. ಮಾರ್ಚ್ ತಿಂಗಳ ೩ನೇ ದಿನಾಂಕ. ಬೆಳಿಗ್ಗೆ ೧೧-೩೦ರ ಸಮಯ. ಬೆಂಗಳೂರಿನಿಂದ ಮೂವತ್ತೈದು ಮೈಲಿ ದೂರದಲ್ಲಿರುವ ಸಣ್ಣ ಪಟ್ಟಣ ಕನಕಪುರಕ್ಕೆ (ಅದು ನನ್ನ ತವರು ಮನೆ,) ಅಕ್ಕನ ಮನೆಗೆ ಹೋಗಿ ಕೆಲವು ದಿನಗಳಿದ್ದದ್ದು ನಾನು ವಾಪಸ್ಸು ಬಂದಿಳಿದೆ. ಬಸ್ಸು ನಿಲ್ದಾಣ ಕಿರಿದಾಗಿದ್ದು ಜನಜಾತ್ರೆಯೇ ಅಲ್ಲಿತ್ತು. ವಿಪರೀತ ಬಿಸಿಲಿನ ಝಳ. ಪ್ರಯಾಣಿಕರ ನೂಕು ನುಗ್ಗಲಿನ ಮಧ್ಯೆ ನನ್ನ ಒಂದೆರಡು ಲಗ್ಗೇಜುಗಳನ್ನು ಹಿಡಿದು ಹಮಾಲನನ್ನು ಹುಡುಕುತ್ತಾ ಇದ್ದೆ. ಎದುರು ಸಾಲಿನಲ್ಲಿ ವೆಂಕಟರಾಯನ ದೊಡ್ಡಿಗೆ ಹೊರಡಲು ಕೆಂಪು ಮೂತಿಯ ಸರಕಾರಿ ಬಸ್ಸು ಸಜ್ಜಾಗಿತ್ತು. ನಿರ್ವಾಹಕ ಎಂಟ್ರಿ ಹಾಕಿಸಲು ನಿಲ್ದಾಣದ ಕಛೇರಿಗೆ ಹೋಗಿದ್ದರು. ಅದಾಗಲೇ ತುಂಬಿ ಹೋಗಿದ್ದ ಬಸ್ಸಿನೊಳಗೆ ಇನ್ನೂ ಜನ ತಮ್ಮನ್ನು ತುರುಕಿಕೊಳ್ಳುವ ಕಸರತ್ತು ಮಾಡುತ್ತಿದ್ದರು. ಸೀಟು ಸಿಕ್ಕಿದ ಭಾಗ್ಯವಂತರನ್ನು ಕಂಬಿಗೆ ಜೋತುಬಿದ್ದವರು ಅಸೂಯೆಯಿಂದ ನೋಡಿರಲಿಕ್ಕೂ ಸಾಕು.

ಇಂಥದರಲ್ಲಿ ಸೀಟು ಪಡೆದು ಧನ್ಯನಾದ ಹುಮ್ಮಸ್ಸಿನಲ್ಲಿ ಗೌಡನೊಬ್ಬ ತುಟಿಗಿಟ್ಟ ಸಿಗರೇಟಿಗೆ ಕಡ್ಡಿಗೀರಿದ. ಗೀರಿದ ಅಷ್ಟೇ. ಆದರೆ ಆ ಕಡ್ಡಿ ನೂರಾರು ಜನರ ಜೀವಕ್ಕಿಟ್ಟ ಕೊಳ್ಳಿಯಾಯಿತು.

ಆದುದಿಷ್ಟೇ. ಆ ಗೌಡನ ಮುಂದಿನ ಸೀಟಿನಡಿಯಲ್ಲಿ ಪೆಟ್ರೋಲ್ ತುಂಬಿದ ಮೂರು ಕ್ಯಾನುಗಳು ತಮ್ಮ ಅಗಾಧ ಶಕ್ತಿಯ ಕನಸಿನಲ್ಲಿ ಮಲಗಿದ್ದವು. ಅಲ್ಲಲ್ಲಿ ತುಳುಕಿದ್ದ ಪೆಟ್ರೋಲ್ ಹನಿಗಳು ಗೌಡ ಎಸೆದ ಬೆಂಕಿಕಡ್ಡಿಯೊಡನೆ ಸ್ನೇಹ ಬೆಳೆಸಿದವು. ಧುತ್ತೆಂದು ಅಗ್ನಿದೇವ ತನ್ನ ಕೆನ್ನಾಲಿಗೆಗಳನ್ನು ಚಾಚುತ್ತಾ ಸಿಕ್ಕಸಿಕ್ಕವರನ್ನೆಲ್ಲಾ ಆಲಂಗಿಸತೊಡಗಿದ. ಹೌಹಾರಿದ ಜನ ಕಿಕ್ಕಿರಿದ ಬಸ್ಸಿನಿಂದ ಹೊರಬರಲು ಧಾವಿಸುವಾಗ ಮಲಗಿದ್ದ ಕ್ಯಾನುಗಳು ಜನರ ಕಾಲ್ತುಳಿತಕ್ಕೆ ಸಿಕ್ಕಿ ಬಸ್ಸಿನ ತುಂಬಾ ಪೆಟ್ರೋಲು ಹರಿಯಿತು.

ನಿಲ್ದಾಣದಲ್ಲೆಲ್ಲ ಹೊಗೆ ತುಂಬಿತು. ನಿಂತಿದ್ದ ಜನ ದಿಗ್ಭ್ರಮೆಗೊಳಗಾದರು. ಬಸ್ಸಿನ ಒಳಗಿದ್ದವರು ಬೆಂಕಿಯ ಶಾಖ ತಡೆಯಲಾರದೆ ಅರಚಾಡುತ್ತಿದ್ದರು. ಬಸ್ಸಿನೊಳಗೆ ಕಂಬಿ ಹಿಡಿದು ಒತ್ತೊತ್ತಾಗಿ ನಿಂತವರು ಬಾಗಿಲೆಡೆಯಿಂದ ಬೇಗ ಹೊರಹೋಗಲು ಇನ್ನಷ್ಟು ಒತ್ತಡ ತಂದರು. ಅಗ್ನಿದೇವನ ರೌದ್ರಾವತಾರ ಮುಗಿಲಿಗೇರಿತು. ಎಲ್ಲೆಲ್ಲೂ ದಟ್ಟ ಕಪ್ಪನೆಯ ಹೊಗೆ ಆವರಿಸಿತು. ಬೆಂಕಿಯ ನಡುವೆಯೇ ಅದೃಷ್ಟವಂತರು ಬಾಗಿಲಿಂದ ಹೊರಗೆ ಧುಮುಕಿದರು. ಕಿಟಕಿಗಳ ಸರಳುಗಳ ಮಧ್ಯೆ ತೂರಿ ಬರುವ ಅಸಾಧ್ಯ ಪ್ರಯತ್ನದಲ್ಲೂ ಒಂದಿಬ್ಬರು ಜಯಗಳಿಸಿದರು. ಹೊರಗೆ ಬರಲಾಗದೇ ಒಳಗೇ

• ನಾಗರತ್ನ ಚಂದ್ರಶೇಖರ

ಬೇಯುತ್ತಿದ್ದವರ ಕೂಗು, ತೊಳಲಾಟ ಹೃದಯ ಹಿಂಡುವಂತಿತ್ತು.

ನಿಲ್ದಾಣದಲ್ಲಿದ್ದ ಹೋಟೆಲಿನ ಕೆಲಸಗಾರರು ಸರಸರನೆ ಅಲ್ಲೇ ಇದ್ದ ಕಲ್ಯಾಣಿಯಿಂದ ನೀರು ತಂದು ಬೆಂಕಿ ನಂದಿಸಲು ಶತಪ್ರಯತ್ನ ಮಾಡಿದರು. ಕಿಟಕಿಯ ಗಾಜುಗಳನ್ನು ಒಡೆದು ಕೆಲವರನ್ನಾದರೂ ಉಳಿಸಬಹುದೇನೋ ಎಂದು ನೋಡಿದರು. ಈ ಎಲ್ಲ ಪ್ರಯತ್ನಗಳ ನಡುವೆ ಬೆಂಕಿಯ ತೀಕ್ಷ್ಣತೆ ಕಡಿಮೆಯಾಯಿತು.

ನಿಜ. ಆದರೆ ಅದು ಪೂರ್ತಿ ಆರಿರಲಿಲ್ಲ. ಅಗ್ನಿದೇವ ಪ್ರಸನ್ನನಾಗುವ ವೇಳೆಗೆ ಒಳಗಿದ್ದ ಹೆಚ್ಚು ಪರಿ ಪ್ರಯಾಣಿಕರ ಪಾಲಿನ ಕೊನೆಯ ಪಯಣ ಅದಾಯಿತು. ಇದನ್ನೆಲ್ಲಾ ನಾನು ಅಸಹಾಯಕತೆಯಿಂದ ನೋಡುತ್ತಲೇ ನಿಲ್ಲಬೇಕಾಯಿತು. ಕಿಟಕಿಯೊಳಗಿಂದ ಅರ್ಧ ಹೊರಬಂದ ಹೆಂಗಸೊಬ್ಬಳನ್ನು ಜನ ಹೊರಗೆಳೆಯಲು ಎಷ್ಟೇ ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಅವಳ ಅರ್ಧ ಶರೀರ ಬಸ್ಸಿನೊಳಗೇ ಬೇಯುತ್ತಿತ್ತು. ಆಕೆಯ ಚೀರಾಟ ಕರುಳು ಕತ್ತರಿಸುವಂತಿತ್ತು. ಬಹುಶಃ ಅವಳ ಕಾಲನ್ನು ಪಕ್ಕದ ವ್ಯಕ್ತಿಯೋ ವಸ್ತುವೋ ಗಟ್ಟಿಯಾಗಿ ಹಿಡಿದುಕೊಂಡಿರಬೇಕು.

ನನ್ನ ಕೈಕಾಲುಗಳು ಗಡಗಡ ನಡುಗುತ್ತಿದ್ದವು. ನನಗರಿವಿಲ್ಲದೆ ನಾನು ಅಳುತ್ತಿದ್ದೆ. ಹೆದರಿಕೆಯೋ, ಅನುಕಂಪವೋ, ಅಸಹಾಯಕತೆಯೋ, ಚಿಟ್ಟನೆ ಚೀರಬೇಕೆನಿಸುತ್ತಿತ್ತು. ಇಡಿ ನಿಲ್ದಾಣದಲ್ಲಿದ್ದವರಲ್ಲಿ ನಾನೊಬ್ಬಳೇ ಹೆಣ್ಣುಮಗಳು.

ಅಷ್ಟರಲ್ಲಾಗಲೇ ಸ್ಥಳೀಯ ವೈದ್ಯಕೀಯ ನೆರವು ಒದಗಿಬಂತು. ಪೊಲೀಸ್ ವಾಹನಗಳೂ ಬಂದವು. ಸಿನಿಮಾಗಳಲ್ಲಿ ಎಲ್ಲ ಮುಗಿದು ಹೋದ ಮೇಲೆ ಪೊಲೀಸರು ಬರುವುದುಂಟಲ್ಲ, ಆದರೆ ಇಲ್ಲಿ ಹಾಗೆಯೇ ಆಯಿತಲ್ಲ! ಕಾಲ ಮಿಂಚಿ ಹೋಗಿತ್ತು. ಅಮೂಲ್ಯ ಜೀವಗಳು ಸದ್ದಿಲ್ಲದೆ ಹಾರಿ ಹೋಗಿದ್ದವು. ವ್ಯಕ್ತಿ ಗಂಡೋ ಹೆಣ್ಣೋ ಎಂಬ ಗುರುತು ಕೂಡ ಸಿಗದಂತೆ ಸುಟ್ಟ ಶವಗಳು ಒಂದೊಂದಾಗಿ ನೆಲದ ಮೇಲೆ ಮಲಗಿದವು. ಉಸಿರಾಡುತ್ತಿದ್ದ ಕೆಲವು ಮಾಂಸದ ಮುದ್ದೆಗಳನ್ನು ಅಂಬುಲೆನ್ಸ್‌ಗಳು ತಡಮಾಡದೆ ಆಸ್ಪತ್ರೆಗೆ ಹೊತ್ತೊಯ್ಯುತ್ತಿದ್ದವು. ಸುಟ್ಟ ಚರ್ಮ ದೇಹದಿಂದ ಹರಿದ ಬಟ್ಟೆಯಂತೆ ನೇತಾಡುತ್ತಿದ್ದ ಆ ದೃಶ್ಯ ನೋಡಿದರೆ ಅಳ್ಳೆದೆಯವರು ಪ್ರಜ್ಞೆ ತಪ್ಪಬೇಕು ಇನ್ನು ಕೂತಲ್ಲೇ ಪೂರ್ತಿ ಸುಟ್ಟು ಕರಕಾದ ಕಪ್ಪನೆಯ ಪ್ರತಿಮೆಯಂತೆ ಸೀಟಿಗೆ ಅಂಟಿಕೊಂಡಿದ್ದ ನಾಲ್ಕು ಶವಗಳ ದೃಶ್ಯ ಭಯಾನಕವಾಗಿತ್ತು. ಸೀಟಿನಿಂದ ಮೇಲಕ್ಕೆ ಏಳಲೇ ಅವಕಾಶವಿಲ್ಲದಂತೆ ಕುಳಿತಿದ್ದ ಅವರು ಅನುಭವಿಸಿರಬಹುದಾದ ಯಾತನೆ ಆ ದೇವರಿಗೇ ಗೊತ್ತು.

ಅಗ್ನಿ ಅನಾಹುತ ಸಂಭವಿಸಿದಾಗ ಬಸ್ಸಿನಲ್ಲಿದ್ದ ತುರ್ತುಬಾಗಿಲನ್ನು ತೆರೆಯಲು ಆಗದಿದ್ದದ್ದು ಇನ್ನೊಂದು ವಿಪರ್ಯಾಸ. ಆ ಬಾಗಿಲಿಗೆ ರಿವೆಟ್ ಹಾಕಿದ್ದರಿಂದ ಅದು ಶಾಶ್ವತವಾಗಿ ಮುಚ್ಚಿಕೊಂಡಿತ್ತು. ಅದನ್ನು ತೆಗೆಯಲು ಬರುವಂತಿದ್ದರೆ ಅಲ್ಪ ಸ್ವಲ್ಪ ಜನರನ್ನಾದರೂ ಆ ಮೂಲಕ ಉಳಿಸಬಹುದಿತ್ತು. ಜೀವನವೇ ಭಾರ ಎಂದುಕೊಂಡವರಿಗೂ ಇಂಥ ಸಾವು ಅಪ್ಪಿಕೊಂಡಾಗ ಆ ಯಾತನೆ ಬದುಕಿಗಿಂತ ಘೋರ ಎಂದೆನಿಸಿರಬೇಕು. ಅಕಾಲ ಮೃತ್ಯುವಿನ ವಿಕಾರ ಒಡಲಿನಲ್ಲಿ ಭಸ್ಮವಾದ ಈ ನತದೃಷ್ಟ ಜೀವಗಳ ಬೆಲೆ ಯಾರು ಕಟ್ಟಬಲ್ಲರು?

ಇಂಥ ದುರಂತಗಳು ಅದೆಷ್ಟೋ. ಪತ್ರಿಕೆಯಲ್ಲಿ ಓದಿದ್ದು, ದುರಂತದ ಒಂದೆರಡು ಚಿತ್ರಗಳನ್ನು ನೋಡಿದ್ದು ಬಹುಕಾಲ ನೆನಪಿನಲ್ಲುಳಿಯುವುದಿಲ್ಲ. ಆದರೆ ಕಣ್ಣಾರೆ ಕಂಡದ್ದು? ಅದು ಅಡಿಗಡಿಗೂ ಎದೆ ನಡುಗಿಸುವುದರ ಜತೆಗೆ ಹಲವಾರು ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ.

ಬಸ್ಸುಗಳಲ್ಲಿ ಮಿತಿಮೀರಿದ ಜನರನ್ನು ತುಂಬುವುದು ಸಾಧುವೆ?

ಪೆಟ್ರೋಲಿನಂಥ ಅತ್ಯಂತ ದಹನಶೀಲ ವಸ್ತುಗಳನ್ನು ಬಸ್ಸಿನಲ್ಲಿ ಸಾಗಿಸಲು ಅವಕಾಶಕೊಡುವುದು ಅಥವಾ ಸಾಗಿಸಲು ಪ್ರಯಾಣಿಕರು ಒತ್ತಾಯಿಸುವುದು ಒಳ್ಳೆಯದೆ?

ಧೂಮಪಾನ ನಿಷೇಧವನ್ನೇಕೆ ಕಟ್ಟುನಿಟ್ಟಾಗಿ ಜಾರಿಗೆ ತರುವುದಿಲ್ಲ?

-ಈ ಪ್ರಶ್ನೆಗಳಿಗೆ ಉತ್ತರವಿದೆ. ಆದರೆ ಅವು ಆಚರಣೆಗೆ ಬರುವವರೆಗೂ ಇದು ಹೀಗೆಯೆ.

ಆದರೆ ಹಾಗಾಗಬಾರದು ಅಲ್ಲವೆ?

# ಮದನಕಾಮನ ಕಥೆಗಳು

## ೪

ಮನುಷ್ಯನ ಮನಸ್ಸು ಅಗಾಧವಾದಷ್ಟೇ ಅದರ ವರ್ತನೆಯು ವಿಚಿತ್ರವೂ ಅಹುದು. ಒಂದು ಸಂಗತಿ ಅಸಂಭವವೆಂದು ಗೊತ್ತಿರುವಾಗಲೂ ಒಮ್ಮೊಮ್ಮೆ ಮನಸ್ಸು ಅದನ್ನು ನಂಬಲೊಪ್ಪುವುದಿಲ್ಲ.

ಮಂತ್ರಿಕುಮಾರ ಬುದ್ಧಿ ಚಾತುರ್ಯನ ಮನಃಸ್ಥಿತಿಯೂ ಈಗ ಹಾಗೆಯೇ ಇತ್ತು. ಆಗಲೇ ಸುಮಾರು ೬೦ ವರುಷ ವಯಸ್ಸಾಗಿರುವ ಚಿತ್ರಕಾರ ವೆಂಕಯ್ಯ ಜೀವದಿಂದಿರುವ ಸಂಭವ ತೀರ ಕಡಿಮೆ ಎನ್ನುವುದು ಅವನಿಗೆ ಗೊತ್ತಿತ್ತು. ಆದರೂ ವೆಂಕಯ್ಯ ಕಾಲವಾಗಿರಬಹುದೆಂಬುದನ್ನೊಪ್ಪಲು ಅವನ ಮನಸ್ಸು ಸಿದ್ಧವಾಗಲಿಲ್ಲ. ವೆಂಕಯ್ಯನು ಜೀವಿಸಿದ್ದಾನೆಂಬ ಒಂದು ವಿಧವಾದ ನಂಬುಗೆ ಅವನಲ್ಲಿ ನೆಲೆಯೂರಿದ್ದರಿಂದಲೇ ಚಾತುರ್ಯನು ಗಿರಿ ಕಂದರಗಳನ್ನು, ಹೊಳೆ ಹಳ್ಳಗಳನ್ನು, ಅಡವಿ ಕಾನನಗಳನ್ನು ಲೆಕ್ಕಿಸದೆಯೇ ದೇವಕೀಪುರವನ್ನು ಬಂದು ತಲುಪಿದ್ದನು.

ದೇಕೀಪುರವೊಂದು ಸಣ್ಣ ಹಳ್ಳಿ. ರಾಜಕುಮಾರನಂತೆ ಕಾಣುವ ವ್ಯಕ್ತಿಯೊಬ್ಬ ಅಲ್ಲಿಗೆ ಬರುವುದೆಂದರೆ ಆ ಹಳ್ಳಿಯ ಇತಿಹಾಸದಲ್ಲೊಂದು ಅವಿಸ್ಮರಣೀಯವಾದ ಘಟನೆಯೇ ಸರಿ. ಅಂತೆಯೇ ಚಾತುರ್ಯ ಅಲ್ಲಿಗೆ ಬಂದಾಗ ಗೂನು ಬೆನ್ನಿನ ಮುದುಕರು ಮೊದಲ್ಗೊಂಡು ಎಳೆಯ ಮಕ್ಕಳವರೆಗಿನ ಅನೇಕ ಸ್ತ್ರೀ ಪುರುಷರು ಅವನ ಸುತ್ತ ನೆರೆದರು. ಕೆಲ ನಿಮಿಷಗಳಲ್ಲಿಯೇ ರಾಜಕುಮಾರನೊಬ್ಬ ತಮ್ಮೂರಿಗೆ ಬಂದ ಸುದ್ದಿ ಊರ ತುಂಬೆಲ್ಲ ಹರಡಿದ್ದರಿಂದ ಊರಿಗೆ ಊರೇ ಅಲ್ಲಿಗೆ ಬಂದಿತು. ಅವನು ತಮ್ಮೂರಿಗೆ ಬಂದ ಕಾರಣವನ್ನು ತಿಳಿದುಕೊಳ್ಳಲು ಅವರೆಲ್ಲ ತುಂಬ ಉತ್ಸುಕರಾಗಿದ್ದಾರೆನ್ನುವುದು ಅವರ ಮುಖದ ಮೇಲೆಯೇ ವ್ಯಕ್ತವಾಗುತ್ತಿತ್ತು.

ವೆಂಕಯ್ಯ ಹೇಗಿದ್ದಿರಬಹುದು ಎಂಬುದನ್ನು ಚಾತುರ್ಯ ತನ್ನ ಮನಸ್ಸಿನಲ್ಲಿಯೇ ರೂಪಿಸಿಕೊಂಡಿದ್ದನು. ಆ ಕಲ್ಪನೆ ಅಸ್ಪಷ್ಟವಾಗಿದ್ದಿತಾದರೂ ಜನ ಜಂಗುಳಿಯಲ್ಲಿ ಅಂಥ ವ್ಯಕ್ತಿ ಯಾರಾದರೂ ಇದ್ದಿರಬಹುದೇ ಎಂದು ಅವನು ಕುದುರೆಯ ಮೇಲೆ ಕುಳಿತಲ್ಲಿಂದಲೇ ನೋಡಿದನು. ಅಲ್ಲಿ ಹಲವಾರು ಜನ ಮುದುಕರಿದ್ದರೂ ಚಿತ್ರಕಾರ ವೆಂಕಯ್ಯನೆಂದು ಅವನು ಭಾವಿಸಿದ್ದಂತಹ ವ್ಯಕ್ತಿ ಯಾರೂ ಕಂಡುಬರಲಿಲ್ಲ. ಅಂತೆಯೆ ಅವನು ಕುದುರೆಯಿಂದ ಕೆಳಗಿಳಿದು ನಸುನಗುತ್ತ ಜನರತ್ತ ಕೈ ಬೀಸಿ ವಂದಿಸಿದನು.

ಅಪರಿಚಿತರೊಂದಿಗೆ ಸ್ನೇಹ ಬೆಳೆಸುವದಕ್ಕೆ ಹಿರಿಯರಿಗಿಂತ ಕಿರಿಯರೇ ಬೇಗನೆ ಮುಂದಾಗುತ್ತಾರೆ. ಜನಸಮೂಹವನ್ನು ಒಲಿಸಿಕೊಳ್ಳುವ ಕಲೆ ಚಾತುರ್ಯನಿಗೆ ಅವಗತವಾಗಿತ್ತು. ಅಂಬೆಗಾಲಿಕ್ಕುತ್ತ ತನ್ನೆಡೆಗೆ ಬಂದಿದ್ದ ಮಗುವನ್ನೆತ್ತಿಕೊಂಡು ತನ್ನ ಕುದುರೆಯ ಮೇಲೆ ಕೂಡಿಸಿದನು. ಆದರಿಂದ ನೆರೆದ ಜನತೆಗೆಲ್ಲ ತುಂಬ ಸಂತೋಷ, ಸಮಾಧಾನಗಳಾದುವು. ಒಡನೆಯೆ ಚಾತುರ್ಯ ಆ ಹಳ್ಳಿಗರ ಕಣ್ಮಣಿಯಾಗಿ ಪರಿಣಮಿಸಿದ. "ವೆಂಕಯ್ಯನವರೆಂಬ ಮಹಾನ್ ಕಲಾವಿದರನ್ನು ಕಂಡು ಗೌರವ ಸಲ್ಲಿಸಲು ನಾನು ನಿಮ್ಮೂರಿಗೆ ಬಂದಿದ್ದೇನೆ. ಆದರೆ ಅವರಿನ್ನೂ......" ಎಂದು ಅವನು ವಾಕ್ಯವನ್ನು ಮುಗಿಸುವುದರಲ್ಲಿಯೇ, "ಹೌದ್ಹೌದು. ವೆಂಕಯ್ಯ ಇದೇ ಓಣಿಯ ಆಚೆಯ ತುದಿಯಲ್ಲಿದ್ದಾರೆ. ನಾವು ನಿಮ್ಮನ್ನಲ್ಲಿಗೆ ಕರೆದೊಯ್ಯುವೆವು....." ಎಂದು ನೆರೆದ ಜನರೆಲ್ಲ ಒಮ್ಮೆಲೆ ಕೂಗಿದರು.

ಆಗ ಚಾತುರ್ಯನ ಮನಃಸ್ಥಿತಿ ಏನಾಗಿರಬೇಕೆಂಬುದನ್ನು ಯಾರೂ ಊಹಿಸಬಹುದು. ಅವನ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಆದರಿಂದ ಒಂದು ಕ್ಷಣ ಅವನ ಬಾಯಿಂದ ಮಾತೇ ಹೊರಡಲಿಲ್ಲ. ಆದರೆ ಈ ಆನಂದ ಕೆಲ ಕ್ಷಣ ಮಾತ್ರವಿತ್ತು. ನಂತರ ವೆಂಕಯ್ಯನು ತಾನೀ ಚಿತ್ರಗಳನ್ನು ತನ್ನ ಕಲ್ಪನೆ ಮಾತ್ರದಿಂದಲೆ ಬಿಡಿಸುವುದಾಗಿ ಹೇಳಿದರೇನು ಮಾಡುವುದು ಎಂಬ ಹೊಸ

ಸಂಶಯ ಮೂಡಿ ಅವನನ್ನು ನಿರಾಶೆಯ ಕತ್ತಲೆ ಮುತ್ತಿ ಆವರಿಸಿತು.

ಆದರೂ ವೆಂಕಯ್ಯನನ್ನು ಕಾಣದಿದ್ದರೆ ತನ್ನ ಕರ್ತವ್ಯದಲ್ಲಿ ಚ್ಯುತಿ ಬರುತ್ತದೆಂದು ಬಗೆದು ಅವನು ದಾರಿತೋರಿಸಬಂದವರ ಜೊತೆಗೆ ನಡೆದನು. ವೆಂಕಯ್ಯನ ಮನೆಯೊಂದು ಹಳೆಯ ಗುಡಿಸಲಿನಂತಿದ್ದರೂ ಗಾಳಿ ಬೆಳಕುಗಳಿಗೇನೂ ಕೊರತೆಯೆನಿಸುವಂತಿರಲಿಲ್ಲ. ಯಾವ ಔಪಚಾರಿಕತೆಯೂ ಅಲ್ಲಿ ಚಾತುರ್ಯನನ್ನೆದುರಿಸಲಿಲ್ಲ. ಚಾತುರ್ಯನು ಆ ಮನೆಯನ್ನು ಪ್ರವೇಶಿಸಿದಾಗ ಮುರುಕಲು ಖುರ್ಚಿಯ ಮೇಲೆ ಮುದುಕನೊಬ್ಬ ಕುಳಿತಿದ್ದ. ಇಷ್ಟೊಂದು ಜನ ಒಮ್ಮೆಲೆ ತನ್ನ ಮನೆಗೆ ನುಗ್ಗಿದ್ದರಿಂದ ಅವನು ತುಸು ಸಿಟ್ಟಿಗೆದ್ದಂತೆ ತೋರಿತು.

"ಅಲ್ಲಿ ನೋಡಿ! ಅವನೇ ವೆಂಕಯ್ಯ!" ಮಕ್ಕಳೆಲ್ಲ ಕೂಗಿದರು.

ವೆಂಕಯ್ಯನನ್ನು ಕಂಡಾಗ ಚಾತುರ್ಯನಿಗೆ ಲಂಕೆಯಲ್ಲಿ ಹನುಮಂತನು ಸೀತೆಯನ್ನು ಕಂಡಂಥ ಅನುಭವವೇ ಆಯಿತು. ಅವನು ತಕ್ಷಣ ವೃದ್ಧ ಚಿತ್ರಕಾರನಿಗೆ ಸಾಷ್ಟಾಂಗವೆರಗಿ ಎದ್ದು ನಿಂತಾಗ ವೆಂಕಯ್ಯನು ಅವನನ್ನು ಕರೆದು ತನ್ನ ಹತ್ತಿರ ಕೂಡಿಸಿಕೊಂಡನು. ಆಗ ಜನಜಂಗುಳಿ ನಿಧಾನವಾಗಿ ಕರಗಿಹೋಯಿತು.

ವೆಂಕಯ್ಯನ ಪ್ರೀತಿಗೆ ಪಾತ್ರನಾಗಲು ಚಾತುರ್ಯನಿಗೇನೂ ಹೆಚ್ಚು ಸಮಯ ಹಿಡಿಯಲಿಲ್ಲ. ವೆಂಕಯ್ಯನ ಕಲೆಯನ್ನು ಅವನು ಬಹುವಾಗಿ ಹೊಗಳಿದನು. ಒಂದು ವಾರವಾದರೂ ತಾನು ಅವನೆಡೆಗೆ ಬಂದಿರುವ ಉದ್ದೇಶವನ್ನು ಹೇಳಲಿಲ್ಲ; ಆದರೆ ಅವನ ಸೇವೆಯನ್ನು ಮಾಡುತ್ತಲೇ ನಡೆದನು. ವೆಂಕಯ್ಯನ ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಎಲ್ಲ ವೃದ್ಧರಂತೆ ವೆಂಕಯ್ಯನೂ ತನ್ನ ಹಳೆಯ ನೆನಪುಗಳನ್ನು ರುಚಿರುಚಿಯಾದ ಕತೆ ಮಾಡಿ ನಿತ್ಯವೂ ಹೇಳುತ್ತಿದ್ದನು. ತಾನು ಗುರುವಿನಲ್ಲಿ ಕಲಿತುದೆಂತು; ಅರಸು-ಅರಸಿಯರನೇಕರ ಮೆಚ್ಚುಗೆಗೆ ಪಾತ್ರನಾದುದೆಂತು ಮುಂತಾದುವನ್ನು ಅವನು ನಿತ್ಯವೂ ಹೇಳುತ್ತಿದ್ದನು.

ಹನ್ನೊಂದನೆಯ ದಿನ ಇಬ್ಬರೂ ಊಟಕ್ಕೆ ಕುಳಿತಾಗ ಚಾತುರ್ಯ ನಿಜವಾದ ವಿಷಯವನ್ನು ಕುರಿತು ಮಾತಾಡಲಾರಂಭಿಸಿದನು:

"ವೆಂಕಯ್ಯನವರೆ, ಇಂದ್ರಪುರಿಯಲ್ಲಿಯ ಶಿವದೇವಾಲಯದಲ್ಲಿಯ ಚಿತ್ರಗಳನ್ನು ನೀವೇ ಬಿಡಿಸಿದಿರಲ್ಲವೇ?"

"ಅವು ನನ್ನ ಕೊನೆಕೊನೆಯ ಚಿತ್ರಗಳು. ಅವುಗಳನ್ನು ನೀನು ನೋಡಿದೆಯಾ?"

"ನೋಡಿದೆನಷ್ಟೇ ಅಲ್ಲ, ಅವುಗಳಲ್ಲಿಯ ರಾಜಪುತ್ರಿಯರ ಚಿತ್ರವಂತೂ ನನ್ನ ಕಲ್ಪನಾ ಶಕ್ತಿಯನ್ನೇ ಸೆರೆಹಿಡಿದು ಬಿಟ್ಟಿದೆ. ಎಷ್ಟೊಂದು ಜೀವಕಳೆ ಅವುಗಳಲ್ಲಿ ತುಂಬಿದಂತಿದೆ!"

✡ ✡ ✡ ✡ ✡ ✡ ✡ ✡ ✡

# ಚಾತುರ್ಯ ನೋಡಿದ ಚಿತ್ರ ಕನ್ಯೆಯರ ಪಡಿನೆಳಲು

✡ ✡ ✡ ✡ ✡ ✡ ✡ ✡ ✡

"ನೀನು ನುಡಿದದ್ದು ನಿಜವಿದೆ, ನನಗೆ ದೊರೆತ ಸಂಕೇತವೊಂದರಿಂದ ಇಬ್ಬರು ಜೀವಂತ ಯುವತಿಯರನ್ನೇ ಅಲ್ಲಿ ನಾನು ಚಿತ್ರಿಸಿದೆ."

"ಹಾಗಿರಬೇಕೆಂದು ನನಗೂ ಅನಿಸಿತ್ತು. ನೀವು ಅನ್ಯಥಾ ಭಾವಿಸದಿದ್ದರೆ ಆ ಯುವತಿಯರಾರು ಹಾಗೂ ನಿಮಗೆ ದೊರೆತ ಸಂಕೇತವಾವುದು ಎಂಬುದನ್ನು ಕೇಳಬಹುದೇ?" ಚಾತುರ್ಯ ಪೀಠಿಕೆ ಹಾಕಿದನು.

"ಇದಕ್ಕೇಕೆ ಅನ್ಯಥಾ ಭಾವಿಸಬೇಕು? ನೀನು ಹಾಗೆ ಕೇಳುವುದರಲ್ಲಿ ತಪ್ಪೇನಿದೆ? ಆ ಯುವತಿಯರಿಬ್ಬರು ಭೀಮಪುರಿಯ ಅರಸು ಭೀಮರಾಜನ

ಪುತ್ರಿಯರು. ಅವನ ಅರಮನೆಯಲ್ಲಿ ಕೆಲಸಕ್ಕಿರುವ ಒಬ್ಬನು ನನ್ನ ಹತ್ತಿರದ ಮಿತ್ರನಾಗಿದ್ದಾನೆ. ಒಮ್ಮೆ ಆಮಂತ್ರಿತನಾಗಿ ನಾನು ಅವನ ಮನೆಗೆ ಹೋದಾಗ ಅವನು ಆ ಯುವತಿಯರದೆಂದು ಹೇಳಿ ನನಗೆ ಕೇಶಗುಚ್ಛವೊಂದನ್ನು ತೋರಿಸಿದನು. ಸಾಮುದ್ರಿಕ ಶಾಸ್ತ್ರದಿಂದ ನಾನು ಕೇಶಗುಚ್ಛದಿಂದ ಆ ಯುವತಿಯರ ರೂಪವನ್ನು ಗುರುತಿಸಿದೆ. ನಂತರ ನನ್ನ ಕಲ್ಪನೆಯಿಂದಲೇ ಚಿತ್ರ ಬರೆದೆ. ಆ ಅವುಗಳನ್ನು ನೋಡಿದ ನನ್ನ ಆ ಮಿತ್ರನು 'ಚಿತ್ರಗಳು ರಾಜಕುಮಾರಿಯರನ್ನೇ ಎದುರಿಗೆ ಕುಳ್ಳಿರಿಸಿ ಕೊಂಡು ಬರೆದಂತಿದೆ' ಎಂದನು," ವೆಂಕಯ್ಯ ಹುರುಪಿನಿಂದ ಹೇಳಿದನು.

"ರಾಜಪುತ್ರಿಯರನ್ನು ಕಾಣುವುದು ಕಠಿಣವೆ? ಇದರಿಂದ ಅದರಲ್ಲಿ ನಾನು ಆಸಕ್ತಿ ತಳೆದಿರುವೆನೆಂದೇನಲ್ಲ, ಆದರೂ ಸಹಜವಾಗಿಯೇ ಕೇಳಿದೆ," ಮಂತ್ರಿಕುಮಾರ ಚಾತುರ್ಯ ತಡವರಿಸಿದನು.

ಹೀಗೆಯೇ ವೆಂಕಯ್ಯನಿಂದ ಅನೇಕ ವಿಷಯಗಳು ಚಾತುರ್ಯನಿಗೆ ತಿಳಿದುಬಂದವು. ಯುವತಿಯರು 'ಘೋಷಾ'ದಲ್ಲಿರುವುದರಿಂದ ಅವರನ್ನು ನೋಡಸಿಗುವುದಂತೂ ಅಸಾಧ್ಯಕೋಟಿಯ ಮಾತೇ ಎಂಬುದರೊಡನೆಯೆ ಅವರಿನ್ನೂ ಅವಿವಾಹಿತೆಯರೆಂದೂ ತಿಳಿಯಿತು. ಅಲ್ಲದೆ ವೆಂಕಯ್ಯನ ಮಿತ್ರನು ಇನ್ನೂ ಅರಮನೆಯ ಸೇವೆಯಲ್ಲಿದ್ದಾನೆ; ಅವನ ಹೆಸರು ಮುತ್ತಯ್ಯ ನಾಯಕ. ಅವನ ಹೆಂಡತಿ ಲಕ್ಷಕ್ಕ. ದೂರದ ವಿದರ್ಭ ದೇಶದವಳಾದ ಅವಳ ಮದುವೆ ಚಿಕ್ಕವಳಿದ್ದಾಗಲೇ ಆಗಿದ್ದರೂ ಅನಂತರ ಆಕೆ ಒಂದು ಸಲವೂ ತನ್ನ ತವರಿಗೆ ಹೋಗಿಲ್ಲ ಹಾಗೂ ಅವಳ ಒಬ್ಬನೇ ಒಬ್ಬನಾದ ತಮ್ಮನು ಸಹ ಅವಳನ್ನು ಒಮ್ಮೆಯೂ ಕಾಣಲು ಬಂದಿಲ್ಲ ಹಾಗೂ ಮುತ್ತಯ್ಯ ನಾಯಕನಿಗೆ ಈಗ ಒಬ್ಬ ಮಗ ಹಾಗೂ ಒಬ್ಬ ಮಗಳಿದ್ದಾರೆ ಮುಂತಾದ ವಿವರಗಳೆಲ್ಲವನ್ನೂ ಚಾತುರ್ಯ ವೆಂಕಯ್ಯನಿಂದ ಸಂಗ್ರಹಿಸಿದನು.

ಈ ವಿವರಗಳೆಲ್ಲ ತಿಳಿದ ಮೇಲೆ ಚಾತುರ್ಯನು ತನ್ನ ಮುಂದಿನ ಕಾರ್ಯಕ್ರಮವನ್ನು ಕೂಲಂಕಷವಾಗಿ ಆಲೋಚಿಸಿ ನಿರ್ಧರಿಸಿಕೊಂಡು ಮರುದಿನ ತಾನು ನೆರೆಯೂರಿಗೆ ಹೋಗಲಿರುವುದಾಗಿ ಹೇಳಿ, ವೆಂಕಯ್ಯನಿಂದ ನಿರೋಪ ಪಡೆದುಕೊಂಡು ವೇಗದಿಂದ ಭೀಮಪುರಿಗೆ ನಡೆದನು.

ಭೀಮಪುರಿಯನ್ನು ತಲುಪಿದೊಡನೆಯೇ ಚಾತುರ್ಯನು ಮಾಡಿದ ಮೊದಲ ಕೆಲಸವೆಂದರೆ ಪೇಟೆಗೆ ಹೋಗಿ ಜರಿಯಂಚಿನ ಧೋತರ, ರುಮಾಲು, ಜರತಾರಿ ಸೀರೆ, ಚಿಕ್ಕಮಕ್ಕಳಿಗಾಗಿ ಬಟ್ಟೆಗಳು, ಒಂದು ಬುಟ್ಟಿಯ ತುಂಬ ಹಣ್ಣುಹಂಪಲುಗಳು ಹಾಗು ಸಿಹಿ ತಿಂಡಿಗಳನ್ನು ಕೊಂಡುಕೊಂಡು ಕೂಲಿಯೊಬ್ಬನ ತಲೆಯ ಮೇಲೆ ಅವನ್ನೆಲ್ಲ ಹೊರಿಸಿಕೊಂಡು ಅರಮನೆಯ ಸೇವಕರಿಗಾಗಿಯೇ ಇರುವ ಮನೆಗಳತ್ತ ನಡೆದನು. ದಾರಿಯಲ್ಲಿ ಭೆಟ್ಟಿಯಾದವನೊಬ್ಬನನ್ನು ಮುತ್ತಯ್ಯ ನಾಯಕರ ಮನೆಯ ಬಗ್ಗೆ ವಿಚಾರಿಸಿದನು. ಆ ಮನುಷ್ಯ ಮುತ್ತಯ್ಯನ ನೆರೆಮನೆಯವನೇ ಆದ್ದರಿಂದ ಚಾತುರ್ಯನನ್ನು ನೇರವಾಗಿ ಅಲ್ಲಿಗೇ ಕರೆದೊಯ್ದನು. ಚಾತುರ್ಯನು ತಾನು ತಂದ ಸಾಮಾನನ್ನೆಲ್ಲ ಪಡಸಾಲೆಯಲ್ಲಿರಿಸಿ ನಡುಮನೆಯಲ್ಲಿದ್ದ ಸ್ತ್ರೀಯೆಡೆಗೆ ನಡೆದನು.

"ಅಕ್ಕಾ, ಐದು ವರ್ಷದವಳಿದ್ದಾಗಲೇ ನೀನು ನಮ್ಮನ್ನು ಬಿಟ್ಟು ಬಂದೆಯಲ್ಲ! ಆಗ ನಮಗಾದ ದುಃಖವನ್ನು ಏನೆಂದು ವರ್ಣಿಸಲಿ! ಅಪ್ಪ ಅಮ್ಮ ಇಬ್ಬರೂ ಒಮ್ಮೆಯಾದರೂ ನಾನು ನಿನ್ನನ್ನು ಕಾಣಲು ಮರೆಯಬಾರದೆಂದು ಹೇಳಿ ತೀರಿಕೊಂಡರು. ನಿನ್ನಲ್ಲಿಗೆ ಬರಬೇಕೆಂದು ನಾನು ಎಷ್ಟೋ ದಿನಗಳಿಂದ ಪ್ರಯತ್ನಿಸುತ್ತಿದ್ದೆ. ಆದರೆ ಈಗದು ಕೈಗೂಡಿತು. ಅಕ್ಕಾ, ಎಷ್ಟೊಂದು ಬದಲಾಗಿ ಹೋಗಿರುವೆಯಲ್ಲ?" ಎಂದು ಕಣ್ಣೀರಿಟ್ಟನು.

ಈ ವೇಳೆಗಾಗಲೇ ಲಕ್ಷಕ್ಕನಿಗೂ ಹೃದಯ ತುಂಬಿಬಂದಂತಾಗಿ ಅವಳ ಕಣ್ಣುಗಳಲ್ಲೂ ನೀರಾಡಲಾರಂಭಿಸಿತ್ತು. ತಮ್ಮನು ಬಂದ ಸಂತಸದೊಂದಿಗೆ ತಂದೆ-ತಾಯಿಗಳು ತೀರಿಹೋದ ದುಃಖವೂ ಅವಳಿಗೆ ಏಕಕಾಲಕ್ಕಾಯಿತು. ತಮ್ಮನೊಂದಿಗೆ ಅವಳಿಗೆ ಅನೇಕ ವಿಷಯಗಳನ್ನು ಮಾತಾಡುವದಿತ್ತು. ಆದರೆ ಅದಕ್ಕೂ ಮೊದಲು ಅವನು ಮಕ್ಕಳಿಗೆ ಹಣ್ಣು-ತಿಂಡಿಗಳನ್ನು ಹಾಗು ಬಟ್ಟೆಗಳನ್ನು ಮತ್ತು ಲಕ್ಷಕ್ಕನಿಗೆ ಸೀರೆಯನ್ನೂ ಕೊಟ್ಟನು. ನಂತರ ಒಮ್ಮೆಲೇ ನೆನಪಾದವನಂತೆ, "ಅಕ್ಕಾ ನನ್ನ ಭಾವ



ನೆಲ್ಲಿ?" ಎಂದು ಕೇಳಿದನು.

"ಅರಮನೆಯಿಂದ ಅವರು ಬರುವ ವೇಳೆ ಯಾಗಿದೆ. ಈಗ ಬರಬಹುದು," ಎನ್ನುತ್ತ ಲಕ್ಷ್ಮಿ ತನ್ನ ತಮ್ಮನನ್ನು ಅಡಿಗೆಮನೆಗೆ ಕರೆದೊಯ್ದು ಚಾಪೆಯ ಮೇಲೆ ಕೂಡಿಸಿ ಹಾಲು ಹಣ್ಣುಗಳನ್ನು ಕೊಟ್ಟು ಉಪಚರಿಸಿದಳು. ಈ ವೇಳೆಗಾಗಲೇ ಚಿಕ್ಕಮಕ್ಕಳಿಬ್ಬರೂ ತಮ್ಮ ಸೋದರಮಾವನೊಂದಿಗೆ ಸ್ನೇಹ ಬೆಳೆಸಿದ್ದರು. ಅಷ್ಟರಲ್ಲಿಯೆ ಮುತ್ತಯ್ಯ ಮನೆಗೆ ಬಂದನು.

ಮುತ್ತಯ್ಯನನ್ನು ದಾರಿಯಲ್ಲಿಯೇ ಸಂಧಿಸಿದವನೊಬ್ಬನು ಈ ವಾರ್ತೆಯನ್ನವನಿಗೆ ತಿಳಿಸಿದ್ದನು. ಎಷ್ಟೋ ವರುಷಗಳ ನಂತರ ತನ್ನ ಶ್ರೀಮಂತ ಭಾವ ಮೈದುನ ಮನೆಗೆ ಬಂದುದನ್ನು ಕೇಳಿ



ಅವನಿಗೆ ಸಂತೋಷವಾಗಿತ್ತು. ಮನೆಯಲ್ಲಿ ಚಾತುರ್ಯನು ಜರಿಯಂಚಿನ ಧೋತರಗಳನ್ನು ಅರ್ಪಿಸಿದಾಗಲಂತೂ ಮುತ್ತಯ್ಯ ಸಂತೋಷ ಇಮ್ಮಡಿಸಿತು.

ನಂತರ ಎಲ್ಲರೂ ಊಟಕ್ಕೆ ಕುಳಿತರು. ತಮ್ಮನು ಬಂದ ಸಂತೋಷದಲ್ಲಿ ಲಕ್ಷ್ಮಕ್ಕ ಹಬ್ಬದ ಅಡಿಗೆ ಮಾಡಿ ಬಡಿಸಿದಳು.

ಒಂದೆರಡು ದಿನಗಳನ್ನು ಹೀಗೆಯೇ ಸಂತೋಷದಿಂದ ಕಳೆದ ನಂತರ ಚಾತುರ್ಯನು ಒಂದು ದಿನ ಮುತ್ತಯ್ಯನನ್ನು, "ನಿಮ್ಮ ಅರಸರಿಗೆ ಗಂಡು ಮಕ್ಕಳೆಷ್ಟು ಜನ?" ಎಂದು ಕೇಳಿದನು.

"ಅವರಿಗಿರುವುದು ಇಬ್ಬರು ಹೆಣ್ಣುಮಕ್ಕಳು ಮಾತ್ರ. ಅವರು ಅತ್ಯಂತ ರೂಪವತಿಯರಾಗಿದ್ದಾರೆ."

"ನಾನು ಅವರನ್ನು ನೋಡಲು ಸಾಧ್ಯವೇ?"

"ಅವರಿನ್ನೂ ಅವಿವಾಹಿತೆಯರು. ಅದೇಕೋ ಅರಸರು ಆ ಒಂದು ವಿಷಯದಲ್ಲಿ ವಿಚಿತ್ರವಾಗಿ ವರ್ತಿಸುತ್ತಾರೆ. ತಮ್ಮ ಪುತ್ರಿಯನ್ನಪೇಕ್ಷಿಸಿ ಬಂದವರೆಲ್ಲರನ್ನೂ ಅವರು ಇದುವರೆಗೆ ಕೊಲ್ಲಿಸಿದ್ದಾರೆ. ಅಂತೆಯೇ ಈಗ ಹಾಗೆ ಬರಲು ಯಾರೂ ಸಿದ್ಧರಾಗುತ್ತಿಲ್ಲ," ಎಂದು ಮುತ್ತಯ್ಯ ನುಡಿದನು.

"ಹಾಗಿದ್ದರೆ ನನಗಾಗಿ ಒಂದು ಕೆಲಸವನ್ನು ಮಾಡಲು ನಿಮಗೆ ಸಾಧ್ಯವೆ? ನಾಳೆ ಮುಂಜಾನೆ ನೀವು ಕೆಲಸಕ್ಕೆ ಹೋಗುವಾಗ ನನ್ನನ್ನು ನಿಮ್ಮೊಂದಿಗೆ ಕರೆದೊಯ್ಯಿರಿ. ಅಲ್ಲಿ ರಾಜಕುಮಾರಿಯರ ಕೋಣೆಯ ಹತ್ತಿರದ ಸ್ಥಳದಲ್ಲಿ ನನಗೆ ಎಣ್ಣೆ ಹಚ್ಚಿರಿ. ಹಾಗೆ ಮಾಡುವಾಗ ನನ್ನ ತಲೆಯ ಮೇಲೆ ಎಲ್ಲ ೩೬ ತಾಳಗಳನ್ನೂ ಜೋರಾಗಿ ಬಾರಿಸಿರಿ. ಅದನ್ನು ಕೇಳಿ ರಾಜಕುಮಾರಿಯರಿಬ್ಬರೂ ಕಿಟಕಿಯಿಂದ ಇಣುಕಿ ಹಾಕಿ ಕೆಳಕ್ಕೆ ನೋಡುವರು. ಮುಖ ಮೇಲೆತ್ತದೆ ನಾನು ಅವರನ್ನು ನೋಡುತ್ತೇನೆ. ಅವರು ಇದೇನೆಂದು ಕೇಳಿದಾಗ ನೀವು ನಿಮ್ಮ ಭಾವಮೈದುನ ಬಹಳ ವರುಷಗಳ ನಂತರ ಬಂದಿರುವುದರಿಂದ ಸಂಪ್ರದಾಯದ ಪ್ರಕಾರ ಎಣ್ಣೆ ಹಚ್ಚಬೇಕಿದ್ದು ಅರಮನೆಗೆ ಬೇಗ ಬರಬೇಕಿದ್ದುದರಿಂದ ಮನೆಯಲ್ಲಿ ಸಮಯಸಿಗುವಂತಿರಲಿಲ್ಲವೆಂದೂ ಅದಕ್ಕಾಗಿಯೇ ಅಲ್ಲಿಗೆ ನನ್ನನ್ನು ಕರೆತಂದುದಾಗಿಯೂ ಹೇಳಿರಿ. ಅಲ್ಲದೆ ಅದು ಮುಗಿದೊಡನೆಯೇ ನಾನು ಮನೆಗೆ ಹೋಗಿಬಿಡುವದಾಗಿಯೂ ಹೇಳಿರಿ. ಈ ಯೋಜನೆಯನ್ನು ನೀವು ಒಪ್ಪುತ್ತೀರಾ?"

ಮುತ್ತಯ್ಯ ನಾಯಕ ಅದಕ್ಕೊಪ್ಪಲೇಬೇಕಾಯಿತು. ಯಾಕಂದರೆ ಸಂಪ್ರದಾಯದ ಪ್ರಕಾರ ಹೆಂಡತಿಯ ಸೋದರನೆಂದರೆ ದೇವರಿಗೆ ಮಾತ್ರ ದ್ವಿತೀಯನು.

ಪೂರ್ವಯೋಜನೆಯಂತೆಯೇ ಅವರಿಬ್ಬರೂ ಮರುದಿನ ಮುಂಜಾನೆ ಅರಮನೆಗೆ ನಡೆದರು. ಅಲ್ಲಿ ಸರಿಯಾದ ಸ್ಥಳವನ್ನು ಆಯ್ದುಕೊಂಡು ಎಣ್ಣೆಯ ದೊಡ್ಡ ಕಡಾಯಿಯೊಂದನ್ನು ಕಿಟಕಿಯ ಕೆಳಗಿರಿಸಿ ಹತ್ತಿರ ಚಾತುರ್ಯ ಕುಳಿತನು. ಅವರು ಯೋಜಿಸಿದಂತೆಯೆ ಎಲ್ಲವೂ ನಡೆದು ರಾಜಕುಮಾರಿಯರು ಕಿಟಕಿಯಲ್ಲಿ ಬಂದು ನಿಂತಾಗ ಅವರ ಪಡಿನೆಳಲು ಕಡಾಯಿಯಲ್ಲಿಯ ಎಣ್ಣೆಯಲ್ಲಿ ಕಂಡಾಗ ಚಾತುರ್ಯನಿಗೆ ಮದನಕಾಮ ಅವರಿಗೆ ಮೋಹಿತನಾಗಿದ್ದು ಅದೇಕೆಂಬುದು ಅರ್ಥವಾಯಿತು. ಅವರು ನಿಜವಾಗಿಯೂ ಸುರಸುಂದರಿಯರೇ ಆಗಿದ್ದರು.

ತನ್ನ ಮಿತ್ರನ ಮನೀಷೆಯನ್ನು ಅದೆಂತು ಪೂರೈಸುವುದೆಂದು ಅವನಿಗೆ ಚಿಂತೆಯಿಟ್ಟಿತು. ಏನೆಂಬುದು ತಿಳಿಯಲಾಗದೇ ಅಂದೇ ರಾತ್ರಿ ಮುತ್ತಯ್ಯ-ಲಕ್ಷ್ಮಕ್ಕರನ್ನು ಬೀಳ್ಕೊಂಡು ತನ್ನ ಕುದುರೆಯೇರಿ ಸಮುದ್ರದೆಡೆಗೆ ನಡೆದನು.

(ಮುಂದಿನ ಸಂಚಿಕೆ ನೋಡಿ)

---

**ಟೆಟ್ರಾಸೈಕ್ಲಿನ್‌ಯುಕ್ತ ಮಾತ್ರೆಗಳನ್ನು ತೆಗೆದುಕೊಳ್ಳುವಾಗ ಆದಷ್ಟು ಮಟ್ಟಿಗೆ ಹಾಲನ್ನು ತೆಗೆದುಕೊಳ್ಳಬೇಡಿ. ಹಾಲಿನಲ್ಲಿಯ ಕ್ಯಾಲ್ಸಿಯಂ ಟೆಟ್ರಾಸೈಕ್ಲಿನ್ ರಕ್ತಗತವಾಗುವುದನ್ನು ತಡೆಯುತ್ತದೆ. ನೀವು, ಅನೀಮಿಯದ ನಿವಾರಣೆಗಾಗಿ ಕಬ್ಬಿಣಯುಕ್ತ ಮಾತ್ರೆಗಳನ್ನು ತೆಗೆದುಕೊಳ್ಳುತ್ತಿದ್ದರೆ ಇದೇ ಕಾರಣದಿಂದ ಹಾಲನ್ನು ಸೇವಿಸಬೇಡಿ.**

**• ಡಾ ಜೆ. ಅಮೃತರಾಜ**

---

## ಮೆಡಿಕಲ್ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಕಲಿಸುವ ಮೊದಲ ಪಾಠವಿದು

# 'ಎಂಬಾಮಿಂಗ್' ಅಂದರೇನು?

• ಡಾ. ಎಸ್.ಆರ್. ನರಹರಿ

ಮನುಷ್ಯನ ಹೆಣವನ್ನು ಕೊಳೆತು ಹೋಗದಂತೆ ರಕ್ಷಿಸಿಡುವ ವಿಧಾನಕ್ಕೆ ಇಂಗ್ಲೀಷಿನ ಪದ 'ಎಂಬಾಮಿಂಗ್' (Embalming.) ಚರಿತ್ರೆಯ ಪಾಠಗಳಲ್ಲಿ ನಾವು ಓದಿದ ಈಜಿಪ್ತಿನ 'ಮಮ್ಮಿ'ಗಳು ಇಂತಹ ರಕ್ಷಿಸಲ್ಪಟ್ಟ ಹೆಣಗಳೇ. ಲೆನಿನ್‌ನಂತಹ ಮಹಾಪುರುಷರ ಮೃತದೇಹವನ್ನು ಮುಂದಿನ ಜನಾಂಗಕ್ಕಾಗಿ ಕಾಪಾಡಿಕೊಂಡಿದ್ದರೆ, ಐನ್‌ಸ್ಟೈನ್‌ರ ಮಿದುಳನ್ನು, ಮುಂದೊಂದು ದಿನದ ವೈಜ್ಞಾನಿಕ ಸಂಶೋಧನೆಯ ಆಶಾವಾದದಿಂದ ಕೆಡದಂತೆ ಕಾದಿರಿಸಿದ್ದಾರೆ. ವೈದ್ಯಕೀಯ ಕಾಲೇಜುಗಳಲ್ಲಿ ದೇಹದ ಅಂಗರಚನಾ ಶಾಸ್ತ್ರದ (Anatomy) ಪ್ರತ್ಯಕ್ಷ ಅಧ್ಯಯನಕ್ಕೆ ಹೆಣಗಳನ್ನು ರಕ್ಷಿಸಿಡುವುದು ಅವಶ್ಯ. ಕೆಲವೊಮ್ಮೆ ಮೃತನ ಹತ್ತಿರದ ಸಂಬಂಧಿಗಳು ಅತಿ ದೂರ ಪ್ರದೇಶಗಳಲ್ಲಿದ್ದಾಗ ಅಂತಿಮ ದರ್ಶನ ಪಡೆಯಲು ಅವರು ಬರುವವರೆಗೂ ಕೆಡದಂತೆ ನೋಡಿಕೊಂಡಿರಬೇಕಾಗುತ್ತದೆ.

ಉಸಿರಾಟದ ಕ್ರಿಯೆನಿಂತ ಕೆಲವು ಗಂಟೆಗಳ ನಂತರ ಆ ದೇಹದ ಕೈಕಾಲುಗಳು ನಿಧಾನವಾಗಿ ಸೆಟೆದುಕೊಳ್ಳುತ್ತವೆ. ಕ್ರಮೇಣ ಮುದುಡಿಕೊಳ್ಳಲು ಆರಂಭವಾಗುತ್ತವೆ. ಇಂಥ ಸ್ಥಿತಿಗೆ ರಿಗರ್ ಮಾರ್ಟಿಸ್ (Rigor Mortis) ಎನ್ನುತ್ತಾರೆ. ಹೀಗೆ ಸೆಟೆದು ಗಟ್ಟಿಯಾದ ಅಂಗಗಳನ್ನು ಬಿಡಿಸಿ ನೇರ ಮಾಡಲು ಸಾಧ್ಯವಾಗಲಾರದು. ಈ ಸ್ಥಿತಿಯಲ್ಲಿ ಹೆಣದ ಜೀವಕೋಶದೊಳಗಿನಿಂದ ಕಿಣ್ವಗಳು (Ennzyme) ಹೊರಬರುತ್ತವೆ. ಈ ಕಿಣ್ವಗಳು ನಿಧಾನವಾಗಿ ತಮ್ಮ ಮಾತೃ ಜೀವಕೋಶಗಳನ್ನು ಜೀರ್ಣಿಸುತ್ತವೆ. ಇದರಿಂದಾಗಿ ಸೆಟೆದುಕೊಂಡ ಹೆಣದ ಅಂಗಾಂಗಳು ನಿಧಾನವಾಗಿ ಸಡಿಲಗೊಳ್ಳುತ್ತವೆ. ಹೀಗೆ ಗಟ್ಟಿಯಾದ ಹೆಣ ಮೆತ್ತಗಾಗುವ ಕ್ರಿಯೆಯನ್ನು ಇಂಗ್ಲೀಷಿನಲ್ಲಿ 'ಆಟೋಲೈಸಿಸ್' ಎನ್ನುತ್ತಾರೆ. ಈ ಹಂತದಲ್ಲಿ ಹೊರಗಿನ ವಾತಾವರಣದಿಂದ ಬ್ಯಾಕ್ಟೀರಿಯಾಗಳು ಹೆಣದೊಳಗೆ ಸೇರಿಕೊಂಡು ಅಥವಾ ಸತ್ತ ವ್ಯಕ್ತಿಯ ಅನ್ನಾಂಗ, ಶ್ವಾಸನಾಳಗಳಲ್ಲಿ ಇದ್ದಂತಹ ಬ್ಯಾಕ್ಟೀರಿಯಾಗಳಿಂದಾಗಿ ಹೆಣ ಕೊಳೆಯಲಾಗಂಭಿಸುತ್ತದೆ. ವೈಜ್ಞಾನಿಕವಾಗಿ ಇದನ್ನು ಪುಟ್ರೇಫ್ಯಾಕ್ಶನ್ (Putrefaction) ಎನ್ನುತ್ತಾರೆ. ಈ ರಾಸಾಯನಿಕ ಪರಿವರ್ತನೆಯಲ್ಲಿ ಉತ್ಪನ್ನವಾಗುವ ಅಮೋನಿಯಾದಿಂದಾಗಿ ಕೆಟ್ಟ ವಾಸನೆ ಹಬ್ಬತೊಡಗುತ್ತದೆ.

ಹೆಣ ಕೊಳೆಯುವ ಈ ಎಲ್ಲ ಹಂತಗಳನ್ನು ತಡೆಹಿಡಿಯುವ ಎಂಬಾಮಿಂಗ್ ಹೆಣವನ್ನು ಕೇವಲ ೨೪ ಗಂಟೆಗಳ ಕಾಲ ರಕ್ಷಿಸಿಡಬೇಕಾದರೆ ೪ ಡಿಗ್ರಿ ಸೆಂಟಿಗ್ರೇಡ್ ಉಷ್ಣತೆಯ ಶೈತ್ಯಾಗಾರ ಸಾಕಾಗಬಹುದು. ಮೃತ ವ್ಯಕ್ತಿಯ ಮನೆಯಲ್ಲಿ

ಅಂತಹ ವ್ಯವಸ್ಥೆ ಇಲ್ಲದಿದ್ದರೆ ಅದಕ್ಕೊಂದು ಸುಲಭೋಪಾಯವಿದೆ: ಮೃತ ದೇಹವನ್ನು ಸ್ವಚ್ಛಗೊಳಿಸಿ ಹತ್ತಿಯನ್ನು ಸುತ್ತಿ ಆ ಬಳಿಕ ಮಂಜುಗಡ್ಡೆಯ ತುಂಡುಗಳಿಂದ ಇಡೀ ಹೆಣವನ್ನು ಮುಚ್ಚಬೇಕು. ಹೆಚ್ಚು ಕಾಲ ತಂಪು ಉಳಿಯಲು ಮರದ ಹುಡಿಯನ್ನೂ ಸೇರಿಸಬಹುದು. ಈ ಸ್ಥಿತಿಯಲ್ಲಿ ೨೪ ರಿಂದ ೪೮ ಗಂಟೆಗಳ ಕಾಲ ಹೆಣವನ್ನು ಕಾದಿಡಬಹುದು. ಸಾಮಾನ್ಯವಾಗಿ ಇಷ್ಟು ಕಾಲಾವಕಾಶದಲ್ಲಿ ದೂರದ ಊರುಗಳಿಂದ ನಿಕಟವರ್ತಿಗಳು ಬಂದು ಸೇರುವುದು ಸಾಧ್ಯ.

ಈ ಮೊದಲೇ ಹೇಳಿದಂತೆ ಮೆಡಿಕಲ್ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಅಧ್ಯಯನಕ್ಕೆ ಅನೇಕ ಹೆಣಗಳು ಬೇಕಾಗುತ್ತವೆ. ರಸ್ತೆ ಬದಿಯಲ್ಲಿ ಬಿದ್ದ ಅನಾಥಶವಗಳು, ಆಸ್ಪತ್ರೆಯಲ್ಲಿ ವಾರಸುದಾರರಿಲ್ಲದ ಹೆಣಗಳು, ಮರಣೋತ್ತರ ದೇಹದಾನಕ್ಕೆ ಒಪ್ಪಿದವರ ಕಳೇಬರಗಳು ಅಧ್ಯಯನಕ್ಕೆ ಲಭ್ಯವಾಗುತ್ತವೆ. ದೇಶದ ಕೆಲವು ದೊಡ್ಡ ಆಸ್ಪತ್ರೆಗಳಲ್ಲಿ ಮರಣೋತ್ತರ ದೇಹದಾನಗೈದವರ ಆಸ್ಪತ್ರೆಯ ಬಿಲ್ಲನ್ನು ಮಾಫಿ ಮಾಡುವ ವ್ಯವಸ್ಥೆಯೂ ಇದೆ. ಸರಕಾರಿ ಆಸ್ಪತ್ರೆಗಳಲ್ಲಿ ಬೇವಾರ್ಸಿ ಎಂದು ತೋರುವ ಹೆಣಗಳನ್ನು ಶವಾಗಾರಗಳಲ್ಲಿ ರಕ್ಷಿಸಿಟ್ಟು ಮೂರು ದಿನಗಳ ನೋಟೀಸು ಕೊಟ್ಟು, ಯಾರೂ ವಾರಸುದಾರರು ಬಾರದಿದ್ದ ಸಂದರ್ಭಗಳಲ್ಲಿ ಅಂಥ ಶವವನ್ನು ಕಾಲೇಜಿಗೆ ನೀಡುತ್ತಾರೆ.

ಈ ರೀತಿಯಲ್ಲಿ ಸಂಗ್ರಹಿಸಿದ ಹೆಣಗಳನ್ನು ಮೊದಲನೆಯದಾಗಿ ಅನಾಟಮಿ ವಿಭಾಗದಲ್ಲಿ ಶುಚಿಗೊಳಿಸುತ್ತಾರೆ. ಆಮೇಲೆ ಅದನ್ನು ಮೇಜಿನ ಮೇಲೆ ಮಲಗಿಸಿ ಹೆಣದ ತಲೆ ಮೇಜಿನಿಂದ ಕೆಳಕ್ಕೆ ನೇತಾಡುವಂತೆ ಹಾಗೂ ಕೈಕಾಲುಗಳು ಚಾಚಿರುವಂತೆ ಮತ್ತು ಬೆರಳುಗಳು ನೇರವಾಗಿರುವಂತೆ ನೋಡಿಕೊಳ್ಳಲಾಗುತ್ತದೆ. ನಂತರ ಹೆಣದ ರಕ್ಷಣೆಗಾಗಿ ತಯಾರಿಸಿದ ದ್ರಾವಣವನ್ನು ಗುರುತ್ವಾಕರ್ಷಣ ಶಕ್ತಿಯ ಮೂಲಕ (ಅಂದರೆ ದ್ರಾವಣ ತುಂಬಿದ ಸೀಸೆಯನ್ನು ಗ್ಲೂಕೋಸ್ ಡ್ರಿಪ್ ಕೊಡುವಂತೆ ಮೇಲಕ್ಕೆ ಕಟ್ಟಿ ನಳಿಕೆಯ ಮೂಲಕ) ಹೆಣದ ರಕ್ತನಾಳಕ್ಕೆ ಸೇರಿಸುತ್ತಾರೆ. ಈ ದ್ರಾವಣವನ್ನು ತುಂಬಲು ಫೆಮೋರಲ್ ಆರ್ಟೆರಿ (Femoral artery) ಎಂಬ ತೊಡೆಸಂದಿಯಲ್ಲಿರುವ ಅಪಧಮನಿಯನ್ನು ಉಪಯೋಗಿಸಲಾಗುತ್ತದೆ. ೫೦೦ ಸಿ.ಸಿ.ಗಳಷ್ಟು ದ್ರಾವಣವನ್ನು ನಳಿಗೆಯ ಮೂಲಕ ಹೆಣದ ಪಾದಗಳ ಕಡೆ ತುಂಬಿದರೆ ಇನ್ನುಳಿದ ದ್ರಾವಣವನ್ನು ತಲೆಯ ಕಡೆಯಿಂದ ತುಂಬಲಾಗುತ್ತದೆ. ಒಂದು ಹೆಣವನ್ನು ರಕ್ಷಿಸಲು ಸುಮಾರು ೪.೫ ರಿಂದ ೫ ಲೀಟರ್‌ನಷ್ಟು ದ್ರಾವಣದ ಅವಶ್ಯಕತೆ ಇದೆ. ಈ ದ್ರಾವಣದಲ್ಲಿ ೧.೫ ಲೀಟರ್‌ನಷ್ಟು ಶೇಕಡಾ ೧೦ ಫಾರ್ಮಾಲಿನ್, ೨೦೦ ಸಿ.ಸಿ.ಯಷ್ಟು ಗ್ಲಿಸರಿನ್, ೫೦೦ ಸಿ.ಸಿ.ಯಷ್ಟು ಆರ್ಸೆನಿಕ್ ದ್ರಾವಣ, ೨ ಲೀಟರ್ ನೀರು ಸೇರಿದ ಮಿಶ್ರಣ ಇರುತ್ತದೆ. ಆರ್ಸೆನಿಕ್ ದ್ರಾವಣವನ್ನು ಆರ್ಸೆನಿಕ್ ಆಮ್ಲ, ಸೋಡಿಯಂ ಕಾರ್ಬೋನೈಟ್, ಸೋಡಿಯಂ ಅಸಿಟೇಟ್‌ಗಳನ್ನು ನೀರಿನಲ್ಲಿ ಕರಗಿಸುವುದರ ಮೂಲಕ ತಯಾರಿಸುತ್ತಾರೆ. ಅಪಧಮನಿಗಳಿಗೆ ಕೆಂಪು ಬಣ್ಣ ಕೊಡಲು ಕೆಂಪು ಸೀಸವನ್ನು ಪ್ರತ್ಯೇಕವಾಗಿ ಇಂಜೆಕ್ಷನ್ ಮೂಲಕ ಸೇರಿಸಬಹುದು.

ಈ ರೀತಿ ದ್ರಾವಣವನ್ನು ಹೆಣದೊಳಗೆ ಸೇರಿಸಿದ ನಂತರ ಹೆಣವನ್ನು ೩ ರಿಂದ ೪ ದಿನಗಳ ಕಾಲ ಶೈತ್ಯಾಗಾರದಲ್ಲಿಡಬೇಕಾಗುತ್ತದೆ. ಆಮೇಲೆ ಹೆಣಗಳನ್ನು ಫಾರ್ಮಾಲಿನ್ ತೊಟ್ಟಿಗಳಲ್ಲಿ ಹಾಕಲಾಗುತ್ತದೆ. ಇಂತಹ ತೊಟ್ಟಿಗಳಲ್ಲಿ ೫ ಲೀಟರ್ ಶೇಕಡ ೧೦ ಫಾರ್ಮಾಲಿನ್, ೨೫೦ ಲೀಟರ್ ನೀರು, ಅರ್ಧ ಕೆ.ಜಿ. ಕಾರ್ಬೋಲಿಕ್ ಆಮ್ಲ ಬೆರೆಸಿ ತಯಾರಿಸಿದ ದ್ರಾವಣವನ್ನು ತುಂಬಿಸುತ್ತಾರೆ. ಈ ತೊಟ್ಟಿಗಳ ದ್ರಾವಣವನ್ನು ಪ್ರತಿ ಆರು ತಿಂಗಳಿಗೊಮ್ಮೆ ಬದಲಿಸಬೇಕು. ಇಂತಹ ಟ್ಯಾಂಕ್‌ಗಳಲ್ಲಿ ಹೆಣಗಳನ್ನು ವರ್ಷಾನುಗಟ್ಟಲೇ ಕೆಡದಂತೆ ರಕ್ಷಿಸಿಡಬಹುದು.

ವೈದ್ಯಕೀಯ ವಿದ್ಯಾರ್ಥಿಗಳಿಗೆ 'ಎಂಬಾಮಿಂಗ್' ಎಂಬುದು ಮೆಡಿಕಲ್ ಕಾಲೇಜಿನಲ್ಲಿ ಕಲಿಸುವ ಮೊದಲ ಪಾಠ. ಮನುಷ್ಯನ ಜೀವ ಹೋದ ಬಳಿಕವೂ ಆ ದೇಹ ವೈದ್ಯಕೀಯ ವಿದ್ಯಾರ್ಥಿಗಳ ಅಧ್ಯಯನದ ಉಪಯೋಗಕ್ಕೆ ಬಂದು, ಮುಂದೆ ಇನ್ನೂ ಅನೇಕ ಜೀವಗಳನ್ನು ಉಳಿಸಲು ಸಹಕಾರಿಯಾಗುತ್ತದೆ. ●



# ಪೊನ್ನುಸ್ವಾಮಿ:

## ನಾವು ಕಳೆದುಕೊಂಡ ಪಿಚ್ ಪ್ರವೀಣ

• ಕೇಶವ ಆದಿ

೧೯೬೦-೬೧. ರಣಜಿ ಟ್ರೋಫಿ ಕ್ರಿಕೆಟ್ ಕ್ವಾರ್ಟರ್ ಫೈನಲ್‌ನ ದಿಲ್ಲಿ ಮತ್ತು ಬಂಗಾಲ ನಡುವಿನ ಪಂದ್ಯ. ಎರಡೂ ತಂಡಗಳು ಪ್ರಥಮ ಇನಿಂಗ್ಸ್ ಮುನ್ನಡೆ ಪಡೆಯಲು ಹಾತೊರೆಯುತ್ತಿವೆ. ದಿಲ್ಲಿ ತನ್ನ ಮೊದಲ ಸರದಿ ಬ್ಯಾಟಿಂಗ್‌ನಲ್ಲಿ ೩೦೭ ಓಟ ಗಳಿಸಿ ಎದುರಾಳಿಗೆ ಸಾಧಾರಣ ಸವಾಲು ಒಡ್ಡಿತ್ತು. ಈ ಮೊತ್ತ ಬೆನ್ನಟ್ಟಿದ ಬಂಗಾಲ ಟೆಸ್ಟ್ ಆರಂಭ ಆಟಗಾರ ಪಂಕಜ ರಾಯ್ ಅವರ ಅಮೋಘ ೧೫೬ ಓಟದ ನೆರವಿನಿಂದ ದಿಲ್ಲಿಯನ್ನು ಹಿಂದೆ ಹಾಕಲು ಕೇವಲ ೬೦ ಓಟ ಗಳಿಸಿದರೆ ಸಾಕು ಎನ್ನುವಷ್ಟು ಸಮೀಪ ಬಂದಿತ್ತು. ಇದಲ್ಲದೆ ಕೈಯಲ್ಲಿ ಇನ್ನೂ ಏಳು ವಿಕೆಟ್‌ಗಳು ಇದ್ದಿದ್ದರಿಂದ ಚಿಂತೆ ಪಡುವ ಅಗತ್ಯ ಇರಲಿಲ್ಲ.

ಆದರೆ ಪಂದ್ಯದ ಮರುದಿನ ಬಂಗಾಲದ ಬ್ಯಾಟಿಂಗ್ ಬೆನ್ನಲುಬನ್ನೆ ಕತ್ತರಿಸಿ ಒಗೆದು ದಿಲ್ಲಿಗೆ ನಿರೀಕ್ಷಿಸಲಾರದಂತಹ ೧೦ ಓಟಗಳ ಅಮೂಲ್ಯ ಮುನ್ನಡೆ ತಂದು ಕೊಟ್ಟ ಮಧ್ಯಮ ವೇಗದ ಬೌಲರ್ ಪೊನ್ನುಸ್ವಾಮಿ ಸೀತಾರಾಮ ಅವರ ಹೆಸರನ್ನು ಬಹಳಷ್ಟು ಕ್ರಿಕೆಟ್ ಪ್ರೇಮಿಗಳು ಕೇಳಿರಲಾರರು.

"ಹಮ್ ಕರೇಂಗಾ, ಇಸ್ ಟೀಮ್ ಕೊ ಬಾಹರ್ ಕರೇಂಗಾ" (ನಾವು ಈ ಕೆಲಸ ಮಾಡೋಣ, ಅವರನ್ನು ಹೊರಗೆ ಹಾಕೋಣ) ಎಂದು ತಂಡದ ನಾಯಕ ರಾಜಿಂದರ ಪಾಲ್ ಅವರನ್ನು ಹುರಿದುಂಬಿಸಿ ಅದರಲ್ಲಿ ಯಶ ಸಾಧಿಸಿದ ಪೊನ್ನುಸ್ವಾಮಿ ಭಾರತದ ಚುರುಕಿನ ಬೌಲರ್‌ಗಳಲ್ಲಿ ಒಬ್ಬರಾಗಿದ್ದರು.

ತಮ್ಮ ಕ್ರಿಕೆಟ್ ಜೀವನದಲ್ಲಿ, ಎಂದೆಂದೂ ದಣಿವನ್ನೇ ಕಾಣದೆ ಒಬ್ಬ ಪ್ರಮುಖ ಬೌಲಿಂಗ್ ಯಂತ್ರವಾಗಿದ್ದ ಸೀತಾರಾಮ ಇತ್ತೀಚೆಗಷ್ಟೆ ಉತ್ತರ ಪ್ರದೇಶದ ಮೋಹನನಗರದಲ್ಲಿ ಕೊನೆಯುಸಿರೆಳೆದರು.

ಈ ಪಂದ್ಯದಲ್ಲಿ ದಿಲ್ಲಿಗೆ ಅಮೂಲ್ಯ ಮುನ್ನಡೆ ನೀಡಿ ಸೆಮಿಫೈನಲ್ ಹಂತಕ್ಕೆ ತಲುಪಿಸಿದ್ದ ಸೀತಾರಾಮ ಒಟ್ಟು ಆರು ಹುದ್ದರಿಗಳನ್ನು ಬಲಿಹಾಕಿದ್ದರು. (೬೧-೨೩-೮೪-೬). ಈ ಪಂದ್ಯ ದೆಹಲಿ ತಂಡದ ಅದೃಷ್ಟವನ್ನೇ ಬದಲಾಯಿಸಿತ್ತು.



ಈ ರಣಜಿ ಟ್ರೋಫಿ ಋತುವಿನಲ್ಲಿ ಸೀತಾರಾಮ ಸರಾಸರಿ ೧೩-೪೭ರಂತೆ ಒಟ್ಟು ೪೦ ವಿಕೆಟ್‌ಗಳನ್ನು ಎಗುರಿಸಿ ತಮ್ಮ ಹಿರಿಮೆ ಮೆರೆದಿದ್ದರು. ಇದಕ್ಕೂ ಹಿಂದಿನ ಮೂರು ಋತುಗಳಲ್ಲಿ ಅವರು ೩೩, ೩೫ ಮತ್ತು ೩೦ ವಿಕೆಟ್ ಬಲಿ ಹಾಕಿ ರಣಜಿ ಟ್ರೋಫಿಯಲ್ಲಿ ಒಟ್ಟಾರೆ ೪೧೩೭ ಓಟಗಳಿಗೆ ೨೪೩ ವಿಕೆಟ್ ಗಳಿಸಿದ ಸಾಧನೆ ಮಾಡಿದ್ದರು.

ಅಲ್ಪ ಅವಧಿಯಲ್ಲಿ ಗಮನಾರ್ಹ ಬೌಲಿಂಗ್ ಸಾಧನೆ ಮಾಡಿದ್ದ ಪೊನ್ನುಸ್ವಾಮಿ ಉತ್ತಮ 'ಪಿಚ್' ತಯಾರಿಸುವದರಲ್ಲಿ ಪಳಗಿದ್ದರು. ಆದರೆ ಈ ಮೊದಲು ಪಿಚ್ ಸಿದ್ಧಪಡಿಸುವ ವಿಷಯದಲ್ಲಿ ಇವರು ಅನೇಕರ ಟೀಕೆಗೆ ಒಳಗಾಗಿದ್ದರೆ, ಇನ್ನು ಕೆಲವರು ಪೊನ್ನುಸ್ವಾಮಿಯವರ ಕಾರ್ಯಕ್ಕೆ ಮೆಚ್ಚುಗೆ ಸಹ ವ್ಯಕ್ತಪಡಿಸಿದ್ದರು.

ಐದು ದಿನಗಳ ಪಂದ್ಯವು ಅಂತಿಮ ದಿನದವರೆಗೆ ರೋಚಕವಾಗಿ ನಡೆಯುವಂತಾಗಬೇಕೆಂಬ ದೃಷ್ಟಿಯಲ್ಲಿ ಉತ್ತಮ ಪಿಚ್ ಸಿದ್ಧಪಡಿಸುವದರಲ್ಲಿ ಪೊನ್ನುಸ್ವಾಮಿ ಹೆಚ್ಚು ಪಳಗಿದ್ದರು ಎಂದು ಖ್ಯಾತ ಕ್ರಿಕೆಟ್ ಆಟಗಾರ ಮನಮೋಹನ ಸೂದ್ ಹೇಳಿದ್ದು ನೋಡಿದರೆ ಅವರ ಪಿಚ್ ಪ್ರವೀಣತೆಯನ್ನು ಊಹಿಸಬಹುದು.

ದೇಶದಲ್ಲಿ ಅನೇಕ ಪಿಚ್‌ಗಳನ್ನು ಸಿದ್ಧಪಡಿಸಿದ್ದ ಪೊನ್ನುಸ್ವಾಮಿಗೆ ಉತ್ತರಪ್ರದೇಶ ತಂಡಕ್ಕಾಗಿ ಸಿದ್ಧಪಡಿಸಿದ್ದ ಮೋಹನನಗರ ಪಿಚ್ ಎಂದರೆ ಎಲ್ಲಿಲ್ಲದ ಪ್ರೀತಿಯಿತ್ತು. ಈ ಮೈದಾನದಲ್ಲಿ ಉತ್ತರ ಪ್ರದೇಶ ೧೯೭೦ರ ದಶಕದಲ್ಲಿ ಸತತ ಮೂರು ಬಾರಿ ರಣಜಿ ನಾಕೌಟ್ ಹಂತ ತಲುಪಿದ ಸಾಧನೆ ಮಾಡಿತ್ತು.

ಇದೇ ಮೈದಾನದಲ್ಲಿ ಆತಿಥೇಯ ಉತ್ತರ ಪ್ರದೇಶ ರಣಜಿ ಫೈನಲ್ ತಲುಪಿ, ಪ್ರಶಸ್ತಿ ಗೆಲ್ಲಲಿ ಎಂಬುದು ಅವರ ಹೆಬ್ಬಯಕೆಯಾಗಿತ್ತು. ಆದರೆ ಅದನ್ನು ನೋಡುವ ಭಾಗ್ಯ ಅವರಿಗಿಲ್ಲವಾಯಿತು. ವಿಧಿ ಅವರ ಆಸೆ ಈಡೇರುವ ತನಕ ಕಾಯಲಿಲ್ಲ.

ಬೆಂಗಳೂರಿನಲ್ಲಿ ಜನಿಸಿದ ಪೊನ್ನುಸ್ವಾಮಿ ಅವರನ್ನು ೧೯೫೦ರ ದಶಕದಲ್ಲಿ ಸರ್ವೀಸಸ್ ಕ್ರಿಕೆಟ್ ಅಧಿಕಾರಿಗಳು ದೆಹಲಿಗೆ ಕರೆದೊಯ್ಯದಿದ್ದರೆ ಕರ್ನಾಟಕಕ್ಕೆ ಈ ಖ್ಯಾತ ಆಟಗಾರನ ಅಪೂರ್ವ ಕಾಣಿಕೆ ದೊರಕುತ್ತಿತ್ತೇನೋ! ಆದರೆ ಈ ಅಧಿಕಾರಿಗಳೊಂದಿಗೆ ತೆರಳಿದ ಪೊನ್ನುಸ್ವಾಮಿ ಬಹಳ ಕಾಲ ಅವರ ಜೊತೆಗೂ ಇರಲಿಲ್ಲ. ಮೇಲಾಗಿ ತಮ್ಮ ತವರಿಗೂ ಬರಲಿಲ್ಲ. ದಿಲ್ಲಿಯ ರೋಶನಾರಾ ಕ್ಲಬ್‌ವೊಂದರಲ್ಲಿ ಕೆಲಸ ಗಿಟ್ಟಿಸಿದ ಇವರು ದಿಲ್ಲಿಯಲ್ಲೇ ನೆಲಸಿದ್ದರು.

ಮೊದಲು ಬೌಲರ್ ರೂಪದಲ್ಲಿ ತಮ್ಮ ಕ್ರಿಕೆಟ್ ಜೀವನ ಮೆರೆದ ಸೀತಾರಾಮ ಅನಂತರ ಪಿಚ್ ಪರಿಣಿತರಾಗಿ ಸೇವೆ ಸಲ್ಲಿಸತೊಡಗಿದ್ದರು. ಅವರು ಕೊನೆಯುಸಿರೆಳೆಯುವ ಮುನ್ನ ವಿಶ್ವಕಪ್ ಕ್ರಿಕೆಟ್‌ಗಾಗಿ ಗ್ವಾಲಿಯರ್ ಪಿಚ್‌ಅನ್ನು ತಯಾರಿಸುವ ಸಿದ್ಧತೆಯಲ್ಲಿದ್ದರು.

ಪರಸ್ಪರ ದೋಷಾರೋಪಣೆಯ ಪರಿಸರದಲ್ಲಿ ಬೆಳೆಯುವ ಮಗು ತಿರಸ್ಕರಿಸುವುದನ್ನು ಕಲಿಯುತ್ತದೆ.
ಶತ್ರುತ್ವಪೂರ್ಣ ಪರಿಸರದಲ್ಲಿ ಬೆಳೆಯುವ ಮಗು ಜಗಳಗಂಟವಾಗುತ್ತದೆ.
ಹೀನತೆಯ ಪರಿಸರದಲ್ಲಿ ಬೆಳೆಯುವ ಮಗು ಆತ್ಮಗ್ಲಾನಿಯಿಂದ ಬಳಲುತ್ತದೆ.
ವ್ಯಂಗ್ಯಾತ್ಮಕ ಪರಿಸರದಲ್ಲಿಯ ಮಗು ಲಜ್ಜಾವಂತನಾಗುತ್ತಾನೆ.
ಉತ್ಸಾಹವರ್ಧಕ ಪರಿಸರದಲ್ಲಿಯ ಮಗು ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳುತ್ತದೆ.
ಸುರಕ್ಷಿತತೆಯ ಪರಿಸರದಲ್ಲಿ ಬೆಳೆಯುವ ಮಗು ವಿಶ್ವಾಸನೀಯವಾಗುತ್ತದೆ.
ಮಮತೆಯ ಪರಿಸರದಲ್ಲಿ ಬೆಳೆಯುವ ಮಗು ಸ್ನೇಹಶೀಲವಾಗುತ್ತದೆ.
ಸಹಿಷ್ಣುತೆಯ ಪರಿಸರದಲ್ಲಿ ಬೆಳೆಯುವ ಮಗುವು ಶಾಂತಸ್ವಭಾವದ್ದಾಗುತ್ತದೆ.
ಅತಿಯಾದ ಪ್ರೀತಿ-ಪ್ರೇಮದಲ್ಲಿ ಬೆಳೆಯುವ ಮಗುವು ಹಟಮಾರಿಯಾಗುತ್ತದೆ.

• ಸುಶೀಲಾ ಹಂದಿಗೋಳ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

---

೧. ಉದ್ಬೋಧಕ
(ಅ) ಬೆದರಿಸುವ
(ಆ) ಬೆಳಕುಕೊಡುವ
(ಇ) ತೊಂದರೆ ಕೊಡುವ
(ಈ) ಎಚ್ಚರವುಂಟು ಮಾಡುವ

೨. ಉದ್ಯೋತಿತ
(ಅ) ಬೆಳಗಿಸಲ್ಪಟ್ಟ
(ಆ) ಉತ್ತೇಜನಗೊಳಿಸಿದ
(ಇ) ತುಂಬ ದುಡಿಯುವ
(ಈ) ಮೇಲೇರಿದ

೩. ಉದ್ವಾಸಿತ
(ಅ) ನೆಲೆಯೂರಿದ
(ಆ) ಬೆಳಗಿದ
(ಇ) ಹೊರಗಟ್ಟಲ್ಪಟ್ಟ
(ಈ) ನಗೀಡಾದ

೪. ಕೃಪಣ
(ಅ) ಸಂನ್ಯಾಸಿ
(ಆ) ಕಳೆಗುಂದುವಿಕೆ
(ಇ) ಒಗೆಯಲ್ಪಡುವ ಅಸ್ತ್ರ
(ಈ) ವೆಚ್ಚ

೫. ಮಂತವ್ಯ
(ಅ) ಮೊಸರು
(ಆ) ಮಜ್ಜಿಗೆ
(ಇ) ವಿಚಾರಿಸಬೇಕಾದ್ದು
(ಈ) ಕಪ್ಪೆ

೬. ಕ್ಷಂತವ್ಯ
(ಅ) ನಾಶಹೊಂದುವಂಥದು
(ಆ) ಹೋಗಬೇಕಾದ ಸ್ಥಳ
(ಇ) ಭ್ರಮೆ
(ಈ) ಕ್ಷಮಿಸಬೇಕಾದ್ದು

೭. ನಿರ್ಭೇದಕ
(ಅ) ಒಡೆಯುವಂಥ
(ಆ) ಮುಂಗಾಣದಂತೆ ಮಾಡುವ
(ಇ) ಮರೆಸುವ
(ಈ) ಜೋಡಿಸುವ

೮. ದೇಶ್ಯ
(ಅ) ದಾರಿ ತೋರಿಸುವ
(ಆ) ಆ ದೇಶದ
(ಇ) ದೀಪ
(ಈ) ದಿಕ್ಕೆಟ್ಟ

೯. ನಿಸ್ತೀರ್ಣ
(ಅ) ದಾಟಿದ
(ಆ) ವಿಶಾಲ
(ಇ) ಹಾರಿಹೋದ
(ಈ) ದಾಟಲಾರದ

೧೦. ಅಭ್ಯರ್ಥಿ
(ಅ) ಅರ್ಥಬಲ್ಲ
(ಆ) ಸ್ವರ್ಗವನ್ನಪೇಕ್ಷಿಸುವ
(ಇ) ಉಮೇದುವಾರ
(ಈ) ಸಂತೋಷಗೊಂಡ

೧೧. ಪ್ರತ್ಯರ್ಥಿ
(ಅ) ಭಿಕ್ಷುಕ
(ಆ) ಎದುರಾಳಿ
(ಇ) ಬೇಜವಾಬ್ದಾರ
(ಈ) ದುಃಖ

೧೨. ಪ್ರಶಮನ
(ಅ) ನೀರು ಕುಡಿಯುವುದು
(ಆ) ಕಾಲು ತೊಳೆಯುವುದು
(ಇ) ಪುನರ್ಜನ್ಮ
(ಈ) ಶಾಂತಗೊಳಿಸುವುದು

## ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ಉದ್ಬೋಧಕ

(ಈ) ಎಚ್ಚರವುಂಟು ಮಾಡುವ, ಆದ್ದರಿಂದ ತಿಳಿವಳಿಕೆಯುಂಟುಮಾಡುವ, ಜ್ಞಾನದಾಯಕ. ಉದಾ- ಅವನ ಭಾಷಣ ಉದ್ಬೋಧಕವಾಗಿತ್ತು. (ಸಂ. ಉತ್ ಮೇಲೆ, ಬೋಧಕ = ಎಚ್ಚರಿಸುವ)

೨. ಉದ್ದ್ಯೋತಿತ

(ಅ) ಬೆಳಗಿಸಲ್ಪಟ್ಟ, ಪ್ರಕಾಶಿತ, ಉರಿಸಲಾಗದ. ಉದಾ- ಅವನ ಕಣ್ಣುಗಳು ಕಾಂತಿಯಿಂದ ಉದ್ದ್ಯೋತಿತವಾಗಿತ್ತು. (ಸಂ. ಉತ್ = ಮೇಲೆ, ದ್ಯೋತಿತ = ಬೆಳಗಿಸಲ್ಪಟ್ಟ)

೩. ಉದ್ವಾಸಿತ

(ಇ) ಹೊರಗಟ್ಟಲ್ಪಟ್ಟ, ದೇಶದಿಂದ ಹೊರಗೆ ಹಾಕಲ್ಪಟ್ಟ. ಉದಾ- ಪಾಕಿಸ್ತಾನದಿಂದ ಉದ್ವಾಸಿತ ರಾದ ಹಿಂದುಗಳು. (ಸಂ.ಉತ್ = ಹೊರಗೆ, ವಾಸಿತ = ನೆಲೆಯಾದ

೪. ಕ್ಷಿಪಣಿ

(ಇ) ಒಗೆಯಲ್ಪಡುವ ಅಸ್ತ್ರ, ದೂರದಿಂದ ಬೀಸಿ ಒಗೆದ ಆಯುಧ, ಬಾರುಕೋಲಿನ ಹೊಡೆತ; ಚುಕ್ಕಾಣಿ. (ಸಂ. = ಕ್ಷಿಪ್ = ಒಗೆ, ಹಾಕು ಎಂಬುದರಿಂದ)

೫. ಮಂತವ್ಯ

(ಇ) ವಿಚಾರಿಸಬೇಕಾದ್ದು, ಚಿಂತಿಸತಕ್ಕದ್ದು, ಒಪ್ಪಿಗೆ ಪಡೆಯಬೇಕಾದ್ದು. ಉದಾ- ಅವನ ಮಂತ ವ್ಯಕ್ಕೆ ಸಭೆ ಒಪ್ಪಲಿಲ್ಲ (ಸಂ. ಮನ್ = ವಿಚಾರಿಸು ಎಂಬುದರಿಂದ).

೬. ಕ್ಷಂತವ್ಯ.

(ಈ) ಕ್ಷಮಿಸಬೇಕಾದ್ದು, ಕ್ಷಮಿಸಬಹುದಾದದ್ದು, ಸಹಿಸಬಹುದಾದ್ದು, ಉದಾ- ಈ ಅಪರಾಧ ಕ್ಷಂತವ್ಯವಾಗಿದೆ. (ಸಂ. ಕ್ಷಮ್ = ಕ್ಷಮಿಸು ಎಂಬುದರಿಂದ)

೭. ನಿರ್ಭೇದಕ

(ಇ) ಒಡೆಯುವಂಥ, ಕೊರೆಯುವಂಥ, ಭೇದಿಸುವಂಥ, ಉದಾ- ಆ ಕೂಗು ಗರ್ಭನಿರ್ಭೇ ದಕವಾಗಿತ್ತು. (ಸಂ. ನಿರ್ = ಹೆಚ್ಚಾಗಿ, ಭೇದಕ ಒಡೆಯುವ.)

೮. ದೇಶ್ಯ

(ಆ) ಆ ದೇಶದ, ಆ ನಾಡಿನ. ಉದಾ: ದೇಶ್ಯ ಶಬ್ದಗಳು ಅಂದರೆ ಅದೇ ದೇಶದ ಶಬ್ದಗಳು, ಪರದೇಶದವಲ್ಲ. (ದೇಶ ಎಂಬುದರಿಂದ)

೯. ನಿಸ್ತೀರ್ಣ

(ಅ) ದಾಟಿದ, ಪಾರಾಗಿಹೋದ. ಉದಾ- ಸಂಕಟದಿಂದ ನಿಸ್ತೀರ್ಣನಾಗಿ, (ಸಂ.ನಿಸ್ = ವಿಶೇಷ, ತೀರ್ಣ = ದಾಟಿದ.)

೧೦. ಅಭ್ಯರ್ಥಿ

(ಇ) ಉಮೇದುವಾರ, ಅಪೇಕ್ಷೆ ಪಡುವಾತ. ಉದಾ- ಒಂದೇ ಹೆಣ್ಣಿಗೆ ನಾಲ್ವರು ಅಭ್ಯರ್ಥಿಗಳು ಬಂದರು. (ಸಂ. ಅಭಿ = ಎದುರು ಅರ್ಥಿ = ಬೇಡುವವ.)

೧೧. ಪ್ರತ್ಯರ್ಥಿ

(ಆ) ಎದುರಾಳಿ, ವಿರೋಧಿ, ಶತ್ರು ನ್ಯಾಯಾ ಲಯದಲ್ಲಿ ಆರೋಪಕ್ಕೊಳಗಾದವ, ಪ್ರತಿವಾದಿ. (ಸಂ. ಪ್ರತಿ = ಎದುರು, ಅರ್ಥಿ = ಅಪೇಕ್ಷೆಯು ಳ್ಳವ)

೧೨. ಪ್ರಶಮನ

(ಈ) ಶಾಂತಗೊಳಿಸುವುದು, ಸಮಾಧಾನಗೊ ಳ್ಳುವುದು; ಗುಣಪಡಿಸುವುದು. (ಸಂ. ಪ್ರ = ಹೆಚ್ಚಾಗಿ, ಶಮನ = ಶಾಂತಗೊಳಿಸುವುದು.)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬-೮ ಸರಿಯಿದ್ದರೆ | ... | ಸಾಧಾರಣ |
| ೯-೧೦ ಸರಿಯಿದ್ದರೆ | ... | ಉತ್ತಮ |
| ೧೧-೧೨ ಸರಿಯಿದ್ದರೆ | ... | ಅತ್ಯುತ್ತಮ |

ತನಿಖಾ ವಿಜ್ಞಾನ

# ವಂಚಕನ ಸೆರೆಗೆ ಶಾಯಿಯ ಪರೀಕ್ಷೆ

• ಎ.ಓ. ಆವಲ ಮೂರ್ತಿ

ಬರವಣಿಗೆ ರೂಪದ ಯಾವುದೇ ದಾಖಲೆ ಪತ್ರವನ್ನು ಅಕ್ರಮವಾಗಿ ತಿದ್ದಿ ಅಥವಾ ಹೊಸ ಪದಗಳನ್ನು ಸೇರಿಸಿ ವಂಚನೆ ಮಾಡುವ ಪ್ರಯತ್ನಗಳು ಆಗಾಗ ನಡೆಯುತ್ತಲೇ ಇರುತ್ತವೆ. ಒಂದು ದಾಖಲೆ - ಹೀಗೆ ವಿವಾದಕ್ಕೊಳಗಾದಾಗ ಅದರ ಸಿಂಧುತ್ವವನ್ನು ಖಚಿತಪಡಿಸಿಕೊಳ್ಳಲು ಸಾಮಾನ್ಯವಾಗಿ ಅದನ್ನು ಕೈ ಬರಹ ಪರಿಣಿತರಿಗೆ ಒಪ್ಪಿಸಲಾಗುತ್ತದೆ. ಕೈ ಬರಹದಲ್ಲಿ ಏನಾದರೂ ವ್ಯತ್ಯಾಸ ಕಂಡುಬಂದಲ್ಲಿ ದಾಖಲೆಯನ್ನು ಬದಲಿಸಲಾಗಿದೆ ಎಂಬ ತೀರ್ಮಾನಕ್ಕೆ ಬರಲಾಗುತ್ತದೆ. ಆದರೆ ಕೆಲವೊಮ್ಮೆ ಅಕ್ರಮವಾಗಿ ಮಾಡಲಾದ ತಿದ್ದುಪಾಟು ತುಂಬಾ ಕಡಿಮೆ ಇದ್ದು, ಅವುಗಳನ್ನು ನಿಪುಣತೆಯಿಂದ ಮಾಡಿದ್ದರೆ, ಅಂಥವುಗಳನ್ನು ಕೈ ಬರಹ ಪರಿಣಿತರು ಕಂಡುಹಿಡಿಯುವುದು ಅಸಾಧ್ಯವಾಗುತ್ತದೆ. ಅಂಥ ಸಂದರ್ಭಗಳಲ್ಲಿ ದಾಖಲೆಯ ಸಾಚಾತನವನ್ನು ಖಚಿತಪಡಿಸಿಕೊಳ್ಳಲು 'ಶಾಯಿ ಪರೀಕ್ಷೆ'ಯೊಂದೇ ಸೂಕ್ತ ಕ್ರಮ.

ಬರವಣಿಗೆ ರೂಪದ ಯಾವುದೇ ದಾಖಲೆಯನ್ನು ಸಿದ್ಧಪಡಿಸಲು ಕಾಗದ-ಶಾಯಿಗಳೆರಡೂ ಬೇಕೇಬೇಕಲ್ಲವೆ? ಖಾಲಿ ಕಾಗದದ ಮೇಲೆ ಮೂಡಿಸಿದ ಮಸಿಯ ಅಕ್ಷರ ಸಮೂಹವೇ ಇಂದಿಗೂ ನಿಜಾರ್ಥದಲ್ಲಿ ದಾಖಲೆ ಎನಿಸಿಕೊಳ್ಳುತ್ತದೆ.

ನಾವು ಸಾಮಾನ್ಯವಾಗಿ ಉಪಯೋಗಿಸುವ ಫೌಂಟೇನ್‌ಪೆನ್ ಅಥವಾ ಬಾಲ್ ಪಾಯಿಂಟ್ ಪೆನ್ನಿನ ಎಲ್ಲಾ ಶಾಯಿಗಳೂ ಒಂದೇ ಎಂದು ಭಾವಿಸುತ್ತೇವೆ. ಬಣ್ಣ ಒಂದೇ ಇದ್ದರಂತೂ ಮುಗಿದೇಹೋಯಿತು. ಆದರೆ ವಾಸ್ತವವಾಗಿ ಯಾವುದೇ ಎರಡು ಇಂಕುಗಳು ಒಂದೇ ತರಹ ಇರುವುದಿಲ್ಲ. ರಾಸಾಯನಿಕವಾಗಿ ಅವುಗಳಲ್ಲಿ ವ್ಯತ್ಯಾಸವಿದ್ದೇ ಇರುತ್ತದೆ. ಹಲವಾರು ಘಟಕಾಂಶಗಳು ಸೇರಿ ಶಾಯಿ ಸಿದ್ಧವಾಗಿರುತ್ತದೆ. ಈ ಘಟಕಾಂಶಗಳ ಗುಣಮಟ್ಟ, ಸಂಯೋಜನೆ, ರಚನೆ, ಪ್ರಮಾಣ ಇತ್ಯಾದಿಗಳಲ್ಲಿ ಒಂದು ಶಾಯಿ ಮತ್ತೊಂದು ಶಾಯಿಗಿಂತ ಭಿನ್ನವಾಗಿರುತ್ತದೆ. ಈ ಭಿನ್ನತೆಯೇ ಶಾಯಿ ಪರೀಕ್ಷೆಯಲ್ಲಿ ನೆರವಾಗುವ ಅಂಶ.

ಎರಡು ಸೀಸೆಗಳಲ್ಲಿ ಬೇರೆ ಬೇರೆ ಶಾಯಿಗಳನ್ನು ಸಾಕಷ್ಟು ಪ್ರಮಾಣದಲ್ಲಿ ತುಂಬಿಸಿಟ್ಟರೆ ಅವುಗಳ ನಡುವಿನ ವ್ಯತ್ಯಾಸವನ್ನು ಒಬ್ಬ ಅನುಭವಿ ಕೆಮಿಸ್ಟ್ ಸುಲಭವಾಗಿ ಪತ್ತೆ ಹಚ್ಚಬಲ್ಲ. ಆದರೆ ಎಂದೋ ಕಾಗದದ ಮೇಲೆ ಬರೆದ ಅಕ್ಷರಗಳ ಮಸಿಯಲ್ಲಿ ವ್ಯತ್ಯಾಸವನ್ನು ಕಂಡುಹಿಡಿಯುವುದು ಸುಲಭವಲ್ಲ. ಏಕೆಂದರೆ ಇಲ್ಲಿ ಮಸಿಯ ಪ್ರಮಾಣ ಸೂಕ್ಷ್ಮಾತಿಸೂಕ್ಷ್ಮವಾಗಿರುತ್ತದೆ ಮತ್ತು ಕಾಗದದ ಮೇಲಿನ ಮಸಿಯನ್ನು ಪರೀಕ್ಷೆಗಾಗಿ ಬೇರ್ಪಡಿಸುವುದು ಅಷ್ಟೇನೂ ಸಲೀಸು ಕೆಲಸವಲ್ಲ. ಆದರೆ ವೈದ್ಯ ನ್ಯಾಯಶಾಸ್ತ್ರ

(Forensic Medicine) ಪರಿಣಿತರಿಗೆ ಇದು ಅಸಾಧ್ಯವಾದದ್ದೇನಲ್ಲ, ಇಲ್ಲಿ ಅವರು ತುಂಬಾ ಸೂಕ್ಷ್ಮವಾದ ತಂತ್ರವನ್ನು ಬಳಸಿ ಎರಡು ಮಸಿ ಮಾದರಿಗಳ ನಡುವಿನ ವ್ಯತ್ಯಾಸವನ್ನು ಕಂಡುಹಿಡಿಯಬಲ್ಲರು. ಅದನ್ನು ತೆಳುಪದರ ವರ್ಣಕ ಲೇಖನ (Thin Layer Chromatography-TLC) ಎಂದು ಕರೆಯುತ್ತಾರೆ.

ಬೇರೆ ಬೇರೆ ಸಂಯುಕ್ತಗಳು ಶೋಷಕದಂತೆ ವರ್ತಿಸುವ ಒಂದು ಮೇಲ್ಮೈಗೆ ಬೇರೆ ಬೇರೆ ಬಲದಿಂದ ಅಂಟಿಕೊಂಡಿರುತ್ತವೆ- ಕೆಲವು ಹೆಚ್ಚು ಗಟ್ಟಿಯಾಗಿ ಕೆಲವು ಕಡಿಮೆ ಗಟ್ಟಿಯಾಗಿ. ಕಡಿಮೆ ಗಟ್ಟಿಯಾಗಿ ಅಂಟಿಕೊಂಡ ಸಂಯುಕ್ತವು ಒಂದು ದ್ರಾವಕದಲ್ಲಿ ಬಹುಬೇಗ ಕರಗಿ ಹೆಚ್ಚಿನ ಪ್ರಮಾಣದಲ್ಲಿ ಮೇಲ್ಮೈಯಿಂದ ಬಿಡುಗಡೆಹೊಂದುತ್ತದೆ. ಅದೇ ಹೆಚ್ಚು ಗಟ್ಟಿಯಾಗಿ ಅಂಟಿಕೊಂಡ ಸಂಯುಕ್ತವು ದ್ರಾವಕದಲ್ಲಿ ಬೇಗನೆ ಕರಗುವುದಿಲ್ಲ ಮತ್ತು ಹೆಚ್ಚಿನ ಪ್ರಮಾಣದಲ್ಲಿ ಮೇಲ್ಮೈಯಿಂದ ಬಿಡುಗಡೆ ಹೊಂದುವುದಿಲ್ಲ.

ಚಿತ್ರ ೧ ರಲ್ಲಿ ತೋರಿಸಿರುವಂತೆ ABCD ಸಿಲಿಕಾಜೆಲ್ ಸವರಿದ ಒಂದು ಗಾಜಿನ ಫಲಕ. X ಬಿಂದುವಿನಲ್ಲಿ M ಸಂಯುಕ್ತದ ಒಂದು ಚಿಕ್ಕ ಹನಿಯನ್ನು, Y ಬಿಂದುವಿನಲ್ಲಿ N ಸಂಯುಕ್ತದ ಚಿಕ್ಕ ಹನಿಯನ್ನು ಇರಿಸಿದೆ. ಸಂಯುಕ್ತ M ಸಿಲಿಕಾಜೆಲ್‌ಗೆ ಸಂಯುಕ್ತ Nಗಿಂತಲೂ ಬಲವಾಗಿ ಅಂಟಿಕೊಂಡಿದೆ. ಈಗ ಗಾಜಿನ ಫಲಕವನ್ನು ಲಂಬವಾಗಿ ಒಂದು ದ್ರಾವಕದಲ್ಲಿ ಇಳಿಬಿಟ್ಟಾಗ M ಮತ್ತು N ಸಂಯುಕ್ತಗಳು ಕರಗುತ್ತವೆ. ಅದೇ ಕಾಲಕ್ಕೆ ದ್ರಾವಕವು ಲೋಮನಾಳತ್ವ ಕ್ರಿಯೆಯಿಂದ ಮೇಲೇರಲು ಪ್ರಾರಂಭಿಸುತ್ತದೆ. ಹೀಗೆ ಮೇಲೇರುವ ಪ್ರಕ್ರಿಯೆಯಲ್ಲಿ ಅದು ಕರಗಿದ M ಮತ್ತು N ಸಂಯುಕ್ತಗಳನ್ನು ತನ್ನೊಡನೆ ಕೊಂಡೊಯ್ಯುತ್ತದೆ. ಈ ಸಂಯುಕ್ತಗಳು ಸಿಲಿಕಾಜೆಲ್‌ಗೆ ಬೇರೆ ಬೇರೆ ಬಲದಿಂದ ಅಂಟಿಕೊಂಡಿವೆಯಾದ್ದರಿಂದ ಅವು ಗಾಜಿನ ಫಲಕದ ಮೇಲೆ ಬೇರೆ ಬೇರೆ ರೀತಿಯಲ್ಲಿ ಚಲಿಸುತ್ತವೆ. ಸಂಯುಕ್ತ M ನಿಧಾನವಾಗಿ ಚಲಿಸುತ್ತದೆ. ಏಕೆಂದರೆ ಅದು ಹೆಚ್ಚು ಬಲಿಷ್ಠವಾಗಿ ಸಿಲಿಕಾಜೆಲ್‌ಗೆ ಅಂಟಿಕೊಂಡಿದೆ. ಸಂಯುಕ್ತ N ಸ್ವಲ್ಪ ವೇಗವಾಗಿ ಚಲಿಸುತ್ತದೆ.



ಚಿತ್ರ ೧:




ನೀಲಿ ಬಣ್ಣದ ಎಂಟು ಬೇರೆ ಬೇರೆ ಬಾಲ್ ಪಾಯಿಂಟ್ ಶಾಯಿಯ ತೆಳುಪದರ ವರ್ಣಕ ಲೇಖನ

ಏಕೆಂದರೆ ಅದು ಹೆಚ್ಚು ಬಲಿಷ್ಠವಾಗಿ ಸಿಲಿಕಾಜೆಲ್‌ಗೆ ಅಂಟಿಕೊಂಡಿಲ್ಲ. ಹೀಗಾಗಿ, ದ್ರಾವಕವು ಮಟ್ಟಕ್ಕೆ ಬಂದಾಗ ಸಂಯುಕ್ತ M ಕೇವಲ H ಮಟ್ಟಕ್ಕೆ ಏರಿರುತ್ತದೆ. ಅದೇ N ಸಂಯುಕ್ತವು I ಮಟ್ಟಕ್ಕೆ ಏರಿರುತ್ತದೆ. ಹಲವು ಸಂಯುಕ್ತಗಳಿಂದ ಕೂಡಿದ ಮಿಶ್ರಣವೊಂದರ ಮೇಲೆ ಇದೇ ತಂತ್ರವನ್ನು ಪ್ರಯೋಗಿಸಿದರೆ ಏನಾಗುತ್ತದೆ? ಮಿಶ್ರಣದ ವಿವಿಧ ಘಟಕಾಂಶಗಳು ಬೇರ್ಪಟ್ಟು, ತಮಗೇ ವಿಶಿಷ್ಟವಾದ ರೀತಿಯಲ್ಲಿ ಚಲಿಸಿ, ಮಿಶ್ರಣಕ್ಕೆ ಅನುರೂಪವಾದ ಜಾಡನ್ನು ಮೂಡಿಸುತ್ತದೆ. ಇದು ಆ ಮಿಶ್ರಣದ ತೆಳುಪದರ ವರ್ಣಕ ಲೇಖನ.

ನೀಲಿ ಬಣ್ಣದ ಎಂಟು ಬೇರೆ ಬೇರೆ ಬಾಲ್ ಪಾಯಿಂಟ್ ಶಾಯಿಗಳ ತೆಳುಪದರ ವರ್ಣಕ ಲೇಖನ ಬೇರ್ಪಡೆಯನ್ನು ಚಿತ್ರ ೨ ರಲ್ಲಿ ತೋರಿಸಿದೆ. ಶಾಯಿಯ ಪ್ರತಿ ಮಾದರಿಯೂ ಒಂದೊಂದು ವಿಶಿಷ್ಟ ಜಾಡನ್ನು ಮೂಡಿಸಿದೆ. ಪ್ರತಿ ಜಾಡಿನಲ್ಲೂ ಹಲವಾರು ಕಪ್ಪು ಪಟ್ಟಿಗಳು ಬೇರೆ ಬೇರೆ ಅಂತರದಲ್ಲಿ ಮತ್ತು ರೂಪದಲ್ಲಿ ಇರುವುದನ್ನು ಗಮನಿಸಬಹುದು. ಇವು ಆಯಾ ಬಾಲ್ ಪಾಯಿಂಟ್ ಮಸಿಯಲ್ಲಿರುವ ವಿವಿಧ ಘಟಕಾಂಶಗಳು ಬೇರೆ ಬೇರೆ ರೀತಿಯಲ್ಲಿ ಚಲಿಸಿರುವುದರ ಗುರುತುಗಳು. ಎಲ್ಲ ಬಾಲ್ ಪಾಯಿಂಟ್ ಶಾಯಿಗಳು ಬೇರೆ ಬೇರೆ ಘಟಕಾಂಶಗಳನ್ನು ಹೊಂದಿರುವುದರಿಂದ ಅವುಗಳು ಉಂಟುಮಾಡಿರುವ ಜಾಡಿನ ಪರಿ ಬೇರೆ ಬೇರೆಯಾಗಿದೆ. ಒಂದರ್ಥದಲ್ಲಿ ಈ ಜಾಡುಗಳು ಆಯಾ ಶಾಯಿಯ ಸಹಿ ಇದ್ದಂತೆ.

ಬರವಣಿಗೆ ರೂಪದ ದಾಖಲೆಗಳಿಂದ ಮಸಿಯನ್ನು ಅಧೋತ್ವಚೀಯ (ಹೈಪೋಡರ್ಮಿಕ್) ಸೂಜಿಯಿಂದ ಎತ್ತಿಕೊಳ್ಳಬಹುದು. ಅಭ್ಯಾಸ ಬಲದಿಂದ ಇದನ್ನು ಸುಲಭವಾಗಿ ಮಾಡಬಹುದು. ವಿವಾದಗ್ರಸ್ತ ದಾಖಲೆಯ ಅನುಮಾನಿತ ಭಾಗಗಳಿಂದ ಒಮ್ಮೆ ಮಸಿಯನ್ನು ಎತ್ತಿಕೊಂಡರೆ ಮುಂದಿನ ಕೆಲಸ ಸುಲಭ. ತೆಳುಪದರ ವರ್ಣಕ ಲೇಖನ ತಂತ್ರವನ್ನು ಪ್ರಯೋಗಿಸಿ ದಾಖಲೆಯ ಋಜುತ್ವವನ್ನು ಖಚಿತಪಡಿಸಿಕೊಳ್ಳಬಹುದು.

ತೆಳುಪದರ ವರ್ಣಕ ಲೇಖನ ತಂತ್ರವನ್ನು ಉಪಯೋಗಿಸಿ, ಅಕ್ರಮವಾಗಿ ತಿದ್ದಲಾದ ಉಯಿಲನ್ನು ಶಾಯಿ ಪರೀಕ್ಷೆಯಿಂದ ಪತ್ತೆ ಹಚ್ಚಿ ವಂಚಕನ ಸೆರೆಗೆ ನೆರವಾದ ಸ್ವಾರಸ್ಯಕರ ಪ್ರಕರಣವೊಂದನ್ನು ಹೊಸದೆಹಲಿಯ ಮೌಲಾನಾ ಆಜಾದ್ ವೈದ್ಯಕೀಯ ಕಾಲೇಜಿನಲ್ಲಿ ವೈದ್ಯನ್ಯಾಯಶಾಸ್ತ್ರದ ಪ್ರೊಫೆಸರ್ ಆಗಿರುವ ಡಾ. ಅನಿಲ್ ಅಗರ್‌ವಾಲ್ ಅವರು ಈಚಿನ 'ಸೈನ್ಸ್ ರಿಪೋರ್ಟರ್'ನಲ್ಲಿ ವಿವ

ರಿಸಿದ್ದಾರೆ.

ಹೆಸರುಗಳನ್ನು ಬದಲಿಸಿ ಪ್ರಕಟಿಸಲಾಗಿರುವ ಈ ಪ್ರಕರಣದಲ್ಲಿ ಚಮನ್‌ದಾಸ್ ೬೭ ವರ್ಷದ ಕೋಟ್ಯಧೀಶ. ಉಯಿಲು ಬರೆದು ತೀರಿಕೊಂಡಿದ್ದಾರೆ. ಅವರ ಅಪಾರ ಆಸ್ತಿಗೆ ನಾಲ್ಕು ಜನ ವಾರಸುದಾರರು. ಒಬ್ಬ ರಮೇಶ್, ಮೊದಲ ಪತ್ನಿಯ ಮಗ. ಉಳಿದ ಮೂವರು: ಎರಡನೆ ಹೆಂಡತಿ ಚಮೇಲಿ ಮತ್ತು ಆಕೆಯ ಇಬ್ಬರು ಮಕ್ಕಳು (ರಾಧಾ ಮತ್ತು ಮನು).

ಚಮನ್‌ದಾಸ್ ಬರೆದಿದ್ದ ಉಯಿಲಿನ ಪ್ರಕಾರ ಅವರ ಒಟ್ಟು ಆಸ್ತಿಯ ಶೇಕಡಾ ೭೫ ಭಾಗ ರಮೇಶ್‌ಗೆ ಸೇರಬೇಕು. ಬಾಕಿ ಶೇಕಡಾ ೨೫ ಭಾಗವನ್ನು ಉಳಿದ ಮೂವರು ವಾರಸುದಾರರಿಗೆ (ಚಮೇಲಿ, ರಾಧಾ ಮತ್ತು ಮನು) ಸಮನಾಗಿ ಹಂಚಬೇಕು.

ಉಯಿಲನ್ನು ಜಾರಿಗೊಳಿಸಲು ಅದನ್ನು ತೆರೆದಾಗ ಉಯಿಲಿಗೆ ಸಾಕ್ಷಿ ಹಾಕಿದ್ದ ಚಮನ್‌ದಾಸರ ಆಪ್ತ ಮಿತ್ರ ಜಾನಕೀದಾಸ್ ಉಯಿಲಿನಲ್ಲಿ ಬದಲಾವಣೆಯಾಗಿದೆ ಎಂದು ತಕರಾರು ತೆಗೆದರು. ದಾರಿ ಕಾಣದೆ ಪೊಲೀಸರು ಉಯಿಲನ್ನು ಕೈಬರಹ ತಜ್ಞರಿಗೆ ಕಳಿಸಿದರು. ಕೈಬರಹ ತಜ್ಞರು ಉಯಿಲಿನಲ್ಲಿ ಯಾವುದೇ ತಿದ್ದುಪಾಟು ಅಥವಾ ಬದಲಾವಣೆಯನ್ನು ಪತ್ತೆ ಹಚ್ಚಲಾಗದೆ ಅದನ್ನು ಹಿಂದಿರುಗಿಸಿದರು. ಕೊನೆಯ ಯತ್ನವೆಂಬಂತೆ ಪೊಲೀಸರು ಉಯಿಲನ್ನು ಪ್ರೊ. ಅನಿಲ್ ಆಗರ್‌ವಾಲ್‌ರ ಬಳಿಗೆ ಕೊಂಡೊಯ್ದರು.

ಉಯಿಲಿಗೆ ಸಾಕ್ಷಿಯಾಗಿದ್ದ ಇಬ್ಬರು ಸಾಕ್ಷಿದಾರರು ಅದು ಒಂದೇ ಸಲಕ್ಕೆ ಒಂದೇ ಪೆನ್ನಿನಿಂದ ಬರೆಯಲ್ಪಟ್ಟಿತ್ತು ಎಂದು ಹೇಳಿಕೆ ನೀಡಿದ್ದರು. ಹಾಗೆ ಇಡಿಯಾಗಿ ಒಂದೇ ಸಲಕ್ಕೆ ಒಂದೇ ಪೆನ್ನಿನಿಂದ ಬರೆದಿದ್ದರೆ, ಉಯಿಲಿನ ಎಲ್ಲ ಸಾಲುಗಳ ಮಸಿ ಮಾದರಿಗಳು ಒಂದೇ ಜಾಡನ್ನು ಮೂಡಿಸಬೇಕು. ಒಂದು ವೇಳೆ ಉಯಿಲಿನ ಕೆಲವೇ ಕೆಲವು ನಿರ್ದಿಷ್ಟ ಪದ ಅಥವಾ ಪದಗುಚ್ಛವನ್ನು ಅಳಿಸಿ ಹೊಸ ಪದಗಳನ್ನು ಸೇರಿಸಿದ್ದರೆ ಆಗ ಹೊಸ ಪದಗಳನ್ನು ಬೇರೆಯೆ ಪೆನ್ನಿನಿಂದ (ಅಪರಾಧಿಯ

ಸ್ವಂತ ಪೆನ್ನಿನಿಂದ) ಬರೆದಿರುವ ಸಾಧ್ಯತೆ ಇರುತ್ತದೆ. ಈ ಪದಗಳಿಂದ ತೆಗೆದ ಮಸಿಯ ಮಾದರಿಯು ಉಯಿಲಿನ ಉಳಿದ ಭಾಗದಿಂದ ತೆಗೆದ ಮಸಿಯ ಮಾದರಿಗಿಂತ ಭಿನ್ನವೇ ಆದ ಜಾಡನ್ನು ಮೂಡಿಸುತ್ತದೆ.

ಡಾ. ಅಗರ್‌ವಾಲರು ತಮ್ಮ ಅಧೋತ್ವಚೀಯ ಸೂಜಿಯಿಂದ ಉಯಿಲಿನ ಬೇರೆ ಬೇರೆ ಜಾಗಗಳಿಂದ - ವಿವಾದಾತ್ಮಕ ಪದಗಳಿಂದ ಮತ್ತು ಅಧಿಕೃತವೆಂದು ಒಪ್ಪಲಾದ ಭಾಗಗಳಿಂದ - ಮಸಿಯ ಮಾದರಿಯನ್ನು ಎತ್ತಿಕೊಂಡು ತೆಳುಪದರ ವರ್ಣಕ ಲೇಖನ ಪರೀಕ್ಷೆಗೆ ಒಳಪಡಿಸಿದರು. ಆಶ್ಚರ್ಯಕ್ಕೆ ಎರಡು ಭಿನ್ನ ರೂಪದ ಜಾಡುಗಳು ಮೂಡಿದವು. ಅಂದರೆ ಬೇರೆ ಬೇರೆ ಪೆನ್ನುಗಳನ್ನು ಉಪಯೋಗಿಸಲಾಗಿತ್ತು ಎಂಬುದು ಖಚಿತವಾಯಿತು.

ಚಮನ್‌ದಾಸರೇ ಎರಡು ಪೆನ್ನುಗಳನ್ನು ಬಳಸಿದ್ದಿರಬಹುದಲ್ಲವೆ? ಆದರೆ ಅವರು ಉಯಿಲು ಬರೆಯುವಾಗ ಎರಡನೆ ಪೆನ್ನು ಉಪಯೋಗಿಸುವುದು ಮೊದಲನೆ ಪೆನ್ನಿನಲ್ಲಿ ಮಸಿ ತೀರಿದಾಗ ಅಥವಾ ಅದು ಕೆಟ್ಟಾಗ ಮಾತ್ರ. ಹಾಗಾದಾಗ ಉಯಿಲಿನ ಒಂದು ಭಾಗ (ಮೇಲ್ಭಾಗ) ಪೂರ್ತಿ ಒಂದು ಶಾಯಿಯಲ್ಲಿ ಮತ್ತೊಂದು ಭಾಗ (ಕೆಳಭಾಗ) ಪೂರ್ತಿ ಮತ್ತೊಂದು ಶಾಯಿಯಲ್ಲಿ ಬರೆದಿರಬೇಕಾಗುತ್ತದೆ. ಆದರೆ ಈ ಪ್ರಕರಣದಲ್ಲಿ ಉಯಿಲಿನ ಎಲ್ಲ ಸಾಲುಗಳನ್ನು ಒಂದು ಶಾಯಿಯಿಂದ ಬರೆದಿದ್ದು ವಾರಸುದಾರರ ಹೆಸರುಗಳನ್ನು ಒಳಗೊಂಡಂತೆ ಕೆಲವೊಂದು ಮುಖ್ಯ ಪದಗಳನ್ನು ಮಾತ್ರ ಬೇರೆ ಮಸಿಯಿಂದ ಬರೆದಿರುವುದು ತೆಳು ಪದರ ವರ್ಣಕ ಲೇಖನ ಪರೀಕ್ಷೆಯಿಂದ ಖಾತರಿಯಾಯಿತು. ಇದು ಎರಡನೆ ಹೆಂಡತಿ ಚಮೇಲಿಯ ಮಗ ಮನುವಿನ ಮೇಲೆ ಅನುಮಾನ ಉಂಟಾಗುವಂತೆ ಮಾಡಿತು. ಪೊಲೀಸರ ಶೋಧದಿಂದ ಮನುವಿನ ಬಳಿ ಎರಡು ಪೆನ್ನುಗಳಿದ್ದುದು ಕಂಡು ಬಂದಿತು. ಈ ಎರಡು ಪೆನ್ನುಗಳ ಮಸಿಗಳನ್ನು ಮೇಲಿನ ಪರೀಕ್ಷೆಗೆ ಒಳಪಡಿಸಿದಾಗ ಎರಡರ ಪೈಕಿ ಒಂದು ಪೆನ್ನಿನ ಮಸಿ ವಿವಾದಾತ್ಮಕ ಪದಗಳಿಂದ ತೆಗೆದ ಮಸಿ ನೀಡಿದ್ದಂಥ ಜಾಡನ್ನೇ ಮೂಡಿಸಿತು. ಹೀಗೆ ಅನುಮಾನಕ್ಕೆಡೆಯಿಲ್ಲದಂತೆ ಮನುವೇ ತನ್ನ ಒಂದು ಪೆನ್ನಿನಿಂದ ಉಯಿಲನ್ನು ಅಕ್ರಮವಾಗಿ ತಿದ್ದಿದ್ದನೆಂಬುದು ಸಾಬೀತಾಯಿತು. ವೈಜ್ಞಾನಿಕ ಪುರಾವೆಯ ಎದುರು ಮಾತನಾಡಲಾಗದ ಮನು ತನ್ನ ತಪ್ಪನ್ನು ಒಪ್ಪಿಕೊಂಡ. ತಾಯಿ (ಚಮೇಲಿ) ಮತ್ತು ತಂಗಿ (ರಾಧಾ) ಅವರ ಒತ್ತಾಯಕ್ಕೆ ಮಣಿದು ತಾನು ಹೀಗೆ ಮಾಡಿದ್ದೆ ಎಂದ. ನ್ಯಾಯಾಲಯ ಡಾ. ಅಗರ್‌ವಾಲರ ಸಾಕ್ಷ್ಯವನ್ನು ಮಾನ್ಯಮಾಡಿ ಮೂವರೂ ಅಪರಾಧಿಗಳನ್ನು ಜೈಲಿಗೆ ಕಳಿಸಿತು. •

---

## ಕದ್ದು ಓದಿ ಬೆಳೆದರು

ಸುಪ್ರಸಿದ್ಧ ಗಾಂಧಿವಾದಿಯಾಗಿ, ವಿಶಿಷ್ಟ ಹಾಸ್ಯ' ಸಾಹಿತಿಯಾಗಿ, ಹಳ್ಳಿಯ ಬದುಕನ್ನು ಯಥಾವತ್ತಾಗಿ ಚಿತ್ರಿಸುವಲ್ಲಿ ಎತ್ತಿದ ಕೈಯಾಗಿ, ಸಾಹಿತ್ಯ ಸಮ್ಮೇಳನಾಧ್ಯಕ್ಷ ಪದವಿಯನ್ನೂ ಅಲಂಕರಿಸಿ, ನಾಡಿನ ಹೆಮ್ಮೆಯ ಪುತ್ರರೆನಿಸಿದ್ದ ಹಿರಿಯ ಸಾಹಿತಿಯೊಬ್ಬರು ಚಿಕ್ಕಂದಿನಲ್ಲೇ ಓದುವ ಚಟ ಅಂಟಸಿಕೊಂಡಿದ್ದವರು. ಅವರಿಗೆ ಪುಸ್ತಕ ಕೊಳ್ಳಲು ಹಣ ಸಿಗುವುದೂ ದುಸ್ತರವಾಗುತ್ತಿತ್ತಂತೆ.

ಆಗ ಅವರೇನು ಮಾಡುತ್ತಿದ್ದರು ಗೊತ್ತೆ? ಮನೆಯಿಂದ ಹಣ ಕದಿಯುತ್ತಿದ್ದರು. ಆ ಕದ್ದ ಹಣದಲ್ಲಿ ಒಂದು ಪೈಸೆಯನ್ನೂ ನಾಲಿಗೆ ಚಪಲಕ್ಕಾಗಲಿ ಚಟಗಳ ಪೂರೈಕೆಗಾಗಲಿ ಬಳಸಿಕೊಳ್ಳುತ್ತಿರಲಿಲ್ಲ; ನೇರವಾಗಿ ಪುಸ್ತಕ ಖರೀದಿಸುತ್ತಿದ್ದರು.

ಅವರಾರು ಗೊತ್ತೇ? ನಮ್ಮ 'ಭೂತಯ್ಯನ ಮಗ ಅಯ್ಯು'ವನ್ನು ಪರಿಚಯಿಸಿದ ಗೊರೂರು ರಾಮಸ್ವಾಮಿ ಅಯ್ಯಂಗಾರರು.

• ಟಿ.ಪಿ.ರವಿಕುಮಾರ್

# ಕುರಿಯಂತೆ ವರ್ತಿಸಿದ ಹುಲಿ

**ಸ್ವಾಮಿ ಜಗದಾತ್ಮಾನಂದರ**
**'ಬದುಕಲು ಕಲಿಯಿರಿ'**
**ಪುಸ್ತಕದಿಂದ**

ದೊಡ್ಡದಾದ ಹುಲ್ಲುಗಾವಲಿನಲ್ಲಿ ಒಂದು ಕುರಿಮಂದೆ ಹಾಯಾಗಿ ಸಂಚರಿಸುತ್ತಿತ್ತು. ಹುಲ್ಲುಗಾವಲಿನ ಉತ್ತರ ದಿಕ್ಕಿನಲ್ಲಿ ಒಂದು ದಟ್ಟಡವಿ. ಒಂದಾನೊಂದು ದಿನ ಹಸಿದ ಹುಲಿಯೊಂದು ಆ ಅಡವಿಯಲ್ಲಿನ ಒಂದು ಬಂಡೆಯ ಮೇಲೆ ನಿಂತು ಹುಲ್ಲುಗಾವಲಿನಲ್ಲಿದ್ದ ಕುರಿಮಂದೆಯನ್ನು ಕಂಡಿತು. 'ಇಂದೆನಗೆ ಆಹಾರ ಸಿಕ್ಕಿತು' ಎಂದು ಬಾಯಿ ಚಪ್ಪರಿಸಿತು. ಬಂಡೆಯ ಮೇಲಿನಿಂದ ಒಂದೇ ನೆಗೆತಕ್ಕೆ ಜಿಗಿದು ಆ ಹುಲಿ ಕುರಿಮಂದೆಯ ಹತ್ತಿರ ಬಂದು ಬಿದ್ದುಬಿಟ್ಟಿತು. ಬೀಳುವಾಗ ಅಕಸ್ಮಾತ್ ಅದರ ತಲೆಗೆ ಮೊನಚಾದ ಒಂದು ಕಲ್ಲು ಬಡಿದು ನೆತ್ತರು ಸುರಿಯಿತು. ತುಂಬು ಗಬ್ಬವಾಗಿದ್ದ ಆ ಹುಲಿ ಒಂದು ಪುಟ್ಟ ಮರಿಯನ್ನು ಹೆತ್ತು ಸತ್ತು ಹೋಯಿತು. ಭಯದಿಂದ ದಿಕ್ಕು ಪಾಲಾಗಿ ಓಡಿಹೋಗಿದ್ದ ಕುರಿಗಳು ಹೆದರುತ್ತಲೇ ಮೆಲ್ಲಮೆಲ್ಲನೇ ಹಿಂದಿರುಗಿ ನೋಡಿದಾಗ ಹುಲಿ ಮಲಗಿಕೊಂಡಿರುವುದನ್ನೇ ಕಂಡವು. ಬಹಳ ಹೊತ್ತಿನ ಮೇಲೆ ಹುಲಿಯನ್ನು ಸಮೀಪಿಸಿದವು. 'ಅಯ್ಯೋ ಪಾಪ! ಹುಲಿಮರಿ ತಬ್ಬಲಿಯಾಯಿತು' ಎಂದುಕೊಂಡವು, ಸತ್ತ ಹುಲಿಯನ್ನು ಕಂಡು. ಕರುಣೆಯಿಂದ ಅದನ್ನು ನೆಕ್ಕಿ ಎತ್ತಿ ತಮ್ಮ ಬಳಿಗೆ ಕೊಂಡೊಯ್ದವು. ಅದಕ್ಕೆ ಹಾಲು ಕುಡಿಸಿ, ಹುಲ್ಲು ತಿನ್ನಿಸಿ ಸಾಕಿ ಸಲಹಿದವು. ಆ ಹುಲಿಮರಿ ತನ್ನನ್ನು ತಾನು ಕುರಿ ಎಂದೇ ತಿಳಿದಿತ್ತು. ಅದು ಕುರಿಗಳಂತೆಯೇ 'ಬ್ಯಾ ಬ್ಯಾ' ಎಂದು ಕೂಗುತ್ತಿತ್ತು. ಕುರಿ ಕಾಯುವವನನೂ ಈ ವಿಚಿತ್ರ ಘಟನೆಯನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದ. ಒಂದು ದಿನ ಇತರ ಕುರಿಗಳ ಜೊತೆಗೆ ಈ 'ಕುರಿಹುಲಿ'ಯೂ ಹುಲ್ಲು ಮೇಯುತ್ತಿದ್ದಾಗ ಅದೇ ಅರಣ್ಯಕ್ಕೆ ಬಂದ ಹೊಸ ಹುಲಿಯೊಂದು ಕುರಿಮಂದೆಯಲ್ಲಿ ತನ್ನವನೊಬ್ಬನನ್ನು ಕಂಡು ಅಚ್ಚರಿಪಟ್ಟಿತು. ಓಡಿ ಹೋಗಿ ತನ್ನನ್ನು ತಾನು ಕುರಿ ಎಂದೇ ತಿಳಿದುಕೊಂಡಿದ್ದ ಆ 'ಕುರಿಹುಲಿ'ಯನ್ನು ಹಿಡಿದು ತಂದು, "ನೀನು ಹುಲಿ! ಅದೇಕೆ ಬ್ಯಾಬ್ಯಾ ಎಂದು ಅರಚುತ್ತಿಯೇ? ಹುಲ್ಲು ತಿನ್ನುತ್ತಿದ್ದೀಯೇ?" ಎಂದು ಗದರಿಸಿತು. ಆಗ ಆ 'ಕುರಿಹುಲಿ' "ಅಯ್ಯೋ! ನನ್ನನ್ನು ಬಿಟ್ಟುಬಿಡು. ನಾನು ಕುರಿಮರಿ. ನಾನು ಹುಲ್ಲು ತಿಂದುಕೊಂಡು ಹಾಯಾಗಿರುತ್ತೇನೆ," ಎಂದಿತು. ಆಗ ಹಿರಿಯ ಹುಲಿ, "ಛೀ, ಬುದ್ಧಿಹೀನ," ಎನ್ನುತ್ತ ಆ ಕುರಿಹುಲಿಯನ್ನು ಒಂದು ಕೆರೆಯ ಹತ್ತಿರ ಕರೆದೊಯ್ದು ನೀರಿನಲ್ಲಿ ಬಿದ್ದ ಪ್ರತಿಬಿಂಬಗಳನ್ನು ತೋರಿಸಿ ಅವುಗಳಲ್ಲಿರುವ ಸಮಾನ ಗುಣಧರ್ಮಗಳನ್ನು ಮನಗಾಣಿಸಿತು. ತನ್ನೊಂದಿಗೆ ಅರಣ್ಯಕ್ಕೆ ಕರೆದೊಯ್ದು ಬೇಟೆಯಾಡಿ ತೋರಿಸಿತು. ಹಲವು ಬಾರಿ ಗರ್ಜಿಸಿ ಓಡಾಡಿತು. ಕೆಲವು ದಿನಗಳವರೆಗೂ ಈ ಕುರಿಹುಲಿಗೆ ತನ್ನ ಬಗೆಗಿನ ಸಂಶಯ ಭಾವನೆ ದೂರವಾಗಿರಲಿಲ್ಲ. ಕ್ರಮೇಣ ತಾನು ಕುರಿಯಲ್ಲವೆಂಬ ಭಾವನೆ ದೃಢವಾಯಿತು. ಆಗ ಅದು ಹುಲಿಯಂತೆಯೇ ಓಡಾಡತೊಡಗಿತು.

ಹುಲಿಯಾಗಿದ್ದರೂ ತನ್ನನ್ನು ತಾನು ಕುರಿಯೆಂದೇ ನಂಬಿಕೊಂಡು ಕುರಿಯಂತೆಯೇ ವರ್ತಿಸಿತು ಆ ಹುಲಿಮರಿ! ತನ್ನಲ್ಲಿ ಅದ್ಭುತ ಶಕ್ತಿ ಅಡಗಿದ್ದರೂ ತಾನು ಅಲ್ಪ ಶಕ್ತಿಯ ಕುರಿ ಎಂಬ ಕಲ್ಪನೆಗೆ ಅನುಗುಣವಾಗಿಯೇ ನಡೆದುಕೊಂಡಿತು. ಕುರಿಯೆಂದು ತಿಳಿದು ಅಂತೆಯೇ ವರ್ತಿಸಿದಾಗಲೂ ಅದು ನಿಜವಾಗಿಯೂ ಹುಲಿಯಾಗಿಯೇ ಇತ್ತು. ಹಾಗಾದರೆ ಯಾವುದು ಅದನ್ನು ಕುರಿಯಾಗಿಸಿದ್ದು? ತಪ್ಪುಗಟ್ಟಿದ ತಪ್ಪು ಕಲ್ಪನೆ ಅಥವಾ ಅಜ್ಞಾನ. ತನ್ನ ನಿಜವಾದ ಸ್ವರೂಪದ ಬಗೆಗಿನ ಅಜ್ಞಾನ. ಅಜ್ಞಾನ ಕಳೆದು ತನ್ನ ಸ್ವರೂಪದರ್ಶನ

ವಾಗುತ್ತಲೇ ಎಲ್ಲ ಸಂಶಯ ವಿಪರೀತ ಭಾವನೆಗಳೂ ದೂರವಾದವು. ಆಗ ಅದು ಹುಲಿಯಂತೆ ವರ್ತಿಸಿತು.

ಯಾವುದು ಸತ್ಯವೆಂದು ನಾವು ದೃಢವಾಗಿ ನಂಬುತ್ತೇವೋ ಆ ನಂಬಿಕೆ ನಮ್ಮ ಯೋಚನೆ, ಭಾವನೆ ಮತ್ತು ಚಟುವಟಿಕೆಗಳ ಮೇಲೆಯೇ ಏಕೆ, ಸಂಪೂರ್ಣ ವ್ಯಕ್ತಿತ್ವದ ಮೇಲೆ ಪ್ರಬಲ ಪ್ರಭಾವ ಬೀರುತ್ತದೆಂಬುದು ನಿಸ್ಸಂದಿಗ್ಧವಾದ ಒಂದು ಸತ್ಯ.

ಸತ್ಯದ ಬಗೆಗಿನ ನಮ್ಮ ತಿಳುವಳಿಕೆ ನಮ್ಮ ಬಗೆಗಿನ ನಮ್ಮ ತಿಳುವಳಿಕೆಯನ್ನೇ ಹೊಂದಿಕೊಂಡಿರುತ್ತದೆ. ಪರಮಸತ್ಯದ ಬಗೆಗಿನ ನಮ್ಮ ಸಿದ್ಧಾಂತ ನಮ್ಮ ಅರಿವಿನ ಪರಿಧಿಯ ವಿಸ್ತಾರ-ವಿಕಾಸಗಳನ್ನು ಅವಲಂಬಿಸಿ ಬದಲಾವಣೆಯಾಗುತ್ತಿರುತ್ತದೆ ಎಂಬುದು ಇನ್ನೊಂದು ತಥ್ಯ.

ಸಂಗ್ರಹ: **ವೀರೇಶ ವಾಲಿ**

## ಕಂಬಳಿ-ಗಾಳಿ ಇತ್ಯಾದಿ

**ಭಾಲಚಂದ್ರ ಘಾಣೇಕರರು ಅನುವಾದಿಸಿದ ಸಾನೇ ಗುರೂಜಿಯವರ 'ಶಾಮನ ತಾಯಿ' ಕಾದಂಬರಿಯಿಂದ**

'ಪುಸ್ತಕಗಳಿಂದಲೇ ಸಮಾಜದ ರಚನೆಯಾಗುವುದಿಲ್ಲ. ಶ್ರೀರಾಮಚಂದ್ರನ ಯುಗದಲ್ಲೂ ಇಲ್ಲ; ಯುಧಿಷ್ಠಿರನ ಯುಗದಲ್ಲೂ ಇಲ್ಲ. ರಾಮಾಯಣ ಮಹಾಭಾರತಗಳಲ್ಲಿ ಎಷ್ಟೇ ವಿಷಯಗಳನ್ನೂ ಬರೆದಿದ್ದರೂ, ಆ ಶ್ಲೋಕಗಳನ್ನು ಬಾಯಿಪಾಠ ಮಾಡುವುದರಿಂದ ಆ ಕಾಲದ ಸಾಮಾನ್ಯ ಮನುಷ್ಯನ ಪರಿಚಯವಾಗಲಾರದು. ತಾಯಿಯ ಗರ್ಭವೆಷ್ಟೇ ಸುಖವಾಗಿದ್ದರೂ ದೊಡ್ಡವರಾದ ಮೇಲೆ ಅದರಲ್ಲಿ ಮರಳಿ ಹೋಗುವುದಕ್ಕಾಗುವದಿಲ್ಲ. ಪ್ರಪಂಚದ ಸಮಸ್ತ ಮಾನವ ಜಾತಿಯನ್ನು ಸೇರಿಸಿಯೇ ಮನುಷ್ಯನ ಅಸ್ತಿತ್ವವಾಗಿದೆ. ಅದು ನಿಮ್ಮ ಸುತ್ತಮುತ್ತಲೂ ಇದೆ. ಕಂಬಳಿ ಹೊದೆದು ಗಾಳಿಯ ಹೊಡೆತವನ್ನು ತಪ್ಪಿಸಿಕೊಳ್ಳಲಾಗುತ್ತದೆಯೇ?

ಸಂಗ್ರಹ: **ಎಸ್.ಕೆ. ರಮಾದೇವಮ್ಮ**

## ಸೋಲು

**ಡಾ. ಕೆ. ಶಿವರಾಮ ಕಾರಂತರ 'ಬಾಳ್ವೆಯೇ ಬೆಳಕು' ಪುಸ್ತಕದಿಂದ**

ಯಶಸ್ಸೇ ಜೀವನದ ಗುರಿಯಾಗಬಾರದು, ಯಶಸ್ಸಿನಿಂದಲೇ ಆನಂದವಿದೆ, ಇಲ್ಲವಾದರೆ ಇಲ್ಲ ಎಂಬ ನಂಬಿಕೆಯು ನಮ್ಮನ್ನು ಕಾಡಬಾರದು. ಯಶಸ್ಸು ಪೂರ್ಣತೆಯ ಲಕ್ಷಣ. ಅದರ ಮುಂದೆ ಆಗಬೇಕಾದ ಕೆಲಸವೇನಿಲ್ಲ. ನಮ್ಮ ಈ ನಿಸರ್ಗ, ಈ ಪ್ರಪಂಚಗಳು ಇನ್ನೂ ಸಾಗುತ್ತಿರುವುದನ್ನು ಕಂಡರೆ, ಅವು ತಮ್ಮ ಗುರಿಯನ್ನು ಮುಟ್ಟಿಲ್ಲ; ಪೂರ್ಣತೆಯನ್ನು ಹೊಂದಿಲ್ಲ ಎಂಬುದು ಸ್ಪಷ್ಟವಾಗದೆ? ಅಂದರೆ ಈತನಕ ನಡೆದ ಬಾಳ್ವೆ ವ್ಯರ್ಥವಾಯಿತೆ? ಈ ಪ್ರಶ್ನೆಗೆ ಮನಸ್ಸು ಏನು ಉತ್ತರವನ್ನು ಹೇಳುತ್ತದೆ? ಪೂರ್ಣತೆಯ ಕಡೆಗೆ ಸಾಗುವ ಪ್ರಯತ್ನವು ಪೂರ್ಣತೆಗಿಂತಲೂ ಸುಂದರವಾದದ್ದು, ಅದರಷ್ಟೇ ಮುಖ್ಯವಾದದ್ದು. ಕಾರಣ ಇಲ್ಲಿಯೇ ಅತಿ ಹೆಚ್ಚಿನ ಜೀವನದ ಚಟುವಟಿಕೆ ನಡೆಯತಕ್ಕದ್ದು. ಅತಿ ಹೆಚ್ಚಿನ ಚೇತನ ಪ್ರಕಾಶವಾಗುವುದೂ ಇಲ್ಲೇನೇ. ಹೆಚ್ಚಿನ ಸ್ಪರ್ಧೆ, ಉತ್ಸಾಹ, ಸಂಗ್ರಾಮಗಳೂ ಇಲ್ಲೇನೇ; ಈ ರಾಜ್ಯದಲ್ಲಿ ಗೆದ್ದವರಷ್ಟೇ ಸೋತವರೂ ಮುಖ್ಯರು. ಒಂದು ಗೆಲುವಿಗೆ ನೂರು ಸೋಲು. ಯಶಸ್ಸಿನಲ್ಲಿ ಸೋಲು ಅಡಗಿಬಿಡುತ್ತದೆ. ಕರ್ತವ್ಯಕ್ಕೆ ಎದುರಾಗುವ ಹಾನಿಗಳು ಕಾಣಿಸುವುದಿಲ್ಲ. ನಿಜವಾದ ಸಾಹಸ, ಸ್ಪರ್ಧೆಗಳು ಕಾಣಿಸುವುದು ಸೋಲಿನೊಂದಿಗೆ ಹೋಲಿಸಿದಾಗ. ಸೋತವನ ಕೆಲಸ ಗೆದ್ದವನಿಗಿಂತ ಕಡಿಮೆಯಾಗಬೇಕಿಲ್ಲ, ಸೋತವರ ಹಲವು ಅನುಭವಗಳ ಮೇಲಿಂದಲೇ ಒಬ್ಬನ ಗೆಲವು ನಿಲ್ಲಬೇಕು. ಗೆಲುವಿಗೆ ಸೋಲು ಸೋಪಾನವಾದರೂ, ಬಾಳ್ವೆಯಲ್ಲಿ ಚೇತನಪೂರ್ಣವಾಗಿ ಬದುಕುವುದೂ ಕರ್ತವ್ಯದಲ್ಲೇ ಸಂತೋಷವನ್ನು ಅರಸುವುದೂ ಮನಸ್ಸಿನ ಆದರ್ಶಗಳಾಗಬೇಕು. ಬದುಕಿದವನು ಸಾವನ್ನು ಒಪ್ಪಿದಂತೆಯೇ ದುಡಿಯುವವನು ಸೋಲನ್ನು ಒಪ್ಪಬೇಕು (ಪುಟ: ೧೩೭)

ಸಂಗ್ರಹ: **ಸಿದ್ಧರಾಮೇಶ್. ಎನ್. ಪೊಲೇಶಿ**

ಮರೆಯಲಾಗದವರು

ಖಾದಿ ಬಟ್ಟೆಯಂತೆ

ಸಾದಾ ಕವಿ

# 'ಕನ್ನಡ ವಾಮನ'

• ಬಸವರಾಜ ಪುರಾಣಿಕ

ದಶಾವತಾರದಲ್ಲಿ ಶ್ರೀವಿಷ್ಣುವು ವಾಮನನಾಗಿ ಬಲಿಚಕ್ರವರ್ತಿಯನ್ನು ಕೇಳಿದ್ದು ಮೂರು ಪಾದಗಳನ್ನೂರುವಷ್ಟು ನೆಲೆಯನ್ನು.

ಬಾಗಲಕೋಟೆಯ 'ಕನ್ನಡ ವಾಮನ' ನಾಮಾಂಕಿತ ಕವಿ ಮರಾಠಿಯ ದಬ್ಬಾಳಿಕೆಗೆ ಬಲಿಯಾಗಿದ್ದ ಕನ್ನಡದ ಕೈಂಕರ್ಯಕ್ಕೆ ತನ್ನ ಅಳಿಲು ಸಾಧನವಾದ ಕಾವ್ಯ ಕೃಷಿಗೆ ಬೇಡುವುದು ಆರು ಮಹನೀಯರ ಪಾದರಜ ಕಣಗಳನ್ನು:

ಬರಲಿ ನನ್ನ ಕಾವ್ಯದಲ್ಲಿ ತೂ,
ರ್ಮರಿಯ ಜಾಣ್ಮೆಯು ವೆಂಕಟನ ಪದ
ಸರಸವಾ ಮುಳಬಾಗಲನ ಪದಪ್ರೌಢತನವೈದೆ
ಕರಿಬಸವ ಪಂಡಿತನ ಪದಗಳ
ವರಮಧುರತನವೈದೆ ಗೌರೀ
ಶ್ವರನ ಶೈಲಿಯು ಸುಲಭತನವಾ ಗಳಗನಾಥನದು

ತೂರಮರಿಯ ಜಾಣ್ಮೆ, ವೆಂಕಟನ ಪದಸರಸ, ಮುಳಬಾಗಲನ ಪದಪ್ರೌಢಿಮೆ ಕರಿಬಸವ ಪಂಡಿತನ ಪದಮಾಧುರ್ಯ, ಗೌರೀಶ್ವರನ ಶೈಲಿ ಹಾಗೂ ಗಳಗನಾಥನ ಸುಲಭತನ ಇವುಗಳು ತನ್ನ ಕಾವ್ಯದಲ್ಲಿ ಒಡಮೂಡಲೆಂದು ಹಂಬಲಿಸಿದನು.

ಸಂಸ್ಕೃತ ವಾಮನ ಸಾರಿದ 'ರೀತಿರಾತ್ಮಾ ಕಾವ್ಯಸ್ಯ' ಅಂದರೆ, ರೀತಿಯೇ ಕಾವ್ಯದ ಜೀವಾಳ ಎಂಬ ಉಕ್ತಿಯನ್ನು ಈತ ತನ್ನ ಕಾವ್ಯದಲ್ಲಿ ಅಳವಡಿಸಿಕೊಳ್ಳಲಾರಂಭಿಸಿದ. ಇಲ್ಲಿ 'ರೀತಿ' ಎಂದರೆ ವಿಶಿಷ್ಟ ಪದರಚನೆ.

ಹೀಗೆ ಆರು ಲೇಖಕರಿಂದ ಬೇಡಿತಂದ ಈ ಬೆರಕೆಯ ಮಣ್ಣಲ್ಲಿ ಈತ ಮಾಡಿದ ಕಾವ್ಯ ಕೃಷಿಯ ಬೆಳೆ ನವೀನವಾಗಿರುವುದೂ ಆಕರ್ಷಕವಾಗಿರುವದೂ ಸಹಜವೆ!

ಈತ ಐದು ವಿಧದಲ್ಲಿ ಹೊಸತನ ತೋರಿದ್ದನ್ನು ವಿಮರ್ಶಕ ರಾ.ಯ.ಧಾರವಾಡಕರ ಗುರುತಿಸಿದ್ದಾರೆ.

ಅಂದಿನ ಕಾವ್ಯದ ಮೌಲ್ಯಮಾಪನದ ಆದ್ಯ ಅಗತ್ಯವೆಂದರೆ ಪಂಡಿತರ ಪ್ರಾಸದ ತ್ರಾಸು ಕಟ್ಟಳೆಯಲ್ಲಿ ಅದು ಪಾಸಾಗಬೇಕು. ಕವಿಗೆ ತಲೆಚಿಟ್ಟು ಹಿಡಿಸುವಷ್ಟು ಆಕ್ರಮಣ ನಡೆಸಿತ್ತು ಪ್ರಾಸದ ತೊಂದರೆ. ಭಾವವಿರಲು ಪ್ರಾಸ ತ್ರಾಸವೇತಕ್ಕೆ? ಎಂದು ಆಹವಾಲು ಹಾಕಿ, ಕನ್ನಡದಲ್ಲಿ ಪ್ರಾಸ ಇಲ್ಲದ ಕವಿತೆ ಬರೆಯಲು ಆರಂಭಿಸಿದ ಕೆಲವು ದಿಟ್ಟ ಬಂಡಾಯಕೋರ ಸಾಹಿತಿಗಳಲ್ಲಿ 'ಕನ್ನಡ'ವಾಮನ ಒಬ್ಬ.

ಈತ ಪ್ರಥಮ ಪ್ರಯತ್ನವೆಂದು ಬಂಗಾಲಿ ಭಾಷೆಯಲ್ಲಿ ಜೋಗೀಂದ್ರನಾಥ ಬಸು ಅವರು ಬರೆದ 'ಪೃಥ್ವಿರಾಜ' ಎಂಬ ಮಹಾಕಾವ್ಯದ ಒಂದು ಸರ್ಗವನ್ನು ಭಾಷಾಂತರಿಸಿದ. ೧೯೧೮ರಲ್ಲಿ ಅದು ಧಾರವಾಡದ 'ವಾಗ್ಭೂಷಣ' ಪತ್ರಿಕೆಯಲ್ಲಿ ಪ್ರಕಟವಾಯಿತು. ಈ ಪ್ರಾಸನಿರಾಸವು ಪಂಡಿತವರ್ಗದಲ್ಲಿ ಒಂದು ಕೋಲಾಹಲವನ್ನೇ ಎಬ್ಬಿಸಿತು. ನರಸಿಂಹ ಧೋಂಡೊ ಮುಳಬಾಗಲ, ಕೇಶವಶರ್ಮ ಗಲಗಲಿ ಹಾಗೂ ಮ.ಪ್ರ. ಪೂಜಾರರಂಥ ಪಂಡಿತ ಪ್ರಕಾಂಡರು ಈತ ಮಾಡಿದ

'ಕನ್ನಡ ಛಂದಸ್ಸಿನ ಕೊಲೆ'ಯನ್ನು ಉಗ್ರವಾಗಿ ಪ್ರತಿಭಟಿಸಿದರು.

ಈತ ಮಾತ್ರ ಅದಕ್ಕೆ ಉತ್ತರವೆಂಬಂತೆ ಹೀಗೆ ಹೇಳಿದ. ಅದರಲ್ಲಿ ಈತನ ನಿಲುವಿನ ಇನ್ನಷ್ಟು ಸ್ಪಷ್ಟೀಕರಣ ಹಾಗೂ ಕಾವ್ಯ ಪ್ರತಿಭೆಯ ಆತ್ಮಪ್ರತ್ಯಯ ಮೆರೆಯುತ್ತವೆ.

ಈಗ ನಮ್ಮದು ನಾಡೊಳೆಲ್ಲವು
ಹಾಗೆ ಕಾವ್ಯಗಳನ್ನು ಮಾಳ್ಪರು
ಸಾಗಿಸಲು ನಾನಿನ್ನು ಕವಿತೆಗಳಲ್ಲಿ ವಾದವನು
ಕೂಗಿ ಮಾಡುವದೇನು ಬಹುನಿಶಿ
ತಾಗಿರುವ ಸುಖವೇನು ಮಾಳ್ಪದು
ಹೋಗಿರಲು ಹಾಗಾಗಿ ಮತ್ತೇಭಗಳು ಸಿಂಹವದು

ಹೀಗೆ ಪಂಡಿತರು ರಕ್ಷಿಸುತ್ತಿದ್ದ ಪ್ರಾಸಕೋಟೆಯನ್ನು ವಿಧ್ವಂಸಗೊಳಿಸಿ ಕನ್ನಡ ಕವಿತೆಗೆ ಹೊಸ ರೂಪ ಹಾಗೂ ಹೊಸ ಆಯಾಮ ಕೊಟ್ಟ 'ಕನ್ನಡವಾಮನ' ವಿಜಾಪುರ ಜಿಲ್ಲೆಯ ಬಾಗಲಕೋಟೆ ಸಮೀಪದ ತೋಳಮಟ್ಟಿ ಹಳ್ಳಿಯಲ್ಲಿ ೧೮೭೦ರಲ್ಲಿ ಜನಿಸಿದ. ಈತನ ಪೂರ್ಣ ಹೆಸರು ಉಪೇಂದ್ರ ಹಣಮಂತ ಕುಲಕರ್ಣಿ. ಮೂರನೇ ವರ್ಷ 'ಟ್ರೇಂಡ್' ಆದ ಈತ ಕನ್ನಡ ಪ್ರಾಥಮಿಕ ಶಾಲಾ ಶಿಕ್ಷಕನಾಗಿ ದುಡಿದು, ೧೯೧೮ ರಿಂದ ೧೯೨೫ರ ವರೆಗೆ ಬಾಗಲಕೋಟೆ ಹತ್ತಿರದ ಮುರನಾಳ ಗ್ರಾಮದಲ್ಲಿ ಅಲ್ಲಿಯ ಶಾಲೆಯ ಮುಖ್ಯೋಪಾಧ್ಯಾಯನಾಗಿದ್ದ. ಜೊತೆಗೆ ಅಲ್ಲಿಯ ಸರಕಾರಿ ಸಂಘದ ಕಾರ್ಯದರ್ಶಿಯೂ ಆಗಿದ್ದ. ಈತ ಕೆರೂರ ವಾಸುದೇವಾಚಾರ್ಯರಂಥ ಪ್ರಸಿದ್ಧ ಸಾಹಿತಿಗಳ ಪರಮಮಿತ್ರನಾಗಿದ್ದ.

ಇನ್ನೊಂದು ಮುಖದಲ್ಲಿ ಈತನ ಪ್ರತಿಭಟನೆ ಕಂಡುಬರುವುದು ಕಾವ್ಯದ ವಸ್ತುವಿನ ಆಯ್ಕೆಯಲ್ಲಿ. ಅನನ್ಯನಾದ ನಾಯಕ ಕಾವ್ಯವಸ್ತುವಾದರೆ ರಚಿಸಿದ ಕಾವ್ಯ ವಿಶ್ರುತವಾಗುತ್ತದೆ ಎಂಬ ಅಭಿನವ ಪಂಪನ ಕಲ್ಪನೆಯ ಜಾಡಿನಲ್ಲಿಯೇ ಕವಿಗಳು ಭಯ ಭಕ್ತಿಯಿಂದ ಹೆಜ್ಜೆ ಇಡುತ್ತಿದ್ದ ಜಾಯಮಾನವನ್ನೇ ಈತ ಕೆಣಕಿದ. ಈ ಸವಕಲಾದ, ಜಿಡ್ಡುಗಟ್ಟಿದ, ಮುರಗಟ್ಟಿದ 'ಕಾವ್ಯೋದ್ಯೋಗಕರ್ಮಿ'ಗಳನ್ನೇ ಚುಡಾಯಿಸುವಂತೆ ಈತ ಸಾಮಾನ್ಯ ವಿಷಯಗಳ ಬಗ್ಗೆ ಸುಲಭವಾದ ಶೈಲಿಯಲ್ಲಿ ದಿನನಿತ್ಯದ ಬಳಕೆಮಾತುಗಳನ್ನು ಬಳಸಿ ಕಾವ್ಯ ರಚಿಸಿದ. 'ಗ್ರಾಮ್ಯ ಜನವರ್ಣನಾಶತಕಂ' ಎಂಬ ಈತನ ಕವನಗಳು ಜನಸಾಮಾನ್ಯರಾದ ಶಿಕ್ಷಕ, ಗೌಡ, ಕುಲಕರ್ಣಿ ಮೊದಲಾದವರ ಬಗೆಗಿವೆ. ಅಷ್ಟೇ ಅಲ್ಲ, ದಿನ ನಿತ್ಯ ಉಪಯೋಗಿಸುವ ಸ್ನಾನದ ಚಿಕ್ಕ ಪಂಚೆಯೂ ಈತನ ಕಾವ್ಯವಸ್ತುವಾಯಿತು. ಯಾರು ಕೈಕೊಟ್ಟರೂ ಬಡವರು ನನ್ನನ್ನು ಬಿಡದೆ ಇರಲಾರರು ಎಂದು ಸಮಾಧಾನಗೊಂಡ ಪಂಚೆ ಹೀಗೆ ಹೇಳುತ್ತದೆ:

ಬಿಡದಿರಲೆ ನೀವು ಹೆಮ್ಮೆಯಲಿ ನನ್ನ ಶೆಟ್ಟರು ಸಾಹುಕಾರರೇ
ಬಡವರದಷ್ಟು ದೃಷ್ಟಿಯದು ನನ್ನೊಳಗಿದ್ದರೆ ಸಾಕು ದೇವರೇ
ಕಡೆತನಕಾಗಿ ನಾಡಿನೊಳಗಾವಗೆ ತಾಂ ಸಿರಿಯಿರ್ಪುದೈ ಕಣಾ
ಕೆಡದಿರನೇನು ತಾನು ಸಿರಿವಂತರ ಸಂಗತಿಯಿಂ ಮನೀಷಿಯುಂ?

ಈತ ತನ್ನ ಕವಿತೆಗಳಲ್ಲಿ ಸ್ಥಾನಿಕ ಹಾಗೂ ತತ್ಕಾಲೀನ ಉಲ್ಲೇಖಗಳನ್ನು ದಾಖಲಿಸಿದ್ದು ಒಂದು ವಿಶೇಷ. ತಾನು ಸಂಧಿಸಿದ ವ್ಯಕ್ತಿಗಳಲ್ಲಿ ತನಗೆ ಸಾಲ ಕೊಟ್ಟ ಕೋರಾ ಸೊಲಬಣ್ಣ, ತನ್ನ ಜಾಡ್ಯ ನಿವಾರಿಸಿದ ವೈದ್ಯ ಜಠಾರ ಮೊದಲಾದವರ ಬಗ್ಗೆ ಕವಿತೆ ಹೊರಹೊಮ್ಮಿದೆ. ತನ್ನ ಆರಾಧ್ಯ ದೈವತ ಯಲಗೂರು ಹಣಮಂತ ದೇವರ ಉಲ್ಲೇಖವನ್ನು ಸಾಧ್ಯವಾದಲ್ಲೆಲ್ಲ ಮಾಡಿದ್ದಾನೆ. ತನ್ನ ಹುಟ್ಟೂರು ತೋಳಮಟ್ಟಿ ಹಳ್ಳಿಯನ್ನು ಸಹ ಕವಿತೆಯಲ್ಲಿ ಉಲ್ಲೇಖಿಸಿದ್ದಾನೆ. ಇದು ಸಮಾಜೋ ಇತಿಹಾಸದ ಅಧ್ಯಯನಕ್ಕೆ ದೊರಕುವ ಆಕರವಾಗಿದೆ.

ಸಮಾಜದ ಓರೆಕೋರೆ ವಾಮನನನ್ನು ಕೆರಳಿಸಿತು. ಪಂಡಿತರು ಹಾಗೂ ಸಜ್ಜನರೆಂದೆನಿಸಿಕೊಂಡವರ ತೆರೆಮರೆಯ ಕಾಮವಾಸನೆಯನ್ನು ಛಾಯಾಚಿತ್ರದಂತೆ ವರ್ಣಿಸಿದ್ದಾನೆ. ವಿಡಂಬನೆ, ಅನುಕಂಪ, ಸುಧಾರಣೆಯ ದೃಷ್ಟಿಗಳನ್ನು ಬಿಂಬಿಸುವ ಈ ಕವಿತೆಗಳು ಕವಿಯ ಜೀವನದೊಂದಿಗೆ ಹೊಂದಿದ್ದ ಸಹಸ್ಪಂದನದ ದ್ಯೋತಕವಾಗಿದೆ.

ಶೃಂಗಾರ ಹಾಗೂ ವಿನೋದಗಳು ಸಹ ಈತನ ಕವಿತೆಗಳಲ್ಲಿ ಹೊರಹೊಮ್ಮಿವೆ. 'ಅಚುಂಬಿತ ಕುಸುಮ' ಎಂಬ ಗದ್ಯ ಲೇಖನ ಶೃಂಗಾರ ಪ್ರಧಾನವಾಗಿದ್ದರೆ, ಮಾತಿನ ಚಮತ್ಕೃತಿ ಹಾಗೂ ವಿನೋದಗಳು 'ಪೆದ್ದ ಶರ್ಮ-ಮಾಧವಭಟ್ಟರ ಸಂವಾದ'ದಂತಹ ರಚನೆಯಲ್ಲಿ ಸ್ಫುಟವಾಗಿ ವ್ಯಕ್ತ ವಾಗಿವೆ.

ಜೊತೆಗೆ 'ಕನ್ನಡ ವಾಮನ' ಕೆಲವು ಗ್ರಂಥಗ ಳನ್ನು ರಚಿಸಿದ. 'ಸಂಸ್ಕೃತ ಕುವಲಯಾನಂದ'ವನ್ನು 'ಅಲಂಕಾರ ದರ್ಪಣ'ವೆಂದು ಅನುವಾದಿಸಿ ಕನ್ನಡ ಶಾಲಾ ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟಿಸಿ ದನು. 'ಸಾದಿಯ ಸಾಧುವಚನಗಳು' ಹಾಗೂ 'ಗ್ರಾಮ್ಯಜನವರ್ಣನಾಶತಕಂ' ಇವು ಇನ್ನೆರಡು ಗ್ರಂಥಗಳು. ಬಡತನದಿಂದಾಗಿಯೋ ಅಥವಾ ಮಹತ್ವಾಕಾಂಕ್ಷೆಯ ಅಭಾವದಿಂದಲೋ ತನ್ನ ಕೃತಿ ಗಳನ್ನು ಈತ ಪ್ರತ್ಯೇಕವಾಗಿ ಪ್ರಕಟಿಸಲಿಲ್ಲವೆಂದು ತೋರುತ್ತದೆ.

ಪಂಡಿತ ಕೇಶವಶರ್ಮ ಗಲಗಲಿ ಇವರು ಹೇಳಿದಂತೆ- "ಉಪೇಂದ್ರ (ಕನ್ನಡ ವಾಮನ)ನೇನೂ ಪಂಪ ರನ್ನರಂತೆ ಸಿಂಹಗರ್ಜ ನೆಯನ್ನು ಮಾಡುವ ಕವಿಯಲ್ಲ, ಲಕ್ಮೀಶನಂತೆ ಕನ್ನಡ ನಂದನವನದಲ್ಲಿ ಇಂಪಾಗಿ ಹಾಡಿ ಸೊಂಪು ಬೀರಿದ ಕವಿಕೋಕಿಲನೂ ಅಲ್ಲ, ನಯಸೇನಾದಿಗ ಳಂತೆ ನಯವಚನಗಳಿಂದ ಬಿರುಸುಗನ್ನಡವನ್ನು ಸರಸಾಗಿ ಮಾಡಿದವನೂ ಅಲ್ಲ, ಅಥವಾ ನೇಮಿ ಚಂದ್ರನಂತೆ ಅವನ ಕವಿತಾ ಸರೋವರದಲ್ಲಿ ಲಸದಲಂಕೃತಿ ಕಂಜನಿವಾಸದೊಳ್ ಮನೋಮು ದದಿಂದ ಸರಸತಿಯ ಜಲಕೇಳಿಯನ್ನು ಆಡಲಿಲ್ಲ. ಹಾಗಾದರೆ ಅವನ ಸ್ಮೃತಿ ಏಕೆ? ಉತ್ತರವು ಸಾದಾ-ಉಪೇಂದ್ರ (ಕನ್ನಡ ವಾಮನ) ಖಾದಿ ಬಟ್ಟೆಯಂತೆ ಸಾದಾ ಕವಿ."

ಹೊಸಗನ್ನಡ ಸಾಹಿತ್ಯದ ಅರುಣೋದಯ ಕಾಲದಲ್ಲಿ ಕವಿಯ ವ್ಯಕ್ತಿತ್ವ ಹಾಗೂ ಸಮಕಾಲೀನ ಪ್ರಜ್ಞೆಗಳು ಕಾವ್ಯದಲ್ಲಿ ಒಡಮೂಡುತ್ತಿದ್ದ ಸಂಕ್ರ ಮಣ ಕಾಲದಲ್ಲಿ ಕವಿತೆಗೆ ಒಂದು ಹೊಸತನ ವನ್ನೂ ವಿಪುಲತೆಯನ್ನೂ ತಂದುಕೊಡುವಲ್ಲಿ ಕನ್ನ ಡವಾಮನ ಇಟ್ಟ ದಿಟ್ಟ ಹೆಜ್ಜೆಗಳು ಅನನ್ಯವಾಗಿರು ವಂತೆ ಸ್ಮರಣೀಯವೂ ಆಗಿವೆ.



ಕವಿ, ವಾಕ್ಪಟು ಹಾಗೂ ಕತ್ತಿ ವರಸೆಯಲ್ಲಿ ಸಿದ್ಧಹಸ್ತನೆಂದು ಪ್ರಖ್ಯಾತನಾದ ೧೭ನೆಯ ಶತಮಾನದ ಸಿರಾನೋ ಬರ್ಗೆರಾಕ್ಫೋ ಹೆಚ್ಚು ಕಡಿಮೆ ಸಾವಿರ ಸಲ ದ್ವಂದ್ವ ಯುದ್ಧಕ್ಕಿಳಿದ. ಕಾರಣ, ಇತರರು ಆತನ ಮೂಗು ದೊಣ್ಣೆಮೆಣಸಿನಕಾಯಿಯ ಹಾಗಿದೆಯೆಂದು ಟೀಕಿಸಿದ್ದು.

ಜರ್ಮನಿಯಲ್ಲಿ ತಳಿ ತಂತ್ರಜ್ಞಾನದಿಂದ ಅಭಿವೃದ್ಧಿಪಡಿಸಿದ ಟೆರಿಯರ್ ಜಾತಿಯ ನಾಯಿಯನ್ನು ನೀವು ಸಲೀಸಾಗಿ ಚಹದ ಕಪ್ಪಿನಲ್ಲಿರಿಸಬಲ್ಲಿರಿ. ಈ ಸುಂದರವಾದ ನಾಯಿಯ ಬೆಲೆ ಮಾತ್ರ ತುಂಬಾ ದುಬಾರಿ. ಒಂದೊಂದು ನಾಯಿಗೂ ಭಾರತೀಯ ಲೆಕ್ಕಾಚಾರದಲ್ಲಿ ಸುಮಾರು ತೊಂಬತ್ತು ಸಾವಿರ ರೂಪಾಯಿಗಳು.

ಅತಿಯಾದರೆ ಅಮೃತವೂ ವಿಷವಾಗಬಲ್ಲದೆಂಬುದು ಸುಳ್ಳಲ್ಲ. ಆರೋಗ್ಯ ಕಾಯ್ದುಕೊಳ್ಳಲು ಜೀವಸತ್ವಗಳು ಅತ್ಯವಶ್ಯ ನಿಜ. ಆದರೆ ಅತಿಯಾಗಿ ಸೇವಿಸಿದರೆ ದುಷ್ಪರಿಣಾಮ ತಪ್ಪಿದ್ದಲ್ಲ. ಗರ್ಭಿಣಿಯರಾಗಿದ್ದಾಗ ಅತಿಯಾಗಿ ಎ ಜೀವಸತ್ವವನ್ನು ಸೇವಿಸಿದರೆ ಸೀಳ್ತುಟಿಯು ನಾಲಿಗೆ ಹರಿದ ಹಾಗೂ ಹೃದಯದ ತೊಂದರೆಯಿರುವ ಮಕ್ಕಳು ಹುಟ್ಟುವ ಸಂಭವ ಹೆಚ್ಚು ಎಂದು ಬೋಸ್ಟನ್ ವಿಶ್ವವಿದ್ಯಾಲಯದ ಸಂಶೋಧನಾ ವರದಿ ಹೇಳುತ್ತದೆ.

ಅಭಿಮಾನಿ ಓದುಗರೇ............

## ನಿಮಗೆ ಇದೋ "ದೀಪಾವಳಿ ಹಬ್ಬದ" ಪ್ರಯುಕ್ತ 'ಕಸ್ತೂರಿ'ಯ

ವಿಶೇಷ ಉಡುಗೊರೆ

**ಇದೇ ದಿ. 30-11-1995ರ ಒಳಗಾಗಿ 'ಕಸ್ತೂರಿ' ಮಾಸಪತ್ರಿಕೆಗೆ ನೇರ ಚಂದಾದಾರರಾಗುವವರಿಗೆ ಮಾತ್ರ ಈ ಸೌಲಭ್ಯ!**

* ವಾರ್ಷಿಕ ಚಂದಾ ಹಣ, ರೂ. 70-00 ಗಳನ್ನು ನಮಗೆ ನೇರವಾಗಿ ಸಂದಾಯಮಾಡಿ ಚಂದಾದಾರರಾಗುವವರಿಗೆ ನಿಮ್ಮೆಲ್ಲರ ಅಚ್ಚು ಮೆಚ್ಚಿನ "ಸಂಯುಕ್ತ ಕರ್ನಾಟಕ ಕ್ಯಾಲೆಂಡರ್-1996"ನ್ನು ಉಚಿತವಾಗಿ ಕಳಿಸಲಾಗುವುದು.

ನೀವು ಮಾಡಬೇಕಾದುದಿಷ್ಟೇ:

ಕೆಳಗೆ ಕೊಟ್ಟಿರುವ ಕೂಪನ್ನಿನಲ್ಲಿ ನಿಮ್ಮ ಹೆಸರು, ವಿಳಾಸವನ್ನು ಸ್ಫುಟವಾಗಿ ತುಂಬಿ, ಅದರೊಂದಿಗೆ ಒಂದು ವರ್ಷದ ಚಂದಾ ಹಣ, ರೂ. 70-00 ಗಳನ್ನು ಹುಬ್ಬಳ್ಳಿಯಲ್ಲಿರುವ ಯಾವುದೇ ಬ್ಯಾಂಕಿನ ಮೇಲೆ ತೆಗೆದ ಡಿಮಾಂಡ್ ಡ್ರಾಫ್ಟ್ ಅಥವಾ ಪೋಸ್ಟಲ್ ಆರ್ಡರ್ ಮೂಲಕವಾಗಲೀ ಇಲ್ಲವೇ ಮನಿಯಾರ್ಡರ್ ಮೂಲಕವಾಗಲೀ ಕಳಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ ಎಂಬುದನ್ನು ದಯವಿಟ್ಟು ಗಮನಿಸಿರಿ.

**ಕೆಳಗೆ ಕೊಟ್ಟಿರುವ ಕೂಪನ್‌ನೊಂದಿಗೆ ದಿ: 30-11-95ರೊಳಗಾಗಿ ಚಂದಾ ಹಣ ಕಳಿಸಿ ಕೊಟ್ಟು ಚಂದಾದಾರರಾಗುವವರಿಗೆ ಮಾತ್ರ ಈ ವಿಶೇಷ ಕೊಡುಗೆ ಯೋಜನೆ.**

### ಕಳಿಸಬೇಕಾದ ವಿಳಾಸ:

**ಪ್ರಸಾರಾಂಗ ವ್ಯವಸ್ಥಾಪಕರು,**
ಸಂಯುಕ್ತ ಕರ್ನಾಟಕ,
ಪೋಸ್ಟ ಬಾಕ್ಸ್ ನಂ. 30,
ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-580 020.

**ಪ್ರಸಾರಾಂಗ ವ್ಯವಸ್ಥಾಪಕರು,**
ಸಂಯುಕ್ತ ಕರ್ನಾಟಕ,
2, ಫೀಲ್ಡ್ ಮಾರ್ಷಲ್ ಕಾರ್ಯಪ್ಪ ರಸ್ತೆ,
ಬೆಂಗಳೂರು-560 025.

ಹೆಸರು:..............................................................................

ವಿಳಾಸ:..............................................................................

ಊರು:.......................................ಪಿನ್‌ಕೋಡ್:.......................

## ಲೋಕ ಶಿಕ್ಷಣ ಟ್ರಸ್ಟಿನ ಹೆಮ್ಮೆಯ ಪ್ರಕಟಣೆ

# ಚಾನೆಲ್ ಲಾಕ್ ಬಳಸಿ ಮಕ್ಕಳನ್ನು ಉಳಿಸಿ

• ಎಂ.ಆರ್.ಎಸ್.ರಾವ್

ಇದೀಗ ಟಿ.ವಿಯ ದಾಸರಾಗಿ ಬಿಟ್ಟಿವೆ ನಮ್ಮ ಮಕ್ಕಳು. ೧೦-೧೫ ಚಾನೆಲ್‌ಗಳ ಮೂಲಕ ಏನೆಲ್ಲವನ್ನೂ ಕೊಡುತ್ತಿರುವ ಈ 'ಮೂರ್ಖರ ಪೆಟ್ಟಿಗೆ'ಯೆದುರು ಕೂತು ಕೂತು ಅಭ್ಯಾಸ ಹಾಳು ಮಾಡಿಕೊಳ್ಳುತ್ತಿರುವ ಮಕ್ಕಳ ಸಂಖ್ಯೆ ಹೆಚ್ಚಿದೆ. ನೋಡಬಾರದ್ದನ್ನೂ ನೋಡಲು ಹಾತೊರೆಯುವಂತೆ ಮಾಡುವ ಚಾನೆಲ್‌ಗಳೂ ಇವೆ. ಮಗುವಿನಮನಸ್ಸು ವಿಕಾರಗೊಳ್ಳಲು ಇದಕ್ಕಿಂತ ಇನ್ನೇನು ಬೇಕು?

ಆದರೆ ಕೆಲವು ಹಿರಿಯರಿಗೂ ಟಿ.ವಿ. ನೋಡುವ ಚಟವಿದೆಯಲ್ಲ, ಇನ್ನಷ್ಟು ಚಾನೆಲ್‌ಗಳು ಬರುವಂತಾದರೆ ಎಷ್ಟು ಚೆನ್ನ ಎಂದುಕೊಳ್ಳುವವರೂ ಬಹಳ.

ಅಂದ ಹಾಗೆ, ನೀವು ನಿಮ್ಮ ಟಿ.ವಿ.ಯ ಮೂಲಕ ಎಷ್ಟು ಕಾರ್ಯಕ್ರಮಗಳನ್ನು ನೋಡಬಹುದು? ಆರು, ಏಳು, ಬಹಳವೆಂದರೆ ಹನ್ನೆರಡು ಕಾರ್ಯಕ್ರಮಗಳನ್ನು. ಆದರೆ ಸ್ಟಾರ್, ಎಟಿವಿಎನ್, ಜೈನ್, ಎಲ್ ಹೀಗೆ ದಿನಕ್ಕೊಂದು ಚಾನೆಲ್ಲುಗಳು ಉಪಗ್ರಹದ ಮೂಲಕ ತೂರಿಕೊಂಡು ಬರುತ್ತಿವೆಯಲ್ಲ, ಅವುಗಳನ್ನು ಹೇಗೆ ನೋಡುವುದು? ಒಂದು ಚಾನೆಲ್‌ನಿಂದ ಮತ್ತೊಂದು ಚಾನೆಲ್ಲಿಗೆ ಬದಲಿಸುತ್ತೀರಿ, ಅಲ್ಲವೆ? ಹೀಗೆ ಚಾನೆಲ್ಲುಗಳನ್ನು ಬದಲಾಯಿಸುವ ಗೊಂದಲವಿಲ್ಲದೆ ಹೊಸಹೊಸ ಚಾನೆಲ್ಲುಗಳನ್ನು ನೋಡುವುದು ಹೇಗೆ? ಹತ್ತಾರು ಸಾವಿರ ಸುರಿದು ಕೊಂಡ ಟೆಲಿವಿಷನ್ನನ್ನು ಮಾರಿ ಎಸ್ ಬ್ಯಾಂಡ್ ವ್ಯವಸ್ಥೆಯಿರುವ ಹೊಸಬಗೆಯ ಟೀವಿ ತೆಗೆದುಕೊಳ್ಳುವುದು, ಅಷ್ಟೆ. ಅದಕ್ಕಾಗಿ ಸರಿಸುಮಾರು ಇಪ್ಪತ್ತು ಸಾವಿರದಷ್ಟು ಹಣವನ್ನು ಮತ್ತೆ ಸುರಿಯಬೇಕು. 'ಅಷ್ಟು ಹಣ ಸುರಿಯಲು ನಾವೇನು ಕುಬೇರರಲ್ಲ' ಎಂದು ನೀವನ್ನಬಹುದು. ಹೌದು, ನಿಮ್ಮಂಥವರಿಗಾಗಿಯೇ ಪುಣೆಯ ಎಲೆಕ್ಟ್ರಾನಿಕ್ ತಜ್ಞರೊಬ್ಬರು ಒಂದು ಹೊಸಬಗೆಯ

ಬಹುದು-ಸಂಕೇತಗಳು ಗೊತ್ತಿದ್ದರಿಂದ.

ಅದು ಸರಿ. ಆದರೆ ನಾವು ಕೊಂಡದ್ದು ಹಳೆ ಮಾಡೆಲ್ಲು; ಚಾನೆಲ್ ಬದಲಿಸಬೇಕಾದಾಗ ಅಥವಾ ಧ್ವನಿಯನ್ನು ನಿಯಂತ್ರಿಸಬೇಕಾದಾಗ ಎದ್ದು ಹೋಗ ಬೇಕಾಗುತ್ತದೆ. ಬದಲು, ದೂರನಿಯಂತ್ರಣವನ್ನು ಕೂಡ ಆ ಸಾಧನದಲ್ಲಿ ಅಳವಡಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎನ್ನುವಿರಾ? ಅದನ್ನೂ ಮಾಡಿ

ಚಾನೆಲ್ ಲಾಕ್ ಉಪಕರಣದೊಂದಿಗಿನ ಟಿ.ವಿ.



ಉಪಕರಣವನ್ನು ನಿರ್ಮಿಸಿದ್ದಾರೆ. ವಿಸಿಆರ್ ಜೋಡಿಸುವಂತೆ ಅದನ್ನು ನಿಮ್ಮ ಟಿ.ವಿ.ಗೆ ಜೋಡಿಸಿದರಾಯಿತು. ಇದ್ದ ವ್ಯವಸ್ಥೆಯನ್ನು ಬದಲಿಸದೆ ೧೫೧ ಚಾನೆಲ್ಲುಗಳನ್ನು ನೋಡಬಹುದು.

ಇಷ್ಟೇ ಅಲ್ಲ, ಮಕ್ಕಳು ನೋಡಬಾರದಂತಹ ಚಾನೆಲ್ಲುಗಳಿದ್ದರೆ ವಿಶೇಷ ಸಂಕೇತಗಳ ಮೂಲಕ ಅವುಗಳನ್ನು ಪ್ರತಿಬಂಧಿಸಲೂಬಹುದು. ಮಕ್ಕಳು ಎಷ್ಟು ಪ್ರಯತ್ನಿಸಿದರೂ ಆ ಚಾನೆಲ್ಲುಗಳ ಕಾರ್ಯಕ್ರಮಗಳು ಪರದೆಯ ಮೇಲೆ ಮೂಡಿಬರುವುದಿಲ್ಲ. ನೀವೊಬ್ಬರು ಮಾತ್ರ ತೆರೆದುಕೊಳ್ಳುವಂತೆ ಮಾಡದ್ದಾರೆ ಪುಣೆಯ ತಜ್ಞರು. ಆ ಮೂಲಕ ಕುಳಿತಲ್ಲಿಯೇ ನೀವು ಚಾನೆಲ್ ಬದಲಿಸಬಹುದು, ಧ್ವನಿಯನ್ನು ನಿಯಂತ್ರಿಸಬಹುದು, ಟಿ.ವಿ. ಶುರು ಮಾಡಬಹುದು, ಬಂದ್ ಮಾಡಬಹುದು. ಅಲ್ಲದೆ ಇನ್ನೂ ಎಂತೆಂತಹುದೋ ಪ್ರಯೋಜನಗಳನ್ನೂ ಪಡೆಯಬಹುದು.

ಇಷ್ಟು ಪ್ರಯೋಜನ ಕೊಡುತ್ತದೆಂದ ಮೇಲೆ ಈ ಉಪಕರಣ ತೀರಾ ದುಬಾರಿಯಾಗಿದೆ ಎಂದು ಮಾತ್ರ ಭಾವಿಸಬೇಡಿ. ಬೆಲೆ ಸರಿಸುಮಾರು ಮೂರೂವರೆಸಾವಿರ ರೂಪಾಯಿಗಳಷ್ಟು. ●

ಮುಂಬಯಿಯಲ್ಲಿ ನಡೆದ ಸ್ವರ್ಣಮಹೋತ್ಸವ ಕ್ರಿಕೆಟ್ ಟೆಸ್ಟ್ ಪಂದ್ಯದಲ್ಲಿ ಭಾರತದ ವಿರುದ್ಧ ಜಯಭೇರಿ ಬಾರಿಸಿದ ನಂತರ ಆಡಿದ ೧೨ ಟೆಸ್ಟ್ ಪಂದ್ಯಗಳಲ್ಲಿ ಇಂಗ್ಲೆಂಡ್ ಒಂದರಲ್ಲೂ ಗೆಲುವಿನ ಮಾಲೆ ಧರಿಸಿರಲಿಲ್ಲ. ಈ ಎಲ್ಲ ಪಂದ್ಯಗಳನ್ನು ವಿವಾದಗಳಿಗೆ ಹೆಸರಾಗಿರುವ ಇಯಾನ್ ಬಾಥಂ ಅವರ ನಾಯಕತ್ವದಲ್ಲಿ ಆಡಲಾಗಿತ್ತು.

ಹನ್ನೆರಡು ಟೆಸ್ಟ್‌ಗಳ ಗೆಲುವಿನ ದಾಹವನ್ನು ನೀಗಿಸಿಕೊಳ್ಳುವ ಗುರಿಯೊಂದಿಗೆ ಆಸ್ಟ್ರೇಲಿಯ ವಿರುದ್ಧ ಕಣಕ್ಕಿಳಿದಿದ್ದ ಇಂಗ್ಲೆಂಡ್ ಪ್ರಥಮ ಟೆಸ್ಟ್‌ನಲ್ಲಿ ಸೋತು ಮತ್ತಷ್ಟು ನಿರಾಶೆ ಹೊಂದಿತ್ತಾದರೂ ಎರಡನೆಯದರಲ್ಲಿ 'ಡ್ರಾ' ಮಾಡಿಕೊಳ್ಳಲು ಸಫಲವಾಗಿ ಮತ್ತೊಂದು ಪರಾಜಯ ಕಾಣಲಿಲ್ಲವಲ್ಲ ಎಂಬ ಸಮಾಧಾನ ಪಡೆದಿತ್ತು.

ಆದರೆ ಈ ಪಂದ್ಯದ ನಂತರ ಇಂಗ್ಲೆಂಡ್ ತಂಡದ ನಾಯಕತ್ವಕ್ಕೆ ರಾಜೀನಾಮೆ ನೀಡಿದ ಬಾಥಂ ಆಯ್ಕೆದಾರರಿಗೆ ಅಚ್ಚರಿ ಉಂಟು ಮಾಡಿದ.

ಬಾಥಂ ಸ್ಥಾನಕ್ಕೆ ಇಂಗ್ಲೆಂಡ್ ಆಯ್ಕೆದಾರರು ಸೂಕ್ತ ನಾಯಕನ ಅನ್ವೇಷಣೆ ನಡೆಸಿ ಕೊನೆಗೆ ಅತ್ಯಂತ ಅನುಭವಿ ಮತ್ತು ಚಾಣಾಕ್ಷ ಆಟಗಾರ ಮೈಕ್ ಬ್ರೇರ್ಲಿಯನ್ನು ಆಯ್ಕೆ ಮಾಡಿದರು. ಮೈಕ್ ನೇತೃತ್ವದ ಇಂಗ್ಲೆಂಡ್ ತನ್ನ ಬದ್ಧ ಎದುರಾಳಿ ಆಸ್ಟ್ರೇಲಿಯಕ್ಕೆ ತಿರುಗೇಟು ನೀಡಲು ಮೂರನೇ ಟೆಸ್ಟಿಗೆ ಅಣಿಯಾಯಿತು. ನಾಯಕನ ಹೊಣೆಯನ್ನು ಕಳಚಿಕೊಂಡು ನಿಶ್ಚಿಂತೆಯ ಉಸಿರು ಬಿಟ್ಟ ಇಯಾನ್ ಬಾಥಂ ತನ್ನ ಹಿಂದಿನ ಸಾಮರ್ಥ್ಯವನ್ನು ಮತ್ತೆ ಪ್ರದರ್ಶಿಸಲು ಸಜ್ಜುಗೊಂಡ.

## ಮೈದಾನದಲ್ಲಿ

ಆರು ಟೆಸ್ಟ್‌ಗಳ ಸರಣಿಯಲ್ಲಿ ೧-೦ ಮುನ್ನಡೆ ಪಡೆದಿದ್ದ ಆಸ್ಟ್ರೇಲಿಯ ಹೆಡಿಂಗ್ಲೆ ಮೈದಾನದಲ್ಲಿ ಆರಂಭಗೊಂಡ ಮೂರನೆ ಪಂದ್ಯದಲ್ಲಿ ಮೊದಲು ಬ್ಯಾಟಿಂಗ್ ಮಾಡಲುತೊಡಗಿ ಮೊದಲೆರಡು ದಿನ ನಿಧಾನಗತಿಯ ಆಟ ಪ್ರದರ್ಶಿಸಿ ಪ್ರೇಕ್ಷಕ ಸಮೂಹದ ತಾಳ್ಮೆ ಕೆಣಕಿತಲ್ಲದೆ ಇಂಗ್ಲೆಂಡಿನ ಬೌಲರ್ ಹಾಗೂ ಕ್ಷೇತ್ರರಕ್ಷಕರಿಗೆ ಬೆವರಿಳಿಯುವಂತೆ ಮಾಡಿತು.

ಐದು ದಿನಗಳ ಪಂದ್ಯದಲ್ಲಿ ಓಟಗಳಿಕೆಗೆ ಅವಸರ ಏಕೆ ಎಂಬಂತೆ ಆಡಿದ ಆರಂಭಿಕ ಆಟಗಾರ ಜೆ. ಡೈಸನ್ (೧೦೨) ಚೊಚ್ಚಲ ಶತಕ ಬಾರಿಸಿ ಮೊದಲ ವಿಕೆಟ್ ಪಾಲುಗಾರಿಕೆಯಲ್ಲಿ ವುಡ್ (೩೪)ನೊಂದಿಗೆ ೫೫ ಓಟ ಸೇರಿಸಿ ತಂಡಕ್ಕೆ ಭದ್ರ ಅಡಿಪಾಯ ಹಾಕಿದ.

ಒಂದನೆ ವಿಕೆಟ್ ಪಡೆದ ಇಂಗ್ಲೆಂಡ್ ಎರಡನೆಯದನ್ನು ಬಲಿಹಾಕಲು ತಿಣುಕಾಡಬೇಕಾಯಿತ




• ಆದಿಕೇಶವ

ಅಂದಿನ ಆಟ !
ಇಂದಿನ ನೋಟ !

# ಹೆಡಿಂಗ್ಲೆಯಲ್ಲಿ ಚಮತ್ಕಾರ ಮೆರೆದ ಬಾಥಂ ಮತ್ತು ವಿಲ್ಲಿಸ್

ಪಂದ್ಯ: ಇಂಗ್ಲೆಂಡ್-ಆಸ್ಟ್ರೇಲಿಯ ಮೂರನೆ ಟೆಸ್ಟ್ ೧೯೮೧
ಸ್ಥಳ: ಹೆಡಿಂಗ್ಲೆ, ದಿನಾಂಕ: ಜುಲೈ ೧೬, ೧೭, ೧೮, ೨೦, ೨೧.

ಲ್ಲದೆ ಬಹಳ ಸಮಯ ಕಾಯುವಂತಾಯಿತು. ವುಡ್‌ನೊಂದಿಗೆ ಅರ್ಧ ಶತಕದ ಜೊತೆಯಾಟ ನೀಡಿದ್ದ ಡೈಸನ್ ಅನಂತರ ಚಾಪೆಲ್ (೨೭) ಜತೆ ೯೪ ಓಟ ಸೇರಿಸಿ ಆತಿಥೇಯರಿಗೆ ಬೃಹತ್ ಸ್ಕೋರಿನ ಬೆದರಿಕೆ ಒಡ್ಡಿದ. ಕೊನೆಗೂ, ಡೈಸನ್, ಡಿಲ್ಲೆನ ಬಲಿಗೆ ಬಿದ್ದಾಗ ಇಂಗ್ಲೆಂಡ್ ಪ್ರವಾಸಿಗರನ್ನು ಆಲೌಟ್ ಮಾಡಿದಷ್ಟು ಸಂತಸಪಟ್ಟಿತು.

ಆದರೆ ಡೈಸನ್ ಪತನದ ನಂತರ ತಂಡದ ನಾಯಕ ಕಿಮ್ ಹ್ಯೂಸ್ (೮೯) ಮತ್ತು ಗ್ರಾಹಂ ಯಾಲಪ್ (೫೮) ಇಂಗ್ಲೆಂಡಿಗೆ ತಲೆನೋವಾದರು. ಇವರಿಬ್ಬರ ತಾಳ್ಮೆಯ ಆಟ ನೋಡುಗರಿಗೆ ತಲೆ ಚಿಟ್ಟು ಹಿಡಿಸಿದರೆ ಆಸ್ಟ್ರೇಲಿಯಕ್ಕೆ ಉತ್ತಮ ಮೊತ್ತ ದೊರಕಿಸಿ ಇಂಗ್ಲೆಂಡಿಗೆ ಚಿಂತೆ ಹುಟ್ಟಿಸಿತು.

ಆಸ್ಟ್ರೇಲಿಯದವರನ್ನು ಪೂರ್ಣವಾಗಿ ಔಟ್ ಮಾಡುವದು ಇಂಗ್ಲೆಂಡಿಗೆ ಅಸಾಧ್ಯವಾಗತೊಡಗಿದಾಗ ತಂಡದ ನಾಯಕ ಹ್ಯೂಸ್ ೪೦೧ ಓಟಗಳಿಗೆ ತಮ್ಮ ಪ್ರಥಮ ಇನಿಂಗ್ಸನ್ನು ಡಿಕ್ಲೇರ್ ಮಾಡಿಕೊಂಡ. ಆಗ ಆಸ್ಟ್ರೇಲಿಯದ ೯ ವಿಕೆಟ್‌ಗಳು ಬಿದ್ದಿದ್ದವು.

ಪಂದ್ಯದ ಮೊದಲನೆ ದಿನ ತೀರಾ ಸಪ್ಪೆ ಬೌಲಿಂಗ್ ಮಾಡಿದ್ದ ಇಯಾನ್ ಬಾಥಮ್ ಎರಡನೆ ದಿನದ ಚಹಾ ವಿರಾಮದ ನಂತರ ಆಸ್ಟ್ರೇಲಿಯಕ್ಕೆ ಮಾರಕವಾಗಿ ೩೫ ಓಟಗಳಿಗೆ ಐದು ವಿಕೆಟ್ ಎಗುರಿಸಿ ಒಟ್ಟು ೯೫ ಓಟಗಳಿಗೆ ಆರು ವಿಕೆಟ್‌ಗಳನ್ನು ಬಲಿಹಾಕಿದ. ತಂಡದ ಉಳಿದವರಿಂದ ಹೇಳಿಕೊಳ್ಳುವಂತಹ ಬೌಲಿಂಗ್ ಪ್ರದರ್ಶನ ಬರಲೇ ಇಲ್ಲ.

ಮೂರನೆ ಟೆಸ್ಟ್ ಗೆಲ್ಲುವ ಕನಸು ಕಂಡಿದ್ದ ಇಂಗ್ಲೆಂಡ್ ತನ್ನ ಪ್ರಥಮ ಸರದಿಯನ್ನು ತುಂಬಾ ಕೆಟ್ಟದಾಗಿ ಆರಂಭಿಸಿತು. ಬಾಥಂನಿಂದ ನಾಯಕತ್ವದ ಹೊಣೆ ಹೊತ್ತುಕೊಂಡಿದ್ದ ಮೈಕ್ ಬ್ರೇರ್ಲಿ ಇಂತಹ ಶೋಚನೀಯ ಪರಿಸ್ಥಿತಿ ನಿರೀಕ್ಷಿಸಿದ್ದಿಲ್ಲ. ಅತಿರಥ ಮಹಾರಥ ಬ್ಯಾಟ್ಸ್‌ಮನ್ ಎನಿಸಿದ್ದ ಗೂಚ್ (೨) ಬಾಯ್ಕಾಟ್ (೧೨) ಬ್ರೆರ್ಲಿ (೧೦) ಪೆವಿಲಿಯನ್‌ನಲ್ಲಿ ತಮ್ಮ ಕೆಟ್ಟ ಆಟದ ಬಗ್ಗೆ ತಲೆಕೆಡಿಸಿಕೊಂಡು ಕುಳಿತಿದ್ದರೆ ಇಲ್ಲಿ ಇಂಗ್ಲೆಂಡಿನ ಹಣೆಬರಹ ನಿರ್ಧಾರವಾಗಿಬಿಟ್ಟಿತ್ತು.

೧೧೨ರ ಮೊತ್ತಕ್ಕೆ ಆರು ವಿಕೆಟ್‌ಗಳು ನಿರ್ಗಮನವಾದಾಗಲೇ ತಂಡಕ್ಕೆ ಫಾಲೋಆನ್ ಖಚಿತವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಮೈದಾನದಲ್ಲಿ ಕಲ್ಲು ಹೃದಯ ಮಾಡಿಕೊಂಡು ಇನ್ನೂ ಉಳಿದಿದ್ದ ಬಾಥಂ (೫೦) ಆಸ್ಟ್ರೇಲಿಯದ ಬೌಲರ್‌ಗಳಿಗೆ ಸಿಂಹಸ್ವಪ್ನವಾಗಿದ್ದ. ಏನಾದರೂ ಮಾಡಿ ತಂಡವನ್ನು ಫಾಲೋಆನ್ ನಿಂದ 'ಬಚಾವ್' ಮಾಡಬೇಕು ಎಂದು ನಿರ್ಧಾರಮಾಡಿದ್ದ ಬಾಥಂ ಸರಿಯಾದ ಸಂಗಾತಿ ಸಿಗದೆ ಕೊನೆಗೂ ಲಿಲ್ಲಿಗೆ ಬಲಿಬಿದ್ದಾಗ ಆಸ್ಟ್ರೇಲಿಯ ಗೆದ್ದವರಂತೆ ಕುಣಿದಾಡಿತು. ಮುಂದಿನ ಮೂವರು ಇವರಿಗೆ ಸಮಸ್ಯೆ ಎನಿಸಲೇ ಇಲ್ಲ.

ಇಂಗ್ಲೆಂಡಿನ ಪರದಾಟದ ಆಟ ಮುಗಿದಾಗ ಸ್ಕೋರು ಕೇವಲ ೧೭೪. ಕಡೆಗೂ "ಫಾಲೋಆನ್ ಭೂತ" ತಪ್ಪಲೇ ಇಲ್ಲ. ಆತಿಥೇಯರಿಗೆ

'ಭೂತ'ಗಳಂತೆ ಅವತರಿಸಿದ ಡೆನಿಸ್ ಲಿಲ್ಲಿ ನಾಲ್ಕು, ಅಲ್ಡರ್‌ಮನ್ ಮತ್ತು ಲಾಸನ್ ತಲಾ ಮೂರು ವಿಕೆಟ್‌ಗಳನ್ನು ಹೆಕ್ಕಿದರು. ಆಸ್ಟ್ರೇಲಿಯ ಇಂಗ್ಲೆಂಡನ್ನು ಪೂರ್ತಿಯಾಗಿ ಎದುರಿಸಲು ಕೇವಲ ಈ ಮೂವರನ್ನು ಬಳಸಿ ಭರ್ಜರಿ ಯಶ ಕಂಡಿತು.

ಫಾಲೋಆನ್ ಪಡೆದು ಎರಡನೆ ಇನಿಂಗ್ಸ್ ಆರಂಭಿಸಿದ ಇಂಗ್ಲೆಂಡ್ ಇದರಲ್ಲಾದರೂ ಉತ್ತಮ ಮೊತ್ತ ಗಳಿಸಿ ಆಸ್ಟ್ರೇಲಿಯಕ್ಕೆ ಸವಾಲು ಒಡ್ಡುವ ಲೆಕ್ಕ ಹಾಕಿತ್ತು. ಆದರೆ ಡೆನಿಸ್ ಲಿಲ್ಲಿ ಆರಂಭದಲ್ಲೇ ಬಿರುಗಾಳಿಯಂತೆ ಬಂದು ಸ್ಕೋರ್ ಬೋರ್ಡ್‌ನಲ್ಲಿ ಇನ್ನೂ ಇಂಗ್ಲೆಂಡಿನ ಖಾತೆ ತೆರೆಯುವ ಮೊದಲೇ ಗೂಚ್ ಅವರ ವಿಕೆಟ್ ಉದುರಿಸಿ ತಡೆದುಕೊಳ್ಳಲಾರದ ಆಘಾತ ನೀಡಿದ. ಈ ಹಂತದಲ್ಲಿ ಅಂಪೈರ್ ಬೆಳಕಿನ ಅಭಾವದ ನೆಪವೊಡ್ಡಿ ಆಟವನ್ನು ನಿಲ್ಲಿಸಿದ್ದು ಆಸ್ಟ್ರೇಲಿಯಕ್ಕೆ ಅಚ್ಚರಿ ಉಂಟು ಮಾಡಿದರೆ ಪ್ರೇಕ್ಷಕ ಗಣದಲ್ಲಿ ಸಾಕಷ್ಟು ಗೊಂದಲ ಹುಟ್ಟಿಸಿತು.

ಕಡೆಗೆ ಆಟ ಆರಂಭವಾದಾಗ ಇಂಗ್ಲೆಂಡಿನ ಪರಿಸ್ಥಿತಿಯಲ್ಲಿ ಏನೂ ಸುಧಾರಣೆ ಕಾಣಲೇ ಇಲ್ಲ. ಸ್ಕೋರು ಇನ್ನೂ ೪೧ ಆಗಿರಲಿಲ್ಲ ಆಗಲೇ ನಾಲ್ಕು ಪ್ರಮುಖ ಬ್ಯಾಟ್ಸ್‌ಮನ್‌ಗಳು ಪೆವಿಲಿಯನ್‌ನಲ್ಲಿ ತಮ್ಮನ್ನು ತಾವೇ ಹಳಿದುಕೊಳ್ಳುತ್ತ ಕುಳಿತಿದ್ದರು.

ಮೊದಲ ಸರದಿಯಲ್ಲಿ ತಂಡದ ಪೂರ್ತಿ ಮಾನ ಹೋಗುವುದನ್ನು ತಡೆದಿದ್ದ ಇಯಾನ್ ಬಾಥಂ ಈಗಲೂ ಮತ್ತೆ ನೆರವಿಗೆ ಬರಬೇಕಾಯಿತು. ಆಸ್ಟ್ರೇಲಿಯದ ಬೌಲಿಂಗ್‌ನಲ್ಲಿ ಸತ್ವವೇ ಇಲ್ಲ ಎನ್ನುವಂತೆ ಮನಮೋಹಕ ಬ್ಯಾಟಿಂಗ್ ಪ್ರದರ್ಶನ ನೀಡಿದ ಬಾಥಂ ಹೆಡಿಂಗ್ಲೆ ಮೈದಾನದಲ್ಲಿ ಚಮತ್ಕಾರ ಮೆರೆದನು. ಆಗ ಪ್ರತಿಯೊಬ್ಬರ ಬಾಯಲ್ಲಿ ಆಡುತ್ತಿದ್ದುದು ಒಂದೇ ಹೆಸರು 'ಬಾಥಂ.'

ನಾಲ್ಕನೆ ದಿನದ ಆಟ. ಇಂಗ್ಲೆಂಡ್ 'ಫಾಲೋ ಆನ್' ಪೀಡೆಯಿಂದ ಪೂರ್ತಿ ಹೊರಬರಲು ಇನ್ನೂ ೯೨ ಓಟಗಳಿಸಬೇಕು. ಆಗಲೇ ಏಳು ವಿಕೆಟ್‌ಗಳು ಪೆವಿಲಿಯನ್ ಕಂಡಿವೆ. ಡೆನಿಸ್ ಲಿಲ್ಲಿ, ಆಲ್ಡರ್‌ಮನ್ ಇಂಗ್ಲೆಂಡಿನ ಬ್ಯಾಟ್ಸಮನ್‌ಗಳಿಗೆ ಪಿಚ್‌ನಲ್ಲಿ ತಳಊರಲು ಬಿಡುತ್ತಲೇ ಇಲ್ಲ.

ಈ ಹಂತದಲ್ಲಿ ಓಟ ಗಳಿಸುವದು ಬೇಡವೇ ಬೇಡ ಎನ್ನುವಂತೆ ನಿದ್ದೆ ಬರಿಸುವಂಥ ಆಟ ಪ್ರದರ್ಶಿಸಿದ ಬಾಯ್ಕಾಟ್ ಆರನೆ ವಿಕೆಟ್ ರೂಪದಲ್ಲಿ ಬೀಳುವ ಮುನ್ನ ಮೂರುವರೆ ತಾಸು ನಿಂತು ೪೬ ಓಟ ಗಳಿಸಿದ. ಬಾಯ್ಕಾಟ್ ವಿಕೆಟ್ಟನ್ನು ಆಲ್ಡರ್‌ಮನ್ ಕಬಳಿಸುತ್ತಿದ್ದಂತೆಯೇ ಆಸ್ಟ್ರೇಲಿಯನ್ನರು ಗೆದ್ದೆವೆಂಬ ಭಾವನೆಯಿಂದ ತಮ್ಮ ತಮ್ಮಲ್ಲಿ ಅಭಿನಂದನೆ ಸಲ್ಲಿಸಲು ಶುರುಮಾಡಿದರು.

ಆದರೆ ಬಾಥಂ ಇನ್ನೂ ಮೈದಾನದಲ್ಲಿದ್ದ. ಹೀಗಾಗಿ ಇಂಗ್ಲೆಂಡ್ ಇನ್ನೂ ಪಂದ್ಯದಲ್ಲಿ ಆಸೆ ಇರಿಸಿಕೊಂಡಿತ್ತು. ಆಸ್ಟ್ರೇಲಿಯದ ಬೌಲಿಂಗನ್ನು ಲೀಲಾಜಾಲವಾಗಿ ಎದುರಿಸುತ್ತಿದ್ದ ಬಾಥಂ ಆಟದ ಗತಿಯನ್ನೇ ಬದಲಾಯಿಸಿಬಿಟ್ಟ. ಮೊದಲ ಆರು ಮಂದಿಯನ್ನು ಸುಲಭವಾಗಿ ನುಂಗಿಹಾಕಿದ್ದ ಆಸ್ಟ್ರೇಲಿಯನ್ನರನ್ನು ಇವನ ಭರಾಟೆಯ ಬ್ಯಾಟಿಂಗ್ ಬೆರುಗುಗೊಳಿಸಿಬಿಟ್ಟಿತು. ಈ ಹಿಂದೆ ತಂಡದ ನಾಯಕತ್ವದಲ್ಲಿ ಪೂರ್ತಿ ವಿಫಲತೆ ಅನುಭವಿಸಿದ್ದ ಬಾಥಂ ಈ ಆಟದಿಂದ ಪ್ರತಿಯೊಬ್ಬರ ಮನದಲ್ಲಿ 'ಹೀರೋ' ಆಗಿ ಉಳಿದು ಬಿಟ್ಟ.

ಡೆನಿಸ್ ಲಿಲ್ಲಿ, ಅಲ್ಡರ್‌ಮನ್, ಲಾಸನ್ ಅವರ ಬೌಲಿಂಗನ್ನು ಮನ ಬಂದಂತೆ ಹಣಿದ ಬಾಥಂ ತನ್ನ ಆಕ್ರಮಣಕಾರಿ ಶಾಟ್‌ಗಳಿಂದ ಆಸ್ಟ್ರೇಲಿಯನ್ನರನ್ನು ಮೈದಾನದ ತುಂಬಾ ಬಿಟ್ಟೂ ಬಿಡದೆ ಓಡಾಡಿಸಿದ. ನಾಲ್ಕನೆ ದಿನದ ಆಟ ಮುಗಿದಾಗ ಇಂಗ್ಲೆಂಡ್ ೧೨೪ ಓಟಗಳನ್ನು ಪಡೆಯಿತಲ್ಲದೆ ಕೊನೆಯ ಜೋಡಿ ಬಾಥಂ ಹಾಗೂ ಬಾಬ್ ವಿಲ್ಲಿಸ್ ಇನ್ನೂ ಅಂಕಣದಲ್ಲಿ ಉಳಿದಿದ್ದರು.

ಪಂದ್ಯದ ಐದನೆ ಹಾಗೂ ಕಡೆಯ ದಿನದ ಆಟ ಆರಂಭವಾದಾಗ ಬಾಥಂ, ವಿಲ್ಲಿಸ್ ಔಟಾಗುವ ಮುನ್ನ ತನ್ನ ಗಳಿಕೆಯನ್ನು ೧೪೯ಕ್ಕೆ ಹೆಚ್ಚಿಸಿಕೊಂಡ. ಈ ಶತಕದ ಆಟ ಇಂಗ್ಲೆಂಡ್ ಅಭಿಮಾನಿಗಳ ಮನದಲ್ಲಿ ಶಾಶ್ವತವಾಗಿ ಉಳಿಯಿತು. ಆಸ್ಟ್ರೇಲಿಯದ ಪರ ಅಲ್ಡರ್‌ಮನ್ ೧೩೫ ಓಟ ನೀಡಿ ಆರು ವಿಕೆಟ್‌ಗಳನ್ನು ಬಲಿ ಹಾಕಿದ.

ಇಂಗ್ಲೆಂಡನ್ನು ೩೫೬ ಓಟಗಳಿಗೆ ಉರುಳಿಸಿದ ಆಸ್ಟ್ರೇಲಿಯನ್ನರಿಗೆ ನಿಚ್ಚಳ ಜಯ ಸಾಧಿಸಲು ಕೇವಲ ೧೩೦ ಓಟಗಳ ಆವಶ್ಯಕತೆಯಿತ್ತು. ಪಂದ್ಯ ಮುಗಿ



ಬಾಥಂ: ಹೊಡೆತದ ಒಂದು ಭಂಗಿ

ಯಲು ಇನ್ನೂ ಸಾಕಷ್ಟು ಸಮಯವಿದ್ದದ್ದರಿಂದ ಸಹಜವಾಗಿಯೇ ಇವರಿಗೆ ಗೆಲುವು ನಿಶ್ಚಿತ ಎಂಬ ತೀರ್ಮಾನಕ್ಕೆ ಪ್ರತಿಯೊಬ್ಬರು ಬಂದಿದ್ದರು.

ಗೆಲುವಿನ ಕನಸಿನೊಂದಿಗೆ ಎರಡನೆ ಇನಿಂಗ್ಸ್ ಆರಂಭಿಸಿದ ಕಾಂಗರೂ ತಂಡದ ಸ್ಕೋರು ೧೩ ದಾಟಿರಲಿಲ್ಲ ಆಗಲೇ ವುಡ್(೧೦)ನನ್ನು ಕಳೆದುಕೊಂಡು ಆಘಾತ ಅನುಭವಿಸಿತು. ಭರ್ಜರಿ ಶತಕ ಬಾರಿಸಿ ಪ್ರೇಕ್ಷಕ ಗಣದಲ್ಲಿ 'ಹೀರೋ' ಆಗಿದ್ದ ಬಾಥಂ ಮೊದಲ ವಿಕೆಟ್ ಕಬಳಿಸಿ ಆತಿಥೇಯರ ಶಿಬಿರದಲ್ಲಿ ಉತ್ಸಾಹ ಮೂಡಿಸಿದ.

ಇದರಿಂದ ವಿಚಲಿತನಾಗದ ಆರಂಭಿಕ ಬ್ಯಾಟ್ಸ್‌ಮನ್ ಡೈಸನ್ (೩೪), ಚಾಪೆಲ್ (೮), ಅವನೊಂದಿಗೆ ನಿಧಾನವಾಗಿ. ಓಟ ಸೇರಿಸುತ್ತ ಸ್ಕೋರನ್ನು ೫೬ಕ್ಕೆ ಕೊಂಡೊಯ್ದ. ಆದರೆ ಕ್ರಿಕೆಟ್‌ನಲ್ಲಿ ಮುಂದೆ ಹೀಗೇ ಆಗುತ್ತದೆ ಎಂದು ಹೇಳುವದು ತುಂಬಾ ಕಷ್ಟ. ಇಲ್ಲಿಯೂ ಅದೇ ರೀತಿ ಆಯಿತು. ಯಾವುದೇ ಅಡೆತಡೆಯಿಲ್ಲದೆ ನಿಧಾನವಾಗಿ ಆಸ್ಟ್ರೇಲಿಯನ್ನರ ಕಡೆ ಹೊರಟಿದ್ದ ವಿಜಯಲಕ್ಷ್ಮಿಯನ್ನು ಬಾಬ್ ವಿಲ್ಲಿಸ್ ಅಡ್ಡಗಟ್ಟಿದ.

ಕಾಂಗರೂ ತಂಡದ ಸ್ಕೋರು ಒಂದು ವಿಕೆಟ್‌ಗೆ ೫೬ ಆಗಿದ್ದಾಗ ತನ್ನ ಬೌಲಿಂಗ್ ತುದಿಯನ್ನು ಬದಲಾಯಿಸಿಕೊಂಡ ವಿಲ್ಲಿಸ್ ಬಲವಾದ ಗಾಳಿಯ ಬೆಂಬಲ ಪಡೆದು ಎದುರಾಳಿಯ ಬ್ಯಾಟಿಂಗ್ ಬುಡವನ್ನೇ ಕತ್ತರಿಸಿ ಒಗೆದಿದ್ದಲ್ಲದೆ ತನ್ನ ಜೀವನದ ಶ್ರೇಷ್ಠಮಟ್ಟದ ಬೌಲಿಂಗ್ ಪ್ರದರ್ಶನ ನೀಡಿ ಇಂಗ್ಲೆಂಡಿಗೆ ಹಿಂದೆಂದೂ ಕಂಡಿರದಂತಹ ಅವಿಸ್ಮರಣೀಯ, ಅಭೂತಪೂರ್ವ ೧೮ ಓಟಗಳ ಗೆಲುವು ತಂದುಕೊಟ್ಟ. ವಿಕೆಟ್ ಹಿಂದೆ ಬಲಿಗಳಿಗಾಗಿ ಕಾದು ನಿಂತಿದ್ದ ಬಾಬ್ ಟೇಲರ್ ಏಳು ಕ್ಯಾಚ್‌ಗಳನ್ನು ಹಿಡಿದು ಪ್ರಥಮ ದರ್ಜೆ ಕ್ರಿಕೆಟ್‌ನಲ್ಲಿ ಜಾನ್ ಮುರ್ರೆ ಸ್ಥಾಪಿಸಿದ್ದ ೧೨೭೦ ಕ್ಯಾಚ್‌ಗಳ ವಿಶ್ವದಾಖಲೆಯನ್ನು ತನ್ನ ಹೆಸರಿಗೆ ಬರೆದುಕೊಂಡ.

ಆಸ್ಟ್ರೇಲಿಯ ೧೧೧ ಓಟಗಳಿಗೆ ಪೂರ್ತಿ ಶರಣಾಗಿ ತನ್ನನ್ನು ತಾನೇ ಶಪಿಸಿಕೊಂಡಿತು.

ಆಸ್ಟ್ರೇಲಿಯದ ಕಡೆಯ ವಿಕೆಟ್ ರೂಪದಲ್ಲಿ

ಲಿಲ್ಲಿ (೧೭) ವಿಲ್ಲಿಸ್‌ಗೆ ಬಲಿಯಾಗುತ್ತಿದ್ದಂತೆಯೇ ಇಡೀ ಮೈದಾನ ಕಿವಿ ಹರಿದು ಹೋಗುವಂತಹ ಚಪ್ಪಾಳೆಯಿಂದ ಸ್ತಬ್ಧವಾಗಿಬಿಟ್ಟಿತ್ತು. ಒಂದು ಕ್ಷಣ ಇಂಗ್ಲೆಂಡಿಗಾಗಲಿ, ಆಸ್ಟ್ರೇಲಿಯನ್ನರಿಗಾಗಲಿ ಏನಾಯಿತೆಂಬುದು ಗೊತ್ತಾಗಲೇ ಇಲ್ಲ. ಪ್ರೇಕ್ಷಕ ಸಮೂಹ ಇಂಗ್ಲೆಂಡಿನ ಈ ರೋಚಕ ಗೆಲುವಿನಿಂದ ಸುಮಾರು ಹೊತ್ತು ಹುಚ್ಚೆದ್ದು ಕುಣಿದಾಡುತ್ತಲೇ ಇತ್ತು.

ಟೆಸ್ಟ್ ಪಂದ್ಯದಲ್ಲಿ 'ಫಾಲೋ ಆನ್' ಪಡೆದು ನಂತರ ಜಯದಾಖಲು ಮಾಡಿದ ಈ ಶತಮಾನದ ಮೊದಲ ತಂಡ ಎಂಬ ಇತಿಹಾಸ ಸೃಷ್ಟಿಸಿದ ಇಂಗ್ಲೆಂಡ್ ದಾಖಲೆಯ ಪುಸ್ತಕದಲ್ಲಿ ತನ್ನ ಹೆಸರು ಬರೆಯಿತು.

೪೩ ಓಟಗಳಿಗೆ ಎಂಟು ವಿಕೆಟ್‌ಗಳನ್ನು ಎಗುರಿಸಿದ ವಿಲ್ಲಿಸ್ ಇದೇನು ಕನಸಲ್ಲವಷ್ಟೆ ಎಂದು ತನ್ನನ್ನು ತಾನೇ ಚಿವುಟಿಕೊಂಡು ನೋಡುತ್ತಿದ್ದ. ಇಂಗ್ಲೆಂಡ್‌ಪರ ಬ್ಯಾಟಿಂಗ್‌ನಲ್ಲಿ ಬಾಥಂ ಮತ್ತು ಬೌಲಿಂಗ್‌ನಲ್ಲಿ ಬಾಬ್ ವಿಲ್ಲಿಸ್‌ನ ಚಮತ್ಕಾರ ಕಂಡ ನಾಯಕ ಬ್ರೇರ್ಲಿ ಸಂತಸದ ಕಣ್ಣೀರೇ ಹರಿಸಿದ.

ಇಯಾನ್ ಬಾಥಂ ಹೇಳುತ್ತಾರೆ "ಗ್ರಾಹಂ ಡಿಲ್ಲೆ ನನ್ನನ್ನು ಸೇರಿಕೊಂಡಾಗ ನಾನು ಅವನಿಗೆ ಒಂದು ಮಾತು ಹೇಳಿದೆ, 'ಓಟ ಗಳಿಕೆಗೆ ಅವಸರ ಬೇಡ. ಎಂದಿನಂತೆ ನಮ್ಮ ಆಟ ನಾವು ಆಡೋಣ.' ಇದೇ ಆಟ ಕ್ರಮೇಣ ನಮ್ಮಲ್ಲಿ ಆತ್ಮ ವಿಶ್ವಾಸ ಹುಟ್ಟಿಸಿತು. ಮುಂದೆ ನಾನು ಶತಕ ಗಳಿಸಿದೆ. ಆದರೆ ಇಂಗ್ಲೆಂಡಿನ ಅಚ್ಚರಿಯ ಚೇತರಿಕೆಗೆ ಡಿಲ್ಲೆನ ಬೆಂಬಲವೇ ಕಾರಣ. ನನಗೆ ಶತಕ ತಂದುಕೊಟ್ಟ ಈ ಪಂದ್ಯ ಅವಿಸ್ಮರಣೀಯ."

ಬಾಬ್ ವಿಲ್ಲಿಸ್ "ಹೊ! ಏನು ಹೇಳಬೇಕೆಂಬುದು ಇನ್ನೂ ತನಕ ಹೊಳೆಯುತ್ತಲೇ ಇಲ್ಲ. ಬಹುತೇಕ ಸೋಲೇ ಖಚಿತವಾಗಿದ್ದ ನಮಗೆ ಈ ರೀತಿಯ ಅಮೋಘ ಗೆಲುವು ಬರುತ್ತದೆಂದು ನಾನು ಖಂಡಿತ ನಿರೀಕ್ಷಿಸಿರಲಿಲ್ಲ. ನಾನು ನನ್ನ ಉತ್ಕೃಷ್ಟ ಬೌಲಿಂಗ್ ಪ್ರದರ್ಶನ ನೀಡುವದರತ್ತ ಗಮನ ಹರಿಸಿದ್ದೆ. ಪ್ರತಿ ಓವರ್‌ನಲ್ಲೂ ಮುಂದಿನ ಚೆಂಡು ಹೇಗೆ ಎಸೆಯಬೇಕೆಂಬ ಬಗ್ಗೆ ಯೋಚಿಸುತ್ತಿದ್ದೆ. ನನಗೆ ಪೂರ್ತಿ ಬೆಂಬಲ ನೀಡಿದ ಹೆಡಿಂಗ್ಲೆ ಅಂಕಣವನ್ನು ನಾನು ಎಂದೆಂದಿಗೂ ಮರೆಯಲಾರೆ" ಎಂದ.

## —— ದಾಖಲೆಯಲ್ಲಿ ——

### ನಾಲ್ಕನೆ ಟೆಸ್ಟ್

ಮೂರನೆ ಟೆಸ್ಟನಲ್ಲಿ ಬ್ಯಾಟಿಂಗ್‌ನಲ್ಲಿ ಮಿಂಚಿದ್ದ ಬಾಥಂ ಈ ಪಂದ್ಯದಲ್ಲಿ ಬೌಲಿಂಗ್ ಪ್ರದರ್ಶನದಲ್ಲಿ ಚಮತ್ಕಾರ ಮೆರೆದ. ಪ್ರಥಮ ಇನಿಂಗ್ಸ್‌ನಲ್ಲಿ ೧೮೯, ಎರಡನೆಯದರಲ್ಲಿ ೨೧೯ ಓಟಗಳಿಸಿ ಸೋಲುವ ಅಂಚಿನಲ್ಲಿದ್ದ ಇಂಗ್ಲೆಂಡ್‌ಗೆ ಅಲ್ಡರ್‌ಮನ್ ಮತ್ತು ಸ್ಪಿನ್ನರ್ ರೇ ಬ್ರೈಟ್ ಭೂತವಾಗಿ ಕಾಡಿದ್ದರು. ಜಯಗಳಿಸಲು ಕೇವಲ ೧೪೨ ಓಟ ಬೇಕಿದ್ದಂಥ ಆಸ್ಟ್ರೇಲಿಯ ಕೈಯಲ್ಲಿ ಇನ್ನೂ ೬ ವಿಕೆಟ್‌ಗಳನ್ನು ಹೊಂದಿತ್ತು. ಆಗ ಬಿರುಗಾಳಿಯಾಗಿ ಬಂದ ಬಾಥಂ ಬರೀ ಒಂದು ಓಟ ನೀಡಿ ಐವರನ್ನು ಕಬಳಿಸಿದ. ಪ್ರವಾಸಿ ತಂಡದ ಕೊನೆಯ ಆರು ವಿಕೆಟ್‌ಗಳು ಕೇವಲ ೧೬ ಓಟಗಳಿಗೆ ಬಿದ್ದು ಮತ್ತೊಂದು ಸೋಲಿಗೆ ಕಾರಣವಾಯಿತು.

### ಐದನೆ ಟೆಸ್ಟ್

ಓಲ್ಡ್ ಟ್ರಾಫರ್ಡ್‌ನಲ್ಲಿ ನಡೆದ ಈ ಪಂದ್ಯದಲ್ಲಿ ಬಾಥಂ ಮತ್ತೆ 'ಹೀರೋ' ಆಗಿ ಮೆರೆದ. ಪ್ರಥಮ ಇನಿಂಗ್ಸ್‌ನಲ್ಲಿ ಶೂನ್ಯ ಸಂಪಾದಿಸಿದ್ದ ಬಾಥಂ ದ್ವಿತೀಯ ಸರದಿಯಲ್ಲಿ ಆರು ಸಿಕ್ಸರ್‌ಗಳ ಆ್ಯಷಸ್ ದಾಖಲೆಯೊಂದಿಗೆ ೧೧೮ ಓಟ ಹೊಡೆದು ಇಂಗ್ಲೆಂಡಿಗೆ ೧೦೩ ಓಟಗಳ ಭಾರೀ ಜಯ ತಂದುಕೊಟ್ಟ. ಯಾಲಪ್ (೧೧೪) ಮತ್ತು ಬಾರ್ಡ್‌ರ್ (ಅಜೇಯ ೧೨೩) ಶತಕ ಗಳಿಸಿದರೂ ಆಸ್ಟ್ರೇಲಿಯ ಸೋಲಿನಿಂದ ತಪ್ಪಿಸಿಕೊಳ್ಳಲಿಲ್ಲ.

### ಆರನೇ ಟೆಸ್ಟ್

ಈ ಪಂದ್ಯ ಯಾವ ತಂಡಕ್ಕೂ ಗೆಲುವು ತರದೆ 'ಡ್ರಾ'ದಲ್ಲಿ ಮುಕ್ತಾಯಗೊಂಡಿತು. ಅಲನ್ ಬಾರ್ಡರ್ ತನ್ನ ಎರಡನೆ ಅಜೇಯ ಶತಕ ಹೊಡೆದರೆ ಬಾಥಂ ಹತ್ತು ವಿಕೆಟ್ ಹೆಕ್ಕಿದ. ಲಿಲ್ಲಿ ಒಟ್ಟು ೧೧ ವಿಕೆಟ್ ಎಗುರಿಸಿ ಮತ್ತೆ ತನ್ನ ಹಿಂದಿನ ಸ್ಥಿತಿಗೆ ಮರಳಿದರೆ ಬಾಯ್ಕಾಟ್ ೨೧ನೇ ಟೆಸ್ಟ್ ಶತಕ ದಾಖಲು ಮಾಡಿದ. ●

ಚುಟಿ ಮೋಜು

# ವರಸೆ



● ರಾಧಿಕಾ

ಗಂಡ ತುರಾತುರಿಯಲ್ಲಿ ಆಫೀಸಿಗೆ ಹೊರಟು ನಿಂತಿದ್ದ. ಹೆಂಡತಿ ಅಡಿಗೆ ಮನೆಯಿಂದಲೇ ಕೂಗಿ ಕೇಳಿದಳು,

"ಏನ್ರೀ...."

"ಹೂನ್ರಿ......"

"ಡಬ್ಬೀಗೇನ್ಹಾಕ್ಲಿ?"

"ಏನಿದೆ?"

"ಗುಂಡುಪೊಂಗ್ಲು"

"ಆರ್ಹೋಗತ್ತೆ"

"ಮತ್ತೇನ್ಮಾಡ್ಲಿ?"

"ಏನಾದ್ರೂ ಹಾಕು. ನನ್ ತಲೆ ಬಿಸಿ ಮಾಡ್ಬೇಡ."

"ಈಗ್ಲೇ ಬಿಸಿಯಾಯ್ತಾ?"

"ಹೂಂ. ಇನ್ನು ಬಿಸಿಯಾಗ್ತಾನೆ ಹೋಗತ್ತೆ."

"ಎರಡು ಗಂಟೆ ಹೊತ್ಗ?"

"ಸಿಕ್ಕಾಪಟ್ಟೆ ಕಾದಿರತ್ತೆ. ಥತ್, ಬೇಗ್ನೆ ಡಬ್ಬಿ ಕಟ್ಟಿ ಕೊಡ್ಬಾರ್ದೆ?"

ಹೆಂಡತಿ 'ಬೇಗ್ನೆ' ಡಬ್ಬಿ ಕಟ್ಟಿ ದೊಡ್ಡ ಚೀಲದಲ್ಲಿಟ್ಟು ಕೊಟ್ಲು.

ಈತ ಸ್ಕೂಟರೇರಿ ಹೊರ್ಟೇಬಿಟ್ಟ.

●

ಎರಡು ಗಂಟೆ ಸುಮಾರಿಗೊಂದು ಫೋನು.

ಆತ "ಹಲೋ" ಅಂದ.

"ಏನ್ರೀ?"

"ಹೂನ್ರಿ."

"ಡಬ್ಬಿ ತೆಗೆದ್ರಾ?"

"ಇನ್ನೂ ಇಲ್ವೇ....."

"ಹಾಗಾದ್ರೆ ತೆಗೀರಿ...."

"ಹೂಂ" ಎಂದವ್ನೇ ಫೋನು ಕುಕ್ಕಿದ.

ಮುಂದೈದು ನಿಮಿಷಕ್ಕೆ ಮತ್ತೆ ಫೋನು. ಆತ ಎತ್ತಿದ.

"ಏನ್ರಿ...."

"ಇನ್ನೂ ಎಷ್ಟು ತಲೆತಿನ್ಬೇಕು ಅಂತಿದೆಯೇ ನಿನ್ ಮನಸ್ನಲ್ಲಿ?"

"ಏನಾಯ್ತು ರೀ?"

"ಏನಾಗ್ಬೇಕು? ಅಲ್ವೆ, ಡಬ್ಬಿ ಬಿಚ್ಚಿದೆ. ಏನೇ ನೀನಿಟ್ಟಿರೋದು? ದೋಸೆ ಹಿಟ್ಟು ಇಟ್ಟಿದೀಯಲ್ವೆ? ಜತೆಗೊಂದು ಕಾವ್ಲಿ, ಸೌಟು, ಎಣ್ಣೆ ತುಂಬಿದ ಚಿಕ್ ಶೀಶೆ...."

"ಅಯ್ಯೋ, ಅದನ್ನೇ ಹೇಳೋಣಾಂತ್ಲೇ ಫೋನು ಮಾಡಿದೇರಿ..... ಈಗ ಹ್ಯಾಗೂ ನಿಮ್ತಲೆ ತುಂಬಾ ಕಾದಿದೆ. ತಲೇ ಮೇಲೆ ಕಾವ್ಲಿ ಇಟ್ಕೊಳ್ಳಿ. ನಿಂ ಫ್ರೆಂಡ್ ಯಾರಾದ್ರೂ ಇದ್ರೆ ಅವ್ನಿಗೆ ಹಿಟ್ಟು ಹೊಯ್ಯೋದಕ್ಕೇಳಿ.... ನೀವು ಬಿಸಿ ಬಿಸಿ ದೋಸೆ ತಿಂದ್ರೆ ನನ್ಗೆ ತುಂಬಾ ಸಂತೋಷ. ಹಾಂ, ಹಾಗೇ ಭಾಜೀನೂ ಬಿಸಿ ಮಾಡ್ಕೊಳ್ಳಿ."

ಆತ ಫೋನು ಫಟ್ಟೆಸಿಟ್ಟು 'ತಲೆ ಸುತ್ತಿದೆ ಅಂತ ಸಬೂಬು ಬರ್ದು ಮನೇಗ್ ನಡ್ದ. ●

# ಸಂದರ್ಶನ

## ಸಿಡ್ನಿ ಷೆಲ್ಡನ್

ತನಗೆ ತಾನೇ ಮಾದರಿ ಎಂದುಕೊಳ್ಳುವ ನಿಸ್ಪೃಹ ಜೀವಿ ಈತ

WINDMILLS OF THE GOD

ರಜಾ ದಿನದ ಸಂಜೆ ಯಾರಿಗಾದರೂ ಭೇಟಿಯಾಗಲು ಸಮಯ ಕೊಟ್ಟಿದ್ದೀರಾ? ಅದೇ ಹೊತ್ತಿಗೆ ಷೆಲ್ಡನ್ನನ ಕಾದಂಬರಿಯನ್ನೂ ಓದಿ ಮುಗಿಸುವ ಆತುರದಲ್ಲಿದ್ದೀರಾ? ಹಾಗಿದ್ದರೆ ನೀವು ಭೇಟಿಯ ವಿಷಯವನ್ನು ಮರೆತು ಬಿಡಿ, ಅಥವಾ ಆ ಕಾದಂಬರಿ ಓದುವುದನ್ನಾದರೂ ಮುಂದೂಡಿ. ಯಾಕೆಂದರೆ ಒಂದು ಸಲ ಷೆಲ್ಡನ್ನನ ಕಾದಂಬರಿಯನ್ನು ಹಿಡಿದುಕೊಂಡು ಕೂತುಬಿಟ್ಟಿರೋ ನೀವು ಹಸಿವು-ನೀರಡಿಕೆ ಮರೆತು, ಕಣ್ಣು ಮುಚ್ಚದೆ ಅದನ್ನು ಓದಿಬಿಡುತ್ತೀರಿ. ಮೊದಲ ಪುಟ ತೆರೆದ ವರಿಗೆ ಕೊನೆಯ ಪುಟದವರೆಗೂ ಮುಚ್ಚಲು ಮನಸ್ಸೇ ಬರುವುದಿಲ್ಲ.

ಇಂಗ್ಲಿಷ್ ಕಾದಂಬರಿಗಳೊಂದಿಗೆ ಸ್ವಲ್ಪೇ ಪರಿಚಯವಿದ್ದರೂ ಸಾಕು, ಅವರಿಗೆ ಷೆಲ್ಡನ್ ಗೊತ್ತಾಗಿಬಿಟ್ಟಿರುತ್ತಾನೆ. ಜನಪ್ರಿಯ ಇಂಗ್ಲಿಷ್ ಕಾದಂಬರಿ ಸಾಮ್ರಾಜ್ಯಕ್ಕೆ ಆತ ಅಧಿಪತಿ. ಸುಮಾರು ೩೦ ದೇಶಗಳಲ್ಲಿ ಅವನ ಕಾದಂಬರಿಗಳು ಏಕ ಕಾಲಕ್ಕೆ ಬಿಡುಗಡೆಯಾಗುತ್ತವೆ. ವಿಮರ್ಶಕರ ಗೊಡವೆಯೇ ಆತನಿಗಿಲ್ಲ. ಅವನು ಬರೆದದ್ದು ತುಂಬಾ ಕಡಿಮೆ. ಆದರೆ ಮೊದಲ ಕಾದಂಬರಿಯೊಂದನ್ನು ಬಿಟ್ಟು ಉಳಿದುವೆಲ್ಲಾ 'ಬೆಸ್ಟ್ ಸೆಲ್ಲರ್'ಗಳೇ. ಅವೆಲ್ಲ ಕಾದಂಬರಿಗಳೂ ಸಿನಿಮಾ ಇಲ್ಲವೆ ಟೆಲಿವಿಜನ್ ಸೀರಿಯಲ್ ಆಗಿವೆ. ಅವನ ಹೊಸ ಕಾದಂಬರಿಗಳಲ್ಲೊಂದಾದ 'ವಿಂಡ್‌ಮಿಲ್ಸ್ ಆಫ್ ದಿ ಗಾಡ್ಸ್' ಅಧಿಕೃತವಾಗಿ ಪ್ರಕಟಗೊಳ್ಳುವದಕ್ಕೆ ಎರಡು ದಿನ ಮುಂಚೆಯೇ 'ನ್ಯೂಯಾರ್ಕ್ ಟೈಮ್ಸ್ ಬೆಸ್ಟ್ ಸೆಲ್ಲರ್' ಪಟ್ಟಿಯಲ್ಲಿ ಪ್ರಥಮ ಸ್ಥಾನಕ್ಕೇರಿತು.

ಕಾದಂಬರಿಕಾರನಾಗಿ ವೃತ್ತಿಗಿಳಿಯುವ ಹೊತ್ತಿಗೆ ಷೆಲ್ಡನ್‌ಗೆ ನಿವೃತ್ತಿಯ ವಯಸ್ಸು ಸಮೀಪಿಸಿತ್ತು.

---

ಸಂದರ್ಶನ: **ಟಾಮ್‌ಗ್ರೀನ್**

ಸಂಗ್ರಹಾನುವಾದ: **ಎ. ಅನ್ನಪೂರ್ಣ**

ತರುಣ ವಯದಲ್ಲೇ ಆತ ಹಾಲಿವುಡ್ ಚಿತ್ರಗಳಿಗೆ ಕಥೆಗಳನ್ನು ಬರೆಯುತ್ತಿದ್ದ. 'ದಿ ಬ್ಯಾಚುಲರ್ ಆ್ಯಂಡ್ ದಿ ಬಾಬೀ ಸಾಕ್ಸರ್' ಚಿತ್ರಕ್ಕೆ ಆಸ್ಕರ್ ಪ್ರಶಸ್ತಿಯನ್ನೂ ಪಡೆದ.

ಈಗ ಷೆಲ್ಡನ್‌ಗೆ ಪ್ರಪಂಚದ 'ನಿಷ್ಣಾತ ಕಥೆಗಾರ' (ಮಾಸ್ಟರ್ ಸ್ಟೋರಿ ಟೆಲ್ಲರ್)ನೆಂಬ ಗೌರವ ಪ್ರಾಪ್ತವಾಗಿದೆ. ಅವನ ಎಲ್ಲ ಕಾದಂಬರಿಗಳ ಹತ್ತು ಕೋಟಿ ಪ್ರತಿಗಳು ಮಾರಾಟಗೊಂಡಿವೆ. (ಇದು ಎರಡು ವರ್ಷಗಳ ಹಿಂದಿನ ಸಮೀಕ್ಷೆ) 'ರೇಜ್ ಆಫ್ ಏಜೆಂಲ್ಸ್' 'ಅದರ್ ಸೈಡ್ ಆಫ್ ಮಿಡ್ನೈಟ್' 'ಇಫ್ ಟುಮಾರೋ ಕಮ್ಸ್' 'ಬ್ಲಡ್ ಲೈನ್' ಮುಂತಾದ ಆತನ ಕಾದಂಬರಿಗಳು ಮಾರಾಟದಲ್ಲಿ ದಾಖಲೆ ಸ್ಥಾಪಿಸಿವೆ. ಷೆಲ್ಡನ್‌ನಿಗೆ ತನ್ನ ಮುಂಚಿನ ದಾಖಲೆಯನ್ನು ತಾನೇ ಮುರಿಯುವುದರತ್ತಲೇ ಸದಾ ಗಮನ.

ಎಪ್ಪತ್ತು ಮೂರು ವರ್ಷದ ಷೆಲ್ಡನ್ ಲಾಸ್ ಏಂಜೆಲೀಸ್‌ನ ಸಮುದ್ರ ತೀರದಲ್ಲಿ ವಿಶಾಲವಾದ ಬಂಗಲೆಯಲ್ಲಿ ತನ್ನ ಕಾದಂಬರಿಯ ಪಾತ್ರಗಳಂತೆ ವೈಭವಯುತ ಜೀವನವನ್ನು ಬಾಳುತ್ತಿದ್ದಾನೆ. ಬಹು ದಿನಗಳ ಹಿಂದೆಯೆ ವಿಧುರನಾದ ಆತನೀಗ ಮೊಮ್ಮಗ, ಮೊಮ್ಮಗಳೊಂದಿಗೆ ಕಾಲ ಕಳೆಯುತ್ತಾನೆ. ಸಾಮಾನ್ಯವಾಗಿ ಆತ ಮನೆಯಲ್ಲಿರುವುದೇ ವಿರಳ. ಸದಾ ಜಗತ್ತಿನ ಉದ್ದಗಲ ಅಳೆಯುವದಕ್ಕೆಂಬಂತೆ ಸಂಚರಿಸುತ್ತಲೇ ಇರುತ್ತಾನೆ. ಅಲ್ಲಿಯ ವಿಶೇಷಗಳನ್ನು ಕೂಡಲೆ ತನ್ನ ಕಾದಂಬರಿಗಳಲ್ಲಿ ಚಿತ್ರಿಸುತ್ತಿರುತ್ತಾನೆ.

ಷೆಲ್ಡನ್‌ನ ಕಾದಂಬರಿಗಳನ್ನು ಓದಿದ ಯಾರೇ ಆದರೂ ಅವನೊಬ್ಬ ವೃದ್ಧ ಎಂದು ನಂಬಲು ಸಾಧ್ಯವೇಇಲ್ಲ. ಅಷ್ಟೊಂದು ಹಿಡಿತ, ಚೈತನ್ಯ, ವೇಗ, ಕುತೂಹಲಗಳು ತುಂಬಿರುತ್ತವೆ ಅವನ ಕಾದಂಬರಿಗಳಲ್ಲಿ. ಚುರುಕಿನ ಮಾತು, ರೋಚಕವಾಗಿ ಬದುಕುವುದಕ್ಕೆ ಅನುಕ್ಷಣ ಪರಿತಪಿಸುವದು ಸಿಡ್ನಿ ಷೆಲ್ಡನ್‌ನ ವೈಶಿಷ್ಟಗಳು.

ಆತನೊಂದಿಗಿನ ಸಂದರ್ಶನದ ಆಯ್ದ ಭಾಗಗಳಿಲ್ಲಿವೆ:

**ನಿಮ್ಮ ಪುಸ್ತಕಗಳನ್ನೆಲ್ಲಾ ನೋಡಿದರೆ ಅವು ತಂತಾವೇ 'ಬೆಸ್ಟ್ ಸೆಲ್ಲರ್' ಪಟ್ಟಿಯಲ್ಲಿ ಸೇರುತ್ತವೆಂದುಕೊಂಡಿದ್ದೇನೆ. ಇದಕ್ಕೇನು ಕಾರಣ?**

● ಯಾಕೆಂದರೆ ಒಂದು ಸನ್ನಿವೇಶವನ್ನು ಬರೆಯುವಾಗ ಅದರೊಳಗಿನ ಪಾತ್ರಗಳ 'ಸಂವೇದನೆ'ಗಳನ್ನೆಲ್ಲಾ ನಾನು ಅನುಭವಿಸಿಯೇ ಬರೆಯುತ್ತೇನೆ. ಆ ಪಾತ್ರ ಸಂಕಟ ಪಟ್ಟರೆ ನಾನು ಕಸಿವಿಸಿಗೊಳ್ಳುತ್ತೇನೆ. ಹಸಿವಿನಿಂದ ಬಳಲಿದರೆ ನಾನೂ ಹಸಿದಂತೆ ಒದ್ದಾಡುತ್ತೇನೆ. ಒಂದು ವೇಳೆ ಲೈಂಗಿಕ ಸನ್ನಿವೇಶವನ್ನು ಬರೆಯುತ್ತಿದ್ದರೆ ನಾನೂ ಆ ಥರದ ಭಾವೋದ್ವೇಗಕ್ಕೆ ಒಳಗಾಗುತ್ತೇನೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಇದೊಂದು ರೀತಿ ಪರಕಾಯ ಪ್ರವೇಶ.

**ಪಾತ್ರದೊಂದಿಗೆ ಇಷ್ಟೊಂದು ಏಕಾತ್ಮತೆಯನ್ನು ಸಾಧಿಸುವ ನಿಮಗೆ, ನೀವು ತುಂಬಾ ಮೆಚ್ಚುವ ಪಾತ್ರ ಸಾಯುವ ಸನ್ನಿವೇಶವನ್ನು ಬರೆಯಬೇಕಾಗಿ ಬಂದಾಗ ಏನನ್ನಿಸುತ್ತದೆ?**

● ಒಮ್ಮೆ ನನಗೆ ಕಾಯಿಲೆಯಾಗಿ ಆಸ್ಪತ್ರೆಯಲ್ಲಿದ್ದೆ. ನನ್ನ ಸೆಕ್ರೆಟರಿಗೆ ಒಂದು ಮರಣ ಸನ್ನಿವೇಶವನ್ನು ಹೇಳಿ ಬರೆಸುತ್ತಿದ್ದೆ. ನಾನು ಎಲ್ಲಾ ಕಾದಂಬರಿಗಳನ್ನು ಹೀಗೆ ಸೆಕ್ರೆಟರಿಗೆ ವಿವರಿಸುತ್ತಲೇ ಮುಗಿಸುತ್ತೇನೆ. ಹಾಗೆ ಹೇಳುತ್ತಿರುವಾಗ ನನ್ನ ಗಂಟಲು ಉಬ್ಬಿಬಂತು. ಗದ್ಗದ ಕಂಠದೊಂದಿಗೆ ನನಗೆ ಮುಂದುವರಿಸುವುದಾಗಲೇ ಇಲ್ಲ. ಸ್ವಲ್ಪಹೊತ್ತು ನನ್ನ ಮುಖವನ್ನು ಸೆಕ್ರೆಟರಿಗೆ ತೋರಿಸದಂತೆ ದಿಂಬನ್ನು ಮರೆಮಾಚಿ ಮಲಗಿದೆ. 'ವಿಂಡ್ ಮಿಲ್ಸ್ ಆಫ್ ದಿ ಗಾಡ್ಸ್'ನಲ್ಲಿ ಕಥಾನಾಯಕಿಯ ಗಂಡ ಸಾಯುವ ಸನ್ನಿವೇಶವೊಂದಿದೆ. ಆ ಸಂದರ್ಭ ತಮ್ಮನ್ನು ಖಿನ್ನರನ್ನಾಗಿ ಮಾಡಿತೆಂದು ಅನೇಕ ಓದುಗರು ನನಗೆ ಹೇಳಿದರು. ನನ್ನ ಹೆಂಡತಿ ಸಾಯುವಾಗ ನಾನು ಅನುಭವಿಸಿದ ವ್ಯಥೆಯನ್ನೇ ಈ ಸನ್ನಿವೇಶದ ಬರವಣಿಗೆಯಲ್ಲಿ ನಾನು ಮತ್ತೊಮ್ಮೆ 'ಅನುಭವಿಸಿ'ದ್ದರಿಂದಲೇ ಇದು ಸಾಧ್ಯವಾದದ್ದು.

**ಕಾದಂಬರಿಯೊಂದರ ಬರವಣಿಗೆಯನ್ನು ನೀವು ಹೇಗೆ ಪ್ರಾರಂಭಿಸುತ್ತೀರಿ?**

● ನಾನು ಮೊದಲು ಯಾವುದೇ ಚೌಕಟ್ಟನ್ನು ಹಾಕಿಕೊಂಡು ಕಾದಂಬರಿಯನ್ನು ಪ್ರಾರಂಭಿಸುವದಿಲ್ಲ. ಹಾಗಂತ ಒಂದು ಸ್ಪಷ್ಟ ಕಲ್ಪನೆಯೂ

ಇರುವದಿಲ್ಲ. ಒಂದು ಪಾತ್ರದೊಂದಿಗೆ ಪ್ರಾರಂಭಿಸಿಬಿಡುತ್ತೇನೆ ಅಷ್ಟೇ. ಇತ್ತೀಚಿನ ಕಾದಂಬರಿ 'ವಿಂಡ್ ಮಿಲ್ಸ್'ನ್ನು ಒಂದು ಚಿಕ್ಕ ಪಟ್ಟಣದಲ್ಲಿ ಹುಟ್ಟಿ ಬೆಳೆದು, ಕಠೋರ ನಿಯಮಗಳನ್ನು ಪಾಲಿಸುತ್ತಿರುವ ದೇಶಕ್ಕೆ ರಾಯಭಾರಿಯಾಗಿ ಆಯ್ಕೆಗೊಂಡ ಒಬ್ಬ ಹೆಣ್ಣಿನ ಪಾತ್ರದೊಂದಿಗೆ ಪ್ರಾರಂಭಿಸಿದ್ದೇನೆ.

**ಕನಿಷ್ಟ ಪಕ್ಷಕ್ಕೆ ಘಟನಾವಳಿಗಳ ಅಂದಾಜನ್ನೂ ಹಾಕಿಕೊಳ್ಳುವುದಿಲ್ಲವೆ?**

● ಇಲ್ಲವೇ ಇಲ್ಲ. ಪಾತ್ರಗಳೇ ಆರಂಭಗೊಳಿಸುತ್ತವೆ. ಅವೇ ನನ್ನ ಲೆಕ್ಕಣಿಕೆಯನ್ನು ಮುಂದೆ ಸಾಗಿಸುತ್ತವೆ. ಇಂಥ ಪದ್ಧತಿ ನನಗೆ ಉತ್ಸಾಹವನ್ನುಂಟು ಮಾಡುತ್ತದೆ.

**ಒಂದೆರಡನ್ನು ಬಿಟ್ಟು ಉಳಿದೆಲ್ಲ ಕಾದಂಬರಿಗಳಲ್ಲಿ ಕಥಾ ನಾಯಕಿಯದೇ ಪ್ರಧಾನ ಪಾತ್ರವಾಗಿದೆಯಲ್ಲ, ಅದಕ್ಕೆ ವಿಶೇಷ ಕಾರಣವೇನಾದರೂ ಇದೆಯೇ?**

● ಪುರುಷನಿಗಿಂತಲೂ ಸ್ತ್ರೀಯೇ ಆಸಕ್ತಿಕರ ವ್ಯಕ್ತಿ ಎಂದು ನನ್ನ ಅಭಿಪ್ರಾಯ. ಸ್ತ್ರೀಯರದು ಹೆಚ್ಚು ಕ್ಲಿಷ್ಟವಾದ ವ್ಯಕ್ತಿತ್ವ. ಮೃದುಸ್ವಭಾವದೊಂದಿಗೆ ಹೆಚ್ಚು ಆಕರ್ಷಣೀಯವಾಗಿರುತ್ತಾರೆ. ಅನಿಶ್ಚಿತ ಪರಿಸ್ಥಿತಿಯಲ್ಲಿ, ಅಪಾಯದಲ್ಲಿರುವ ಪುರುಷ ಪಾತ್ರಕ್ಕಿಂತಲೂ ಆ ಸ್ಥಿತಿಯಲ್ಲಿರುವ ಸ್ತ್ರಿ ಪಾತ್ರವೇ ಹೆಚ್ಚು ಲಕ್ಷ್ಯ ಸೆಳೆಯುತ್ತದೆ, ಹೆಚ್ಚು ಸಹಾನುಭೂತಿ ಸಂಪಾದಿಸುತ್ತದೆ. ಸ್ತ್ರೀತ್ವದೊಳಗಿನ ಲಾಲಿತ್ಯವೇ ಅದಕ್ಕೆ ಕಾರಣ. ಗಂಡು ತನ್ನ ಭೌತಿಕ ಶಕ್ತಿಯನ್ನು ಉಪಯೋಗಿಸಿ ಆ ಸಿಕ್ಕಿನಿಂದ ಹೊರಗೆ ಬರಬಲ್ಲ, ಆದರೆ ಹೆಣ್ಣು ಹಾಗೆ ಮಾಡಲಾರಳು. ಅದೇ ಆಸಕ್ತಿಯನ್ನುಂಟು ಮಾಡುವ ಅಂಶ. ತಮ್ಮ ಸ್ತ್ರೀತ್ವದಲ್ಲಿನ ಆಕರ್ಷಣೆಯನ್ನು ಉಳಿಸಿಕೊಳ್ಳುತ್ತಲೇ ಪುರುಷ ಮಾಡುವ ಎಲ್ಲ ಕೆಲಸಗಳನ್ನೂ ಮಾಡುತ್ತಾರೆ. ಪುರುಷನಿಗೆ ಯಾವುದರಲ್ಲೂ ಕಡಿಮೆಯಾಗದಂತೆ ಸರಿಸಮಾನವಾಗಿ ಹೆಚ್ಚು ದಕ್ಷತೆಯಿಂದ ಕಾರ್ಯ ನಿರ್ವಹಿಸುವ ಸ್ತ್ರೀ ಪಾತ್ರಗಳನ್ನು ಸೃಷ್ಟಿಸುವದೆಂದರೆ ನನಗೆ ತುಂಬಾ ಇಷ್ಟ. ಸ್ತ್ರೀತ್ವ ಹೆಣ್ಣಿಗಿರುವ ಬಲವಾದ ಅಸ್ತ್ರ. ಅದನ್ನು ಕಳೆದುಕೊಂಡರೆ ಅವಳು ಎಲ್ಲವನ್ನೂ ಕಳೆದುಕೊಳ್ಳುತ್ತಾಳೆ. ಸಂಪೂರ್ಣ ಪುರುಷ ಲಕ್ಷಣಗಳೊಂದಿಗೆ ಬದುಕನ್ನು ಕಳೆಯಬೇಕೆಂದುಕೊಳ್ಳುವ ಮಹಿಳೆಯರು ಮಾನಸಿಕವಾಗಿ ತಮ್ಮನ್ನು ತಾವೇ ಗಾಸಿಗೊಳಿಸಿಕೊಳ್ಳುತ್ತಾರೆ. ಆಕಾಶಕ್ಕೇರಲು ನಿಚ್ಚಣಿಕೆಯನ್ನು ಹಾಕುವ ಭಾವನೆಯನ್ನು ಪ್ರದರ್ಶಿಸಬೇಕಿಲ್ಲ. ಹಾಗೆಂದು ಅಡಿಗೆ ಮನೆಗೇ ಸೀಮಿತವಾಗಲೂ ಬೇಕಿಲ್ಲ. ತಮ್ಮ ಕೆಲಸದಲ್ಲಿ ಅಸಾಮಾನ್ಯ ಪ್ರತಿಭೆ ತೋರಿಸಿದರೆ ಸಾಕು.

**ನಿಮ್ಮ ಕಾದಂಬರಿಗಳೆಲ್ಲದರಲ್ಲೂ ಸಾಮಾನ್ಯವಾಗಿ ಕಾಣಿಸುವ ಅಂಶ (Common theme)ವೆಂಬುದೇನಾದರೂ ಇದೆಯೇ?**

● ಕೆಲವು ಕಾದಂಬರಿಗಳಲ್ಲಿ ಸೇಡು ಮುಖ್ಯವಾಗಿದೆ. ಮತ್ತೆ ಕೆಲ ಕಾದಂಬರಿಗಳು, ಅಪಾಯದಲ್ಲಿ ಸಿಕ್ಕಿಕೊಂಡ ಹೆಣ್ಣಿನ ಪಾತ್ರಗಳಲ್ಲೇ ಮುಂದುವರೆದವು. ಜೀವನ್ಮರಣ ಹೋರಾಟವೆಂದೆನಿಸಿಕೊಳ್ಳುವ ಘಟನೆಗಳನ್ನು ಬರೆಯುವುದು ನನಗೆ ತುಂಬಾ ಇಷ್ಟ. ನನ್ನ ಎಲ್ಲಾ ಕಾದಂಬರಿಗಳಲ್ಲೂ ಸಾಮಾನ್ಯವಾಗಿ ಪಾತ್ರಗಳು ಎದುರಿಸುವ ಸಂದರ್ಭಗಳಲ್ಲಿ ಸಾಧಾರಣ ಅಂಶ ಮಾತ್ರ ಈ ಜೀವನ್ಮರಣ ಹೋರಾಟವೇ. ಅಂಥ ಅಸಾಮಾನ್ಯ ಬದುಕನ್ನು ಚಿತ್ರಿಸುವುದರಲ್ಲಿ ನನಗೆ ಒಂದು ರೀತಿ ಮೋಜು, ಆಸಕ್ತಿ. ಅದ್ಭುತವಾದ ಸ್ಥಳಗಳು ಕೂಡ ನನ್ನ ಕಾದಂಬರಿಗಳಲ್ಲಿ ಪ್ರಮುಖವಾಗಿ ಕಾಣಿಸುವ ಅಂಶಗಳು. ಓದುಗ ಅವುಗಳನ್ನು ತುಂಬ ಆಸ್ವಾದಿಸುತ್ತಾನೆಂಬ ನಂಬಿಕೆ ನನಗಿದೆ. ಎಲ್ಲರಿಗೂ ಎಲ್ಲ ಸ್ಥಳಗಳನ್ನೂ ನೋಡುವದು ಆಗುವದಿಲ್ಲ. ಆದ್ದರಿಂದ ನಾನೇ ಅಂಥ ಅನನ್ಯ ಅನುಭವ ನೀಡುವ ಸ್ಥಳಗಳ ಅನ್ವೇಷಣೆ ನಡೆಸಿ ಅವುಗಳನ್ನು ಓದುಗರ ಕಣ್ಣ ಮುಂದೆ ನಿಲ್ಲಿಸುತ್ತೇನೆ.

**ನಿಮ್ಮ ಕಾದಂಬರಿಗಳಲ್ಲಿ ವರ್ಣಿತ ಪ್ರಾಂತಗಳನ್ನು ನೀವು ಸ್ವತಃ ಭೇಟ ಮಾಡಿದ್ದಿರಾ?**

● ನಾನು ಸಂದರ್ಶಿಸದ ಸ್ಥಳದ ಬಗ್ಗೆ ಒಂದಕ್ಷರವನ್ನೂ ಬರೆಯುವುದಿಲ್ಲ. ಒಂದು ಚಿಕ್ಕ ಉದಾಹರಣೆ. 'ವಿಂಡ್ ಮಿಲ್ಸ್'ನೊಳಗಿನ ಹಿರೋಯಿನ್ ಒಂದು ಸಣ್ಣ ಪಟ್ಟಣ ಪ್ರದೇಶಕ್ಕೆ ಸೇರಿದ ಹುಡುಗಿ. ಆ ಪಟ್ಟಣವನ್ನು ಆಯ್ಕೆ ಮಾಡಿಕೊಳ್ಳಲು ನಾನು ನಕ್ಷೆಯನ್ನು ಕೂಲಂಕಷವಾಗಿ ನೋಡಿ ನನ್ನ ಕಥೆ

ಯಲ್ಲಿ ಬರುವ ಜಂಕ್ಷನ್ ಸಿಟಿಯಾದರೆ ಚೆನ್ನಾಗಿರುತ್ತದೆಂದುಕೊಂಡೆ. ಅದು ಅಮೇರಿಕಾದ ಮಧ್ಯದಲ್ಲಿರುವುದೇ ಅದಕ್ಕೆ ಕಾರಣ. ಆ ಪಟ್ಟಣಕ್ಕೆ ಸಂಬಂಧಿಸಿದ ಸುದ್ದಿಯನ್ನೆಲ್ಲಾ ಸಂಗ್ರಹಿಸಿದೆ. ಪ್ರವಾಸಿ ಮಾಹಿತಿ ಪತ್ರಗಳನ್ನೂ ತರಿಸಿದೆ. ಅಷ್ಟೊಂದು ಮಾಹಿತಿ ಕಲೆಹಾಕಿದರೂ ನನಗೆ ತೃಪ್ತಿಯುಂಟಾಗಲಿಲ್ಲ. ಅದಕ್ಕೇ ಸ್ವತಃ ಹೋಗಿ ಪಟ್ಟಣದ ಬೀದಿಗಳಲ್ಲಿ ಸುತ್ತಾಡಿದೆ. ಅಲ್ಲಿಯ ರೆಸ್ಟೋರೆಂಟ್‌ಗಳಲ್ಲಿನ ತಿಂಡಿಗಳನ್ನೆಲ್ಲಾ ತಿಂದೆ. ನಾನು ಯಾವುದಾದರೂ ಒಂದು ಖಾದ್ಯದ ಬಗ್ಗೆ ಬರೆದಿದ್ದರೆ ಅದನ್ನು ಸ್ವತಃ ತಿಂದೇ ಬರೆದಿರುತ್ತೇನೆ.

**ಇತ್ತೀಚಿನ ನಿಮ್ಮ ಕಾದಂಬರಿಗಳು ತುಂಬಾ ಲೈಂಗಿಕವಿವರಗಳನ್ನೊಳಗೊಂಡಿರುತ್ತವೆ ಎನ್ನುತ್ತಾರೆ. ಬದಲಾಗುತ್ತಿರುವ ಕಾಲಮಾನಕ್ಕೆ ತಕ್ಕಂತೆ ಹಾಗೆ ಬರೆಯುತ್ತೀರಾ?**

● ನಾನು ಉದ್ದೇಶಪೂರ್ವಕವಾಗಿ ಅಂಥವನ್ನು ಬರೆಯುವುದಿಲ್ಲ. ನನ್ನ ಪಾತ್ರಗಳೇ ಬಯಸುತ್ತವೆ, ಬರೆಸುತ್ತವೆ. ಈ ಮಾತು ನಿಮಗೆ ವಿಚಿತ್ರವಾಗಿ ಕಾಣಬಹುದು. ನಿಧಾನವಾಗಿ ಯೋಚಿಸಿದರೆ ನಿಮಗೇ ಅರ್ಥವಾಗುತ್ತದೆ. 'ದಿ ಅದರ್ ಸೈಡ್ ಆಫ್ ಮಿಡ್‌ನೈಟ್' ಕಾದಂಬರಿಯಲ್ಲಿ ಇಬ್ಬರು ಹಿರೋಯಿನ್‌ಗಳಿದ್ದಾರೆ. ಒಬ್ಬಳು ಸಾಮಾನ್ಯ ಕುಟುಂಬದಿಂದ ಬಂದ 'ಸ್ವೀಟ್ ಗರ್ಲ್.' ಅವಳ ಶೃಂಗಾರ ಸನ್ನಿವೇಶಗಳು ಅಷ್ಟೇ ಮಧುರವಾಗಿ, ಮೃದುವಾಗಿರುತ್ತವೆ. ಮತ್ತೊಮ್ಮ ಹಿರೋಯಿನ್ 'ಸೆಕ್ಸ್ ವರ್ಕರ್' (ವೇಶ್ಯೆ?) ಕುಟುಂಬದಲ್ಲಿ ಹುಟ್ಟಿರುತ್ತಾಳೆ. ಅವಳ ಶೃಂಗಾರ ಸನ್ನಿವೇಶಗಳು ಆ ಹಿನ್ನೆಲೆಗೆ ತಕ್ಕಂತಿರುತ್ತವೆ. ನನ್ನ ಪಾತ್ರಗಳೇ ಸನ್ನಿವೇಶದಿಂದ ಸನ್ನಿವೇಶಕ್ಕೆ ಪ್ರಯಾಣ ಬೆಳೆಸುತ್ತ ಶೃಂಗಾರ ಸನ್ನಿವೇಶಕ್ಕೆ ತಲಪುತ್ತವೆ. ಅಷ್ಟೇ ಹೊರತು 'ಮೂವತ್ತು ಪುಟಗಳಾಗಿವೆ. ಈಗೊಂದು ಇಂಥ ಸನ್ನಿವೇಶ ಇಡಬೇಕು' ಎಂದು ನನ್ನಷ್ಟಕ್ಕೆ ನಾನೇ ಅಂದುಕೊಳ್ಳುವುದಿಲ್ಲ.

**ಒಬ್ಬ ಯಶಸ್ವೀ ಚಿತ್ರಕಥಾ ಲೇಖಕನಾಗಿ ಹಾಲೀವುಡ್‌ನಲ್ಲಿ ಒಳ್ಳೆಯ ಹೆಸರು ಪಡೆದಿದ್ದ ನೀವು ಅದನ್ನು ಬಿಟ್ಟು ಕಾದಂಬರಿ ರಚನೆಗೆ ತೊಡಗಿದಿರಿ. ಹೀಗೆ ಮಾಡುವಾಗ ಒಂದು ವೇಳೆ ಈ ಕ್ಷೇತ್ರದಲ್ಲಿ ಯಶಸ್ವಿಯಾಗದೆ ಹೋದರೆ**




**ಹೇಗೆಂಬ ಭಯ ನಿಮಗೆ ಉಂಟಾಗಲಿಲ್ಲವೆ?**

● ಕಾದಂಬರಿಕಾರನಾಗಬೇಕೆಂದು ಬಹಳ ಹಿಂದೆಯೇ ಅಂದುಕೊಂಡಿದ್ದೆ. ಅದು ನನ್ನ ಆಶೆ ಕೂಡಾ ಆಗಿತ್ತು. ಅದು ನೆರವೇರಲು ಆಕಸ್ಮಿಕ ಘಟನೆಯೊಂದು ಕಾರಣವಾಯಿತು. ಒಬ್ಬ ಮನೋರೋಗತಜ್ಞನನ್ನು ಕೊಲ್ಲಬೇಕೆಂದು ಒಬ್ಬ ರೋಗಿ ಪ್ರಯತ್ನಿಸುತ್ತಿರುವ ಕಥೆಯನ್ನು ಬರೆಯಬೇಕೆಂಬ ವಿಚಾರ ತುಂಬ ದಿನಗಳಿಂದ ಕಾಡುತ್ತಿತ್ತು. ಆದರೆ ಅದನ್ನು ಪರದೆಗೆ ಅನುಗುಣವಾಗಿ ಬರೆಯಬೇಕಾದರೆ ಅವರಿಬ್ಬರ ಯೋಚನೆಗಳಿಗೆ ರೂಪ ಕೊಡುವ ಸನ್ನಿವೇಶಗಳನ್ನು ಸೃಷ್ಟಿಸಬೇಕು. ಅದು ನನಗೆ ಅಸಾಧ್ಯವೇನೋ ಎಂದೆನಿಸಿತ್ತು. ಅದನ್ನು ಕಾದಂಬರಿಯಾಗಿ ಬರೆಯಬೇಕೆಂದು ನಿರ್ಧರಿಸಿದೆ. ಪ್ರಮುಖ ಲೇಖಕ (ಈಗ ದಿವಂಗತ) ಐರ್ವಿಂಗ್ ವಾಲೆಸ್ ನನ್ನ ಒಳ್ಳೆಯ ಸ್ನೇಹಿತ. ಈ ಕಾದಂಬರಿಯ ಹಸ್ತಪ್ರತಿ ಸಿದ್ಧವಾದ ಕೂಡಲೇ ಅತನಿಗೆ ಹೇಳಿದೆ. ಆತ ತನ್ನ ಏಜಂಟನನ್ನು ಕಳಿಸಿದ. ಕೊನೆಗೆ ವಿಲಿಯಂ ಮಾರೋ ಸಂಸ್ಥೆ ಪ್ರಕಟಿಸುವ ಮುನ್ನ ಐದು ಜನ

ಪ್ರಕಾಶಕರು ನನ್ನ ಕಾದಂಬರಿಯನ್ನು ತಿರಸ್ಕರಿಸಿದ್ದರು. ಮಾರಾಟ ಸಾಧಾರಣವಾಗಿತ್ತು. ಇದಕ್ಕಾಗಿ ನಾನು ತುಂಬ ಹಣ ಕಳೆದುಕೊಂಡೆ. ಆ ಕಾದಂಬರಿ ಬರೆಯುವ ಸಮಯದಲ್ಲಿ ಎಷ್ಟೋ ಸಿನಿಮಾಗಳ ಅವಕಾಶಗಳನ್ನು ಕೈಬಿಡಬೇಕಾಯಿತು. ಅದೆಲ್ಲಾ ನಷ್ಟ ತಾನೆ! ಆದರೆ ನಾನು ಎದೆಗುಂದಲಿಲ್ಲ. 'ನ್ಯೂಯಾರ್ಕ್ ಟೈಮ್ಸ್' ನನ್ನ ಕಾದಂಬರಿಯನ್ನು ಆ ವರ್ಷದ ಅತ್ಯುತ್ತಮ ರಹಸ್ಯಾತ್ಮಕ ಕಾದಂಬರಿಯೆಂದು ವಿಮರ್ಶೆಯಲ್ಲಿ ಹೇಳಿತು. ರಹಸ್ಯಾತ್ಮಕ ಕಾದಂಬರಿ ಬರೆಯುವವವರಿಗಾಗಿಯೇ ಇರುವ ಎಡ್ಗರ್ ಪ್ರಶಸ್ತಿಯೂ ಲಭಿಸಿತು. ವಿಮರ್ಶಕರಿಂದಲೂ ಒಳ್ಳೆಯ ಪ್ರತಿಕ್ರಿಯೆ ಬಂತು. ಅವು ನನ್ನ ಪ್ರಕಾಶಕರಿಗೆ ಉತ್ಸಾಹ ತಂದುಕೊಟ್ಟವು.

**ಅಷ್ಟು ತೃಪ್ತಿ ಸಾಕೇ?**

● ಇನ್ನೇನು? ಕಾದಂಬರಿ ಬರವಣಿಗೆಯಲ್ಲಿ ಎಷ್ಟೋ ಸ್ವಾತಂತ್ರ್ಯವಿದೆಯೆಂದು ನನಗೆ ಗೊತ್ತಾಯಿತು. "ಈ ಸಂಭಾಷಣೆ ನನ್ನಿಂದ ಹೇಳಲಾಗುವುದಿಲ್ಲ, ಬದಲಾಯಿಸಿ" ಎನ್ನುವ ನಟರು, "ಈ ದೃಶ್ಯ ನನಗೆ ಹಿಡಿಸುತ್ತಿಲ್ಲ" ಎಂದೆನ್ನುವ ಡೈರೆಕ್ಟರುಗಳು, ಮಧ್ಯದಲ್ಲಿ ಅರ್ಥಾಂತರವಾಗಿ ಬರುವ ವಿಚಿತ್ರ ಸಲಹೆಗಳು ಮತ್ತು ಬದಲಾವಣೆಗೆ ಶಿಫಾರಸುಗಳು ಇವಾವೂ ಇರದೆ, ನನಗೆ ಹೇಗೆ ಹೊಳೆಯುತ್ತೋ ಹಾಗೆ ಬರೆಯುವ ಸ್ವಾತಂತ್ರ್ಯ ಈ ಕಾದಂಬರಿಯಲ್ಲಿ ಸಿಕ್ಕಿತು.

ಅದೇ ಉತ್ಸಾಹದಲ್ಲಿ ಮತ್ತೊಂದು ಕಾದಂಬರಿಯನ್ನು ಪ್ರಾರಂಭಿಸಿದೆ: 'ದಿ ಅದರ್ ಸೈಡ್ ಆಫ್ ಮಿಡ್ ನೈಟ್.' ಆ ಕಾದಂಬರಿಯಂತೂ ನನ್ನ ಬದುಕನ್ನೇ ಬದಲಾಯಿಸಿತು.

**ವಿಮರ್ಶಕರಾರೂ ನಿಮ್ಮ ಬಗ್ಗೆ ಸಕಾರಾತ್ಮಕ ಧೋರಣೆ ಹೊಂದಿಲ್ಲ, ಆದರೂ ಹ್ಯಾಗೆ ಇಷ್ಟೆಲ್ಲ ಸಾಧಿಸಿರಿ?**

● ಬಹುಶಃ ಬರಹಗಾರರದೂ, ವಿಮರ್ಶಕರದೂ ರಾಗ-ದ್ವೇಷಗಳ ಅನುಬಂಧವೆಂದುಕೊಂಡಿದ್ದೇನೆ. ಕೆಲ ಸಮೀಕ್ಷೆಗಳು ನನ್ನ ಮನಸ್ಸಿಗೆ ನೋವುಂಟು ಮಾಡುತ್ತವೆ. ಅವರಲ್ಲಿ ಕೆಲವರು ನನ್ನ ಬಗ್ಗೆ ಸಮಂಜಸವಾಗಿ ನಡೆದುಕೊಂಡಿಲ್ಲವೆಂಬ ಸತ್ಯ ಬಹಳಷ್ಟು ಜನಕ್ಕೆ ಗೊತ್ತು. ಅದರಲ್ಲೂ ಪೀಠಾಧಿಪತಿಗಳಂತಿರುವ ಟೈಮ್, ನ್ಯೂಸ್ ವೀಕ್, ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಗಳ ಸಮೀಕ್ಷಕರು ಜನಪ್ರಿಯ ಬರಹಗಾರರನ್ನು ಸದಾ ಕೆಳಮಟ್ಟದಲ್ಲೇ ನೋಡುತ್ತಾರೆ.

**ಸಾಹಿತ್ಯದ ಇತಿಹಾಸದಲ್ಲಿ ಉಳಿಯುವಂಥ ಒಂದು ಪುಸ್ತಕವನ್ನಾದರೂ ಬರೆಯಬೇಕೆಂದು ನಿಮಗೆ ಎಂದೂ ಅನಿಸಲಿಲ್ಲವೆ?**

● ಅದಕ್ಕಿಂತ ಹೆಚ್ಚಿನ ಕೋರಿಕೆ ಮತ್ತೇನಿದೆ? ಆದರೆ ಯಾವ ಪುಸ್ತಕವನ್ನೂ ಇದು ಇತಿಹಾಸದಲ್ಲಿ ಗಟ್ಟಿಯಾಗಿ ಉಳಿದುಬಿಡಬೇಕೆಂಬ ಉದ್ದೇಶದಿಂದ ಬರೆಯುವುದಿಲ್ಲ, ಬರೆಯಬಾರದು ಕೂಡ. ಎಷ್ಟು ಚೆನ್ನಾಗಿ ಬರೆಯಬಲ್ಲೆನೋ ಅಷ್ಟು ಚೆನ್ನಾಗಿ ಬರೆಯಲು ನನ್ನ ಸರ್ವಶಕ್ತಿಯನ್ನು ಧಾರೆಯೆರೆಯುತ್ತೇನೆ. ಯಾವುದನ್ನು ಬರೆಯಲು ಹೆಚ್ಚು ಇಷ್ಟಪಡುತ್ತೇನೋ, ಅದನ್ನು ಬರೆಯಲು ಹೆಚ್ಚು ಸಮಯ ತೆಗೆದುಕೊಳ್ಳುತ್ತೇನೆ. ಒಂದು ಕಾದಂಬರಿಯನ್ನು ಹೇಗೆ ಬರೆಯಬೇಕೆಂದು ನನಗೆ ಎಷ್ಟರವರೆಗೆ ಗೊತ್ತೋ ಅಷ್ಟರವರೆಗೆ ದೃಷ್ಟಿಯಲ್ಲಿಟ್ಟುಕೊಂಡು ನಾನು ಚೆನ್ನಾಗಿಯೇ ಬರೆಯುತ್ತೇನೆಂಬ ನಂಬಿಕೆಯಿದೆ.

**ನಿಮ್ಮಂತೆ ತಮ್ಮ ಪ್ರತಿಯೊಂದು ಕಾದಂಬರಿಯನ್ನೂ 'ಬೆಸ್ಟ್ ಸೆಲ್ಲರ್' ಆಗಿ ಮಾಡಬೇಕೆಂದುಕೊಳ್ಳುವ ಬರಹಗಾರರು ಕೆಲವರಿದ್ದಾರೆ. ಅವರನ್ನು ನೀವೆಂದೂ ಪ್ರತಿಸ್ಪರ್ಧಿ ಎಂದು ಭಾವಿಸಲಿಲ್ಲವೆ?**

● ಇಲ್ಲ. ಅವರು ನನ್ನನ್ನು ಹಾಗೆ ಭಾವಿಸಿದ್ದರೆ ನನ್ನ ತಪ್ಪಲ್ಲ. ನನಗಿಂತಲೂ ತುಂಬಾ ಚೆನ್ನಾಗಿ ಬರೆಯುವ ಜನರಿದ್ದಾರೆ. ಅವರೊಂದಿಗೆ ಹೋಲಿಸಿಕೊಂಡರೆ ನಾನು ಕಾದಂಬರಿ ಬರವಣಿಗೆಯಿಂದ ವಿರಮಿಸಿಕೊಳ್ಳಬೇಕಾಗಿ ಬರುತ್ತದೇನೋ. ನಾನು ಸಿಡ್ನಿ ಷೆಲ್ಡನ್. ನನಗೆಷ್ಟು ಪ್ರತಿಭೆ ಇದೆಯೋ ಅಷ್ಟು ಕೆಲಸ ಮಾಡಿ ತೋರಿಸುತ್ತೇನೆ. ಇತರರ ಬಗ್ಗೆ ಯೋಚಿಸುವುದಿಲ್ಲ, ನಾನು ಸದಾ ಯೋಚಿಸುವುದು ನನ್ನ ಮುಂದಿನ ಪುಸ್ತಕದ 'ಬಗ್ಗೆಯೇ.... ●

ಆಹಾರೌಷಧಿ

# ವ್ಯಾಕ್ಸಿನ್ ಬದಲು ಬಟಾಟೆ

• 'ಕಸ್ತೂರಿಮೃಗ'

ಜಗತ್ತಿನಲ್ಲಿಂದು ಸುಮಾರು ಮೂವತ್ತು ಕೋಟಿ ಜನ ಯಕೃತ್ತಿನ ಊತಕ್ಕೆ ಕಾರಣವಾದ ವೈರಸ್ಸುಗಳನ್ನು ಹೊತ್ತುಕೊಂಡು ತಿರುಗುತ್ತಿದ್ದಾರೆ. ದೇಹದ ರೋಗ ನಿರೋಧಕ ಶಕ್ತಿಯಿಂದಾಗಿ ಇವರೆಲ್ಲರಿಗೂ ರೋಗ ಬರುವುದಿಲ್ಲ ನಿಜ. ಆದರೆ ರೋಗ ನಿರೋಧಕ ಶಕ್ತಿ ತಗ್ಗಿ ಅಥವಾ ಈ ವೈರಸ್ಸುಗಳೇ ವೃದ್ಧಿಸಿ ರೋಗ ಬಂದರೇನು ಗತಿ? ಈ ವೈರಸ್ಸುಗಳಿಂದ ಬರಿ ಯಕೃತ್ತಷ್ಟೇ ಊದಿಕೊಳ್ಳುವುದಿಲ್ಲ, ಯಕೃತ್ತಿಗೆ ಸಂಬಂಧಿಸಿದ ಕಾಯಿಲೆಗಳೂ ಬರಬಹುದು. ಕೆಲವೊಮ್ಮೆ ಯಕೃತ್ತಿನ ಊತ ಕ್ಯಾನ್ಸರಿಗೂ ತಿರುಗಿಕೊಳ್ಳಬಹುದು.

ಈ ವೈರಸ್ಸುಗಳ ಸಂಖ್ಯೆ ವೃದ್ಧಿಸಿ ಯಕೃತ್ತು ಊದಿಕೊಂಡೇ ಬಿಟ್ಟಿತೆನ್ನೋಣ. ಆಗೇನು ಉಪಾಯ? ಯೀಸ್ಟ್ ಕಣಗಳ ವಂಶವಾಹಿಗಳಲ್ಲಿ ಸೂಕ್ತ ಬದಲಾವಣೆ ಮಾಡಿ, ಹೀಗೆ ತಯಾರಾದ ಯೀಸ್ಟ್ ಕಣಗಳ ಮೇಲಿನ ತೆಳುವಾದ ಪ್ರೋಟೀನ್ ಪೊರೆಯನ್ನು ತೆರೆದು, ಸಂಗ್ರಹಿಸಿ ಚುಚ್ಚುಮದ್ದು ತಯಾರಿಸಿ ರೋಗಿಗಳಿಗೆ ನೀಡುತ್ತಾರೆ. ಆದರೆ ಈ ಔಷಧ ತುಂಬಾ ದುಬಾರಿ. ಜನಸಾಮಾನ್ಯರ ಕೈಗೆ ಸುಲಭವಾಗಿ ಎಟಕುವಂಥಾದ್ದಲ್ಲ.

ಹಾಗಾದರೆ ಏನು ದಾರಿ? ಜೈವಿಕ ತಂತ್ರ ಜ್ಞಾನವನ್ನು ಬಳಸಿ ಸುಲಭ ಬೆಲೆಗೆ ಔಷಧ ದೊರೆಯುವ ಹಾಗೆ ಪ್ರಯತ್ನಿಸಲು ವಿಜ್ಞಾನಿಗಳು ನಿಶ್ಚಯಿಸಿದರು. ಅದಕ್ಕಾಗಿ ತಂಬಾಕದ ವಂಶವಾಹಿಗಳನ್ನು ಪ್ರತ್ಯೇಕಿಸಿ, ಸೂಕ್ತವಾಗಿ ಮಾರ್ಪಡಿಸಿ, ಹೊಸ ಬಗೆಯ ತಂಬಾಕನ್ನೇ ಬೆಳೆದರು. ಅನಂತರ ಎಲೆಗಳಿಂದ ಪ್ರತಿವಸ್ತುವನ್ನು ಪ್ರತ್ಯೇಕಿಸಿ ಯಕೃತ್ತು ಊದಿದ ಪ್ರಯೋಗ ಪಶುಗಳಿಗೆ ಕೊಟ್ಟಾಗ ಊತ ಕಡಿಮೆಯಾಯಿತು. ದುಬಾರಿಯಾದ ಔಷಧಿಗೂ ಈ ಪ್ರತಿವಿಷವಸ್ತುವಿಗೂ ಯಾವ ಭೇದವೂ ಇರಲಿಲ್ಲ. ಎರಡೂ ಒಂದೇ ಬಗೆಯ ಸಂಶ್ಲೇಷಿತ ಪ್ರೋಟೀನುಗಳೇ.

ವಂಶವಾಹಿಗಳಲ್ಲಿ ಸೂಕ್ತ ಮಾರ್ಪಾಡು ಮಾಡಿಕೊಳ್ಳುವ ಮೂಲಕ ಸಸ್ಯಗಳಲ್ಲಿ ಹೊಸದಾಗಿ ಔಷಧೀಯ ಗುಣಗಳನ್ನು ಕುದುರಿಸಬಹುದೆಂಬುದು ಈ ಪ್ರಯೋಗದಿಂದ ಸಿದ್ಧವಾದರೂ ಈ ಸಸ್ಯವನ್ನು ಸ್ವೀಕರಿಸುವಲ್ಲಿ ವಾಸ್ತವಿಕ ತೊಂದರೆಗಳು ಇದ್ದೇ ಇವೆ. ಉದಾಹರಣೆಗೆ ತಂಬಾಕನ್ನು ಯಾರು ತಾನೆ ಆಹಾರವಾಗಿ ಸ್ವೀಕರಿಸಿಯಾರು? ಸ್ವೀಕರಿಸಿದರೂ ಅದು ಇಂದಲ್ಲ ನಾಳೆ ಕ್ಯಾನ್ಸರನ್ನು ಉಂಟು ಮಾಡದೇ ಇದ್ದೀತೇ?

ಈ ಸಾಧನೆಯ ನಂತರ ವಿಜ್ಞಾನಿಗಳು ಹಿಡಿದ ಜಾಡನ್ನು ಸ್ವಲ್ಪ ಬದಲಿಸಿದರು. ಹೆಪಟೈಟಿಸ್ ಬಿ ವೈರಸ್ಸಿನ ವಂಶವಾಹಿಗಳನ್ನು ಬಟಾಟೆಯ ವಂಶವಾಹಿಗಳಲ್ಲಿ ತೂರಿಸಿದರು. ಹೀಗೆ ಸೃಷ್ಟಿಸಿದ ಬಟಾಟೆಯಲ್ಲಿ ಯಕೃತ್ತಿನ ಊತವನ್ನು ತಗ್ಗಿಸುವ ಪ್ರತಿವಿಷವಸ್ತು ಇತ್ತಾದರೂ ಯುಕ್ತವಾದ ಪ್ರಮಾಣದಲ್ಲಿ ಇರಲಿಲ್ಲ. ಈಗ ಈ ಪ್ರಮಾಣವನ್ನು ಹೆಚ್ಚಿಸುವತ್ತ ವಿಜ್ಞಾನಿಗಳ ಗಮನ.

ಹಾಗಾದರೆ ಇಂದಿಲ್ಲ ನಾಳೆ ಔಷಧದ ಗುಣವುಳ್ಳ ಬಟಾಟೆ ದೊರೆತೀತೆ? ಖಂಡಿತವಾಗಿ. ಬರಿ ಹೆಪಟೈಟಿಸ್ ಬಿ ವೈರಸ್ಸನ್ನು ಕೊಲ್ಲಬಲ್ಲ ಬಟಾಟೆಯಷ್ಟೇ ಅಲ್ಲ, ಬೇರೆ ಬೇರೆ ರೋಗಾಣುಗಳಿಗೂ ಮಾರಕವಾದ ವಿವಿಧ ಬಗೆಯ ಬಟಾಟೆಗಳು ಮುಂದೊಮ್ಮೆ ಪೇಟೆಗೆ ಬರಬಹುದು. ಆದರೆ ನೀವು ಅವುಗಳನ್ನು ಹಸಿಯಾಗಿಯೇ ತಿನ್ನಲು ತಯಾರಿರಬೇಕು ಅಷ್ಟೆ. •

ಕನ್ನಡ ಕಥೆ

# ಶಾಪಿತ

• ಫಕ್ರುದ್ದೀನ್ ಇರುವೈಲ್

ಖಾಸಿಂ.... ಖಾಸಿಂ ಸರದಾರ.

ಸಾಯಂಕಾಲ ಹೊತ್ತು ಮುಳುಗಿದಾಗ ಆತ ಮನೆಗೆ ಬಂದ. ಮನೆಯ ಅಂಗಳಕ್ಕೆ ಬಂದಾಗ ಅವನಿಗೆ ಒಳಗಿಂದ 'ಖೊಕ್ ಖೊಕ್' ಎಂದು ಕೆಮ್ಮುತ್ತಿರುವುದು ಕೇಳಿಸಿತು. ಅದು ತನ್ನ ಹೆಂಡತಿ ಶಾಕೀರಾ ಎಂದು ಅವನಿಗೆ ಗೊತ್ತಿತ್ತು. ಅವಳಲ್ಲದೇ ಇನ್ಯಾರು ಇರಲು ಸಾಧ್ಯ? ಕಳೆದ ಒಂದೆರಡು ತಿಂಗಳಿಂದ ಅವಳು ಹೀಗೇ ಕೆಮ್ಮುತ್ತಿದ್ದಾಳೆ. ಅವಳ ಆರೋಗ್ಯ ಸರಿ ಇಲ್ಲ. ಒಂದೆರಡು ಕಡೆ ತೋರಿಸಿ ಮದ್ದು ಮಾಡಿದ್ದಾಯ್ತು. ಆದರೆ ಗುಣವಾಗಲೇ ಇಲ್ಲ. ಅದರಿಂದ ಅವನಿಗೇನೂ ಅಷ್ಟು ಬೇಸರ ವಿಲ್ಲ. ಅವಳ ಬಗ್ಗೆ ಅಷ್ಟೇನು ಪ್ರೀತಿ ಇಲ್ಲ. ಅವನಿಗೆ ಮದುವೆಯಾಗಿ ನಾಲ್ಕು ವರುಷವಾದರೂ ಅವಳಿಂದ ಮಕ್ಕಳಾಗಿರಲಿಲ್ಲ.

ಆತ ಹೊಸ್ತಿಲು ದಾಟಿ ಒಳಗೆ ಬಂದ. ಚಿಮಣಿ ದೀಪದ ಎದುರು ಅವಳು ಬಾಯಿಗೆ ಕೈ ಅಡ್ಡ ಇಟ್ಟು ಕೆಮ್ಮುತ್ತಿದ್ದಳು. ಸುಮಾರು ಇಪ್ಪತ್ತೈದರ ವಯಸ್ಸು. ಕಪ್ಪಗಿನ ದೇಹ. ಕೋಲು ಮುಖ. ಕುಳಿ ಬಿದ್ದ ಕಂಗಳು. ಅವಳ ಎದುರಿನಲ್ಲಿ ಬೀಡಿಯ ಮೊರವಿತ್ತು.

ಗಂಡ ಬಂದುದನ್ನು ಕಂಡು ಶಾಕೀರಾ ಅಲ್ಲಿಂದ ಎದ್ದಳು.

"ಕೆಮ್ಮು ಇನ್ನೂ ಜೋರಾಗಿದೆಯೇ?" ಆತ ಕೇಳಿದ.

**"ತನ್ನ ಗರ್ಭದಲ್ಲಿ ಭ್ರೂಣದ ಕುಡಿ ಒಡೆಯುವ ಸಾಧ್ಯತೆಯೇ ಇಲ್ಲ. ತನ್ನದು ಬರಡು ಗರ್ಭ!"**
**-ಶಾಕೀರಾ ಚಿಂತಿಸಿದಳು**

"ಹೌದು, ಈ ಕೆಮ್ಮು ಗುಣವಾಗುವಂತೆ ಕಾಣುತ್ತಿಲ್ಲ."

"ನಿನ್ನ ಅವಸ್ಥೆ ನೋಡುಲಾಗುವುದಿಲ್ಲ! ಒಂದೆರಡು ವಾರ ನಿನ್ನ ಅಮ್ಮನ ಮನೆಗೆ ಹೋಗಿ ಇದ್ದು ಬಾ!"

ಅವಳು ಅಚ್ಚರಿಯಿಂದ ಗಂಡನ ಮುಖ ನೋಡಿದಳು. ಇಷ್ಟು ದಿನವೂ ಒಂದೆರಡು ದಿನ ಅಮ್ಮನ ಮನೆಗೆ ಹೋಗಿ ಬರುತ್ತೇನೆಂದರೆ ಬೇಡ ಅನ್ನುತ್ತಿದ್ದವರು, ಈಗ ತಾವಾಗಿಯೇ ತವರಿಗೆ ಹೋಗಿ ವಿಶ್ರಾಂತಿ ತೆಗೆದುಕೊಳ್ಳಲು ಹೇಳುತ್ತಲಿದ್ದಾರೆ! ಏನಾಗಿದೆ ಇವತ್ತು ತನ್ನ ಗಂಡನಿಗೆ?

"ಏನು ತಮಾಷೆ ಮಾಡ್ತೀರಾ ನನ್ನ?"

"ತಮಾಷೆ ಅಲ್ಲ.... ನಿಜಕ್ಕೂ ಹೇಳ್ತಿದ್ದೇನೆ.... ನಾಳೆನೇ ಹೋಗಿ ಒಂದೆರಡು ವಾರ ಇರು!"

ಎಂದೂ ನಗು ಕಾಣದ ಅವಳಲ್ಲಿ ಅತ್ಯದ್ಭುತವಾದ ಮುಗುಳ್ನಗೆ ಮಿಂಚಿತು. ಒಂದು ಕ್ಷಣ ಅವನಿಗೆ ಅನ್ನಿಸಿತು- ಈ ಕೋಲು ಮುಖದಲ್ಲೂ ಅಂದವಿದೆ ಎಂದು! ಅವಳಿಗೆ ಮರುಭೂಮಿಯಲ್ಲಿ ಮರೀಚಿಕೆ ಸಿಕ್ಕಂತೆ ಅನಿಸಿತು.

"ನಡೆದು ತುಂಬಾ ಆಯಾಸ ಆಗಿರಬೇಕಲ್ವೇ? ಕುಡಿಯಲು ಏನಾದರೂ ತರುತ್ತೇನೆ," ಎಂದು ಆಕೆ ಒಳಹೋದಳು. ಈತ ತನ್ನ ನಟನೆಗೆ ತಾನೇ ನಕ್ಕ. ನಾಲ್ಕು ವರ್ಷಗಳ ಕಾಲ ಒಂದಿಷ್ಟೂ ಮೋಸ, ವಂಚನೆ ಮಾಡದೆ ಅವನೊಂದಿಗೆ ಸಂಸಾರ ನಡೆಸಿದ್ದವಳಿಗೇ ಅವನು ವಂಚನೆ ಮಾಡಲು ಹೊರಟಿದ್ದ.

ಆಕೆ ಒಳಗಿಂದ ತಂಪಾದ ಲಿಂಬೆಹಣ್ಣಿನ ಶರಬತ್ತು ತಂದು ನೀಡಿದಳು. ಆತ ಅದನ್ನು ಕುಡಿದು ಕಿಸೆಯಿಂದ ನೂರರ ಎರಡು ನೋಟುಗಳನ್ನು ಅವಳಿಗಿತ್ತು ಹೇಳಿದ.

"ನಿನ್ನ ತವರಿನಲ್ಲಿ ನಿನಗೆ ಬೇಕಾಗಬಹುದು; ಇಟ್ಟುಕೋ."

ಅವಳು ಒಳಗೆ ಹೋದ ಮೇಲೆ ತನ್ನಲ್ಲೇ ಯೋಚಿಸತೊಡಗಿದ. ಬಹುಶಃ ಇವತ್ತು ನನ್ನೊಂದಿಗೆ ಅವಳ ಕೊನೆಯ ರಾತ್ರಿ. ನಾಲ್ಕು ವರುಷಗಳ ಅನಂತರ ನಾನು ಅವಳಿಂದ ಬೇರ್ಪಡುತ್ತಾ



ಇದ್ದೇನೆ. ಆದರೆ ಅವಳಿಗದು ಗೊತ್ತಿರಲಿಕ್ಕಿಲ್ಲ. ಈ ರಾತ್ರಿ ಅವಳಿಗೆ ಸಂತೃಪ್ತಿಯಾಗುವಷ್ಟು ಸುಖವನ್ನು ನೀಡಬೇಕು. ಇನ್ನೆಂದೂ ಇವಳನ್ನು ಬೆರೆಯುವ ಪ್ರಸಂಗ ಬರೋದಿಲ್ಲ. ನಾಳೆ ಇವಳನ್ನು ತವರಿಗೆ ಅಟ್ಟಿದ ಮೇಲೆ ನಾನು ಯೋಚಿಸಿದಂತೆ ಆ ಹೆಣ್ಣನ್ನು ತಂದು ಮದುವೆಯಾಗೋದು ಮತ್ತು ಇವಳಿಗೆ ತಲಾಖ್ ನೀಡೋದು!"

ಹೌದು! ಖಾಸಿಂ ಸರದಾರ ಮರು ಮದುವೆಯಾಗಲು ಯತ್ನಿಸಿದ್ದ. ಅಲ್ಲಿಂದ ಹದಿನೆಂಟು ಮೈಲಿ ದೂರದ ಹಸನ್‌ಕಾಕನ ಮಗಳು ನಫೀಸಾಳನ್ನು ನೋಡಿದಂದಿನಿಂದ ಅವಳನ್ಯಾಕೆ ತಾನು ಮದುವೆಯಾಗಬಾರದು ಅನ್ನಿಸಿತು. ತನ್ನ ಗೂರಲು ಕೆಮ್ಮಿನ ಮತ್ತು ಕೋಲು ಮುಖದ ಶಾಕೀರಾಳ ಜಾಗದಲ್ಲಿ ನಫೀಸಾಳನ್ನು ತಂದು ಇಟ್ಟುಕೊಳ್ಳುವುದು! ಆದರೆ ಅದು ಸಾಧ್ಯವೇ? ಯಾಕೆ ಸಾಧ್ಯವಿಲ್ಲ? ಯಾವುದಾದರೂ ಒಂದು ಕಾರಣ ಕೊಟ್ಟು ಶಾಕೀರಾಳನ್ನು ಅವಳ ತವರಿಗೆ ಅಟ್ಟಿ ನಂತರ ಅವಳಿಗೆ ತಲಾಖ್ ಕೊಡೋದು! ಯಾವುದಾದರೂ ಕಾರಣವೇಕೆ? ಕಾರಣವಿದೆಯಲ್ಲ. 'ಅವಳು ತಾಯಾಗದಿರುವ ಕಾರಣ ನಿಮ್ಮ ಮಗಳಿಂದ ನನ್ನ ವಂಶ ಬೆಳೆಯುವ ಸಾಧ್ಯತೆ ಇಲ್ಲ. ಅವಳು ಜೀವನ ಪರ್ಯಂತ ಬಂಜೆಯಾಗಿಯೇ ಇರಬೇಕಾಗುತ್ತದೆ. ನನಗೆ ಒಂದೆರಡು ಮಕ್ಕಳು ಬೇಕು. ನಮ್ಮದು ಉತ್ತಮ ಸರದಾರ ಕುಟುಂಬ. ತಲೆತಲಾಂತರದಿಂದಲೂ ಬೆಳೆದು ಬಂದ ವಂಶ ನನ್ನದು. ಇದು ನಿಮ್ಮ ಮಗಳಿಂದಾಗಿ ಇಲ್ಲಿಗೆ ಕೊನೆಯಾಗುವುದು ಬೇಡ. ಅದಕ್ಕಾಗಿ ನಿಮ್ಮ ದಾರಿ ನಿಮಗೆ. ತಾನು ಬೇರೆ ಮದುವೆಯಾಗುತ್ತೇನೆ.' ಎಂದು ಹೇಳಿಬಿಡುವುದು ಅಂದುಕೊಂಡ.

ಅದು ದೃಢ ನಿಶ್ಚಯವಾಗಿ ಆತ ಹದಿನೆಂಟು ಮೈಲಿಯಾಚೆಯ ಆ ಹುಡುಗಿ ನಫೀಸಾಳನ್ನು ನಿಕಾ ಮಾಡಿಕೊಳ್ಳಲು ಮಾತುಕತೆಯಾಡಲು ಹೋಗಿದ್ದ. ಅವರದೋ ಮಧ್ಯಮ ಕುಟುಂಬ. ಖಾಸಿಂ ಸರದಾರನಿಗೆ ಆ ಊರಲ್ಲಿ ಒಳ್ಳೆ ಹೆಸರಿತ್ತು. ಅಲ್ಲಿನ ವ್ಯಾಪಾರ ವಹಿವಾಟು ಉತ್ತಮವಿತ್ತು. ಇವನಿಗೊಂದು ಮದುವೆಯಾಗಿದೆ ಎಂದು ಗೊತ್ತಿದ್ದರೂ ಹತ್ತು ಪವನು ಬಂಗಾರ ಹತ್ತು ಹದಿನೈದು ಸಾವಿರೂಪಾಯಿಗೆ ಮಾತಾಯಿತು. ಚೆಲುವಿನ ಆ ಹುಡುಗಿ ನಫೀಸಾ ಈತ ನೋಡಿದಾಗ ಒಂದು ಸುಂದರ ಪೋಸ್‌ಕೊಟ್ಟಳು. ಆ ಪೋಸ್‌ನಿಂದ ಇವನಲ್ಲಿ ಛಳಕು ಹುಟ್ಟಿ ಯಾವಾಗ ಶಾಕೀರಾಳನ್ನು ಹೊರತಳ್ಳಿ ಇವಳನ್ನು ಮದುವೆಯಾದೇನು ಎಂದು ಕಾತರಿಸತೊಡಗಿದ.

ಮದುವೆಗೆ ಗುಟ್ಟಾಗಿ ಒಂದು ದಿನ ನಿಶ್ಚಯ ಮಾಡಿ ಮನೆಗೆ ಬಂದವ ಹೀಗೆ ಶಾಕಿರಾಳನ್ನು ತವರಿಗೆ ಅಟ್ಟುವ ಯೋಜನೆ ಹಾಕಿದ್ದ.

ರಾತ್ರಿ ಗಂಡನ ಅದಮ್ಯ ಉತ್ಸಾಹ ಕಂಡು ಅವಾಕ್ಕಾಗಿ, ಗಂಡನ ಪ್ರೀತಿ ಹೀಗೆಯೇ ಸದಾ ಕಾಲ ಇರಲಿ ಎಂದು ಆಶಿಸುತ್ತಾ ಆತನ ಬೆಚ್ಚನೆಯ ಎದೆಯಲ್ಲಿ ಮುಖವಿರಿಸಿ ಮಲಗಿದಳು. ನಾಲ್ಕು ವರ್ಷದಿಂದ ಹೀಗೆ ಹಲವಷ್ಟು ಸಲ ಅದಮ್ಯ ಉತ್ಸಾಹದಲ್ಲಿ ಬೀಜ ಬಿತ್ತಿದರೂ ಅದು ಮೊಳಕೆಯೊಡೆಯಲೇ ಇಲ್ಲ. ಅದೆಷ್ಟು ಆಸೆ ತನಗೆ, ತನ್ನ ಗರ್ಭದಲ್ಲೊಂದು ಭ್ರೂಣ ಬೆಳೆದು ಅದಕ್ಕೆ ಕೈಕಾಲು, ಕಣ್ಣು, ಕಿವಿ, ಮೂಗು, ಬಾಯಿ ಎಲ್ಲಾ ಮೂಡಿ ಒಂದು ಸುಂದರ ಶಿಶುವಾಗಿ, ಮುಂದೊಂದು ದಿನ ಏಳು ತಿಂಗಳು ತುಂಬಿದ ನಂತರ ಚಂದದಲ್ಲಿ ಸೀಮಂತ ಮಾಡಿಸಿಕೊಂಡು, ಗಂಡನ ಪಾದ ಮುಟ್ಟಿ ನಮಸ್ಕರಿಸಿ, ತಾಯಿಯ ಮನೆಗೆ ಹೋಗುವುದು. ಅಲ್ಲಿ ಹೆರಿಗೆಯ ಕ್ಷಣಗಳನ್ನು ಎಣಿಸುತ್ತಾ ದಿನ ತುಂಬಿ ಒಂದು ದಿನ ಮುದ್ದಾದ ಮಗುವನ್ನು ಹಡೆಯುವುದು. ಆದರೆ ಅದೆಲ್ಲಾ ಬರೀ ಕನಸು. ತನ್ನ ಗರ್ಭದಲ್ಲಿ ಭ್ರೂಣದ ಕುಡಿ ಒಡೆಯುವ ಸಾಧ್ಯತೆಯೇ ಇಲ್ಲ. ತನ್ನದು ಬರಡು ಗರ್ಭ! ತಾನೆಂದಿಗೂ ಬಂಜೆ!!

ಅವಳಿಗೆ ಕೆಮ್ಮು ಒತ್ತರಿಸಿ ಬಂತು. ಖೊಕ್ ಖೊಕ್ ಕೆಮ್ಮು ನಿದ್ರೆಯ ಆಳಕ್ಕೆ ಇಳಿಯುತ್ತಿದ್ದ ಖಾಸಿಂ ಸರದಾರ ಒಮ್ಮೆಲೆ ನಿದ್ದೆಯಲ್ಲಿ ಬೆಚ್ಚಿದ. ನಿದ್ದೆ ಹಾಳಾದುದಕ್ಕೆ ಅಸಾಧ್ಯ ಸಿಟ್ಟು ಬೇರೆ. ಆದರೆ ಕೋಪಿಸಿಕೊಳ್ಳುವಂತಿಲ್ಲ. ಇದೊಂದು ರಾತ್ರಿ ತಾನೇ. ನಾಳೆಯಿಂದ ನಾನೊಬ್ಬನೇ ಹಾಯಾಗಿ ನಿದ್ರಿಸಬಹುದು. ಕೆಲವು ದಿನಗಳ ನಂತರ ಆ ಎಳೆಯ ಹುಡುಗಿ ನಫೀಸಾಳ ಸುಂದರ ಬಾಹುಗಳಲ್ಲಿ ಮಲಗಬಹುದು. ಹೀಗೆಂದುಕೊಂಡ ಆತ

ನಿದ್ರೆಯ ಆಳಕ್ಕೆ ಇಳಿದ.

ಮರುದಿನ ಮುಂಜಾವಿನಲ್ಲಿ ಅವನು ಏಳುವುದಕ್ಕೆ ಮೊದಲು ಅವಳು ಎದ್ದು ಚಹಾ ತಿಂಡಿ ತಯಾರಿಸಿ ಅವನನ್ನು ಎಬ್ಬಿಸಿದಳು. ಅಲ್ಲಿಂದ ಇಪ್ಪತ್ತೆಂಟು ಮೈಲಿ ದೂರದ ಅವಳ ತವರಿಗೆ ಹೋಗಲು ಮುಂಜಾನೆ ಏಳಕ್ಕೆ ಒಂದು ಬಸ್ಸು. ಬಸ್ಸು ಬರುವಷ್ಟರಲ್ಲಿ ರೆಡಿಯಾಗಿ ಮನೆಗೆ ಬೀಗ ಹಾಕಿ ಅವನು ಅವಳೊಂದಿಗೆ ಹೊರಟ.

ಇಪ್ಪತ್ತೆಂಟು ಮೈಲಿ ದೂರದ ಅವಳ ತವರನ್ನು ಸೇರಿದಾಗ ಅವಳ ಅಪ್ಪ ಅಮ್ಮರಿಗೆ ಸಂಭ್ರಮವೋ ಸಂಭ್ರಮ. ಮಗಳ ಮುಖದಲ್ಲಿನ ಸಂಭ್ರಮ. ಜತೆಗೆ ಅಳಿಯ ತಮಗಾಗಿ ತಂದ ಸೀರೆ, ಶರ್ಟು, ಲುಂಗಿ ಕಂಡು ಇನ್ನಷ್ಟು ಖುಷಿ.

ಅವಳನ್ನು ಅಲ್ಲಿ ಬಿಟ್ಟ ಖಾಸಿಂ ಸರದಾರ ಹೇಳಿದ, "ಇವಳು ಸ್ವಲ್ಪ ದಿನ ನಿಮ್ಮಲ್ಲಿರಲಿ. ಇಲ್ಲಿ ಸ್ವಲ್ಪ ಆರಾಮ ದೊರೆಯಬಹುದೆಂಬ ನಂಬಿಕೆ ನನ್ನದು!"

ಅವಳನ್ನು ಬಿಟ್ಟು ಬರುವಾಗ ಶಾಕೀರಾ ಹೇಳಿದಳು, "ಬೇಗ ಬನ್ನಿ.... ನಿಮ್ಮನ್ನು ಬಿಟ್ಟು ಇರೋಕಾಗೊಲ್ಲ."

ಅವನು ತುಟಿಯಂಚಿನಲ್ಲೇ ನಕ್ಕ.

●

ಖಾಸಿಂ ಸರದಾರ ಶಾಕೀರಾಳನ್ನು ಬಿಟ್ಟು ಬಂದು ಒಂದು ವಾರ ಹಾಯಾಗಿ ಕಳೆದ. ಬೇಗನೇ ಅವಳಿಗೆ ತಲಾಖ್ ಕಳುಹಿಸಬೇಕು. ತಾನು ನಫೀಸಾಳನ್ನು ಮದುವೆಯಾಗಲು ಇನ್ನೂ ಹತ್ತು ದಿನ ಇದೆ. ಅಷ್ಟರಲ್ಲಿ ಎಲ್ಲವೂ ಮುಗಿದು ಬಿಡಬೇಕು. ತನಗೆ ಸಿಗುವ ಹತ್ತು ಸಾವಿರ ರೂಪಾಯಿಗಳಿಗಿಂತಲೂ ಮುಖ್ಯ ತನಗೆ ಬರಬಹುದಾದ ಸುಖ ಮತ್ತು ತನಗೊಬ್ಬ ವಾರಸುದಾರ.

ಒಂದು ದಿನ ಬಾಗಿಲಲ್ಲಿ ಯಾರೋ ಬಂದು ನಿಂತಿರುವುದು ಗೋಚರವಾಯಿತು. ನೋಡುತ್ತಾನೆ ಶಾಕೀರಾಳ ಬಾಬಾ. ಆತ ಅವರನ್ನು ಒಳಗೇ ಕರೆಯದೇ ಹೊರಗೆ ಬಂದು ಕೇಳಿದ- "ಏನು ಬಂದಿರಿ ನೀವು?"

"ನೀನು ಶಾಕೀರಾಳನ್ನು ಬಿಟ್ಟು ಹೋಗಿ ಹತ್ತು ದಿನವಾಯಿತು. ಆದರೆ ನಿನ್ನ ಸುದ್ದಿಯೇ ಇಲ್ಲ."




"ನಾನು ಇನ್ನು ಅಲ್ಲಿಗೆ ಬರೋದಿಲ್ಲ!"

ಅವರು ಒಮ್ಮೆಲೆ ಅವಾಕ್ಕಾದರು.

"ಏನು ನೀನು ಹೇಳುತ್ತಿರೋದು?"

"ನಾನು ಹೇಳುತ್ತಿರೋದೇ ಅದನ್ನು. ನಾನಿನ್ನು ಶಾಕೀರಾಳನ್ನು ಸಾಕಿಕೊಳ್ಳಲಾಗುವುದಿಲ್ಲ! ಅವಳನ್ನು ನೀವಿನ್ನು ನಿಮ್ಮ ಮನೆಯಲ್ಲಿಯೇ ಇಟ್ಟುಕೋಬಹುದು!"

"ಎಂತಹಾ ಮಾತನಾಡುತ್ತೀ ನೀನು? ನಿನಗೇನು ಸ್ವಯ ಇಲ್ಲವೇ?"

"ಸ್ವಯ ತಪ್ಪಿರೋದು ನನಗಲ್ಲ, ನಿಮ್ಮ ಮಗಳಿಗೆ."

"ಏನಾಗಿದೆ ಅವಳಿಗೆ?"

"ಈ ನಾಲ್ಕು ವರುಷದಲ್ಲಿ ಒಂದು ಪಿಂಡವನ್ನೂ ಹೆತ್ತು ಕೊಡಲಾಗಲಿಲ್ಲ ಅವಳಿಂದ."

"ಅದು ಅಲ್ಲಾಹನ ನಿಯಮ! ಅದಕ್ಕೆ ಮನುಷ್ಯರಾದ ನಮಗೇನು ಮಾಡಲಾಗುತ್ತೆ?"

"ಅದೆಲ್ಲಾ ನನಗೆ ಗೊತ್ತಿಲ್ಲ. ನನ್ನದು ಸರದಾರರ ಕುಟುಂಬ. ವಂಶಪಾರಂಪರ್ಯವಾಗಿ ಬೆಳೆದು ಬಂದದ್ದು. ಅದು ನಿಮ್ಮ ಮಗಳಿಂದಾಗಿ ಕೊನೆಗೊಳ್ಳೋದು ಬೇಡ. ಅದಕ್ಕಾಗಿ ನಾನು ಇನ್ನೊಂದು

ಮದುವೆಯಾಗುತ್ತೇನೆ."

"ನಿನಗೆ ಹುಚ್ಚು ಹಿಡಿದಿದೆ. ನನ್ನ ಮಗಳ ಸ್ಥಾನದಲ್ಲಿ ನೀನು ಇನ್ನೊಬ್ಬಳನ್ನು ತಂದರೆ ನಿನಗೆ ಬರ್ಖಾತ್ತಾಗೋಲ್ಲ!"

"ನಿಮ್ಮ ಕೆಟ್ಟ ಉಪದೇಶ ನನಗೆ ಬೇಡ! ನಾನಂತೂ ಆ ಹುಡುಗಿಯನ್ನು ಮದುವೆಯಾಗೋದು ಗ್ಯಾರಂಟಿ! ಹಾಗೆಯೇ ಇನ್ನು ಕೆಲವೇ ದಿನಗಳಲ್ಲಿ ನಿಮ್ಮ ಮಗಳಿಗೆ ತಲಾಖ್ ಕಳುಹಿಸುತ್ತೇನೆ," ಎಂದವ ಬಾಗಿಲಿಗೆ ಬೀಗ ಹಾಕಿ ಎತ್ತಲೋ ಹೊರಟುಹೋದ.

ಹೊಸ್ತಿಲಲ್ಲೇ ಅವಾಕ್ಕಾಗಿ ನಿಂತ ಶಾಕೀರಾಳ ಬಾಬಾ ನಂತರ ನಿಧಾನದ ಹೆಜ್ಜೆ ಹಾಕುತ್ತಾ ಅಲ್ಲಿಂದ ಹೊರಟುಹೋದರು.

ನಫೀಸಾ ಹದಿನೆಂಟರ ಹರೆಯದ ಹುಡುಗಿ. ತುಂಬಾ ಚೆಲುವೆ. ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನುವಂತಹ ಸೌಂದರ್ಯ. ಗುಟ್ಟಿನಲ್ಲಿ ಮದುವೆ ನಿಶ್ಚಯವಾದ ನಂತರ ಹೀಗೆ ಪಕ್ಕದೂರಿನ ಅಜ್ಜಿ ಮನೆಗೆ ಹೋದಳು. ಅರವತ್ತೆಂಟರ ಅಜ್ಜಿ ಉಮ್ಮತ್ತಮ್ಮ ಕೇಳಿದಳು.

"ಹೌದೇನೇ ನಫೀಸಾ ನಿನಗೆ ಮದುವೆಯಂತೆ?"

"ಹೌದು ಅಜ್ಜೀ."

"ಅಯ್ಯೋ ಗಂಡೆ ಮೋಳೆ, ನೀ ಯಾಕೆ ಈ ಮದುವೆಗೆ ಒಪ್ಪಿಕೊಂಡೆ?"

"ಯಾಕಜ್ಜೀ, ನನಗೇನು ಮದುವೆಯಾಗುವ ಪ್ರಾಯವಾಗಿಲ್ವೆ?"

"ಅದಕ್ಕಲ್ಲ ಮೋಳೇ, ಅವನಿಗೀಗಾಗಲೇ ಇನ್ನೊಂದು ಮದುವೆಯಾಗಿದೆ."

ಅವಳು ಒಮ್ಮೆಲೆ ಬೆಚ್ಚಿದಳು.

"ಇಲ್ಲ ಅಜ್ಜೀ, ನಿನಗೆ ಯಾರೋ ಸುಳ್ಳು ಹೇಳಿದ್ದಾರೆ. ಅವರನ್ನು ನೋಡಿದಾಗ ಹಾಗೆ ಕಾಣುವುದಿಲ್ಲ. ತುಂಬಾ ಒಳ್ಳೆಯ ವ್ಯಕ್ತಿಯಂತೆ ಕಾಣುತ್ತಾರೆ!"

"ನಿನ್ನ ಪ್ರಾಯವೇ ಹಾಗೆ, ಮೋಳೇ. ಈ ಪ್ರಾಯದಲ್ಲಿ ಹಾಗೇನೇ. ಎಲ್ಲಾ ಹರೆಯದ ಗಂಡಸರು ಚಂದವಾಗೇ ಕಾಣಿಸುತ್ತಾರೆ. ಅವನಿಗೆ ಮದುವೆಯಾಗಿ ನಾಲ್ಕು ವರುಷವಾಗಿದೆ. ನಿನ್ನ ಬಾಬಾನೆ ನನಗೆ ಎಲ್ಲಾ ತಿಳಿಸಿದ. ಇಂತಹ ಚೆಂದುಳ್ಳಿ ಹುಡುಗಿಯನ್ನು ಮದುವೆಯಾದ ಗಂಡನಿಗೆ ಯಾಕೆ ಕೊಡುತ್ತಾನೋ?"

ನಫೀಸಾ ತಬ್ಬಿಬ್ಬಾದಳು. ಏನೆಲ್ಲಾ ನಡೆದಿದೆ! ತನಗೆ ಎಷ್ಟು ಸುಂದರ ಕನಸುಗಳಿದ್ದುವು. ಒಂದೇ ಎರಡೇ? ಹಲವಷ್ಟು. ಎಲ್ಲಾ ಹೆಣ್ಣುಗಳಿಗಿರುವಂತೆ. ಆದರೆ ತಂದೆ ಎಂತಹ ತಪ್ಪು ಮಾಡುತ್ತಿದ್ದಾರೆ. ತಾನು ಮದುವೆಯಾಗಿ ಹೋದರೆ ಆ ಮೊದಲ ಹೆಣ್ಣಿನ ಗತಿ ಏನಾಗಬಹುದು. ಆಗುವುದೇನು? ಆಕೆ ಈತನಿಂದ ತಲಾಖ್‌ಗೊಳಪಟ್ಟು ಕಣ್ಣೀರು ಸುರಿಸುತ್ತಾ ಸಾಯಬೇಕು. ಇದಕ್ಕೆ ತಾನು ಅವಕಾಶ ಕೊಡಲೇಬಾರದು! ಈ ಮದುವೆಯನ್ನು ನಿಲ್ಲಿಸಲೇಬೇಕು. ಆಕೆ ದೃಢ ನಿರ್ಧಾರ ತಾಳಿದಳು.

●

ನಫೀಸಾಳನ್ನು ಮದುವೆಯಾಗುವ ಉತ್ಕಟೇಚ್ಛೆ ಇಟ್ಟುಕೊಂಡು ಮನೆಗೆ ಬಂದ ಖಾಸಿಂಗೆ ಹದಿನೆಂಟು ಮೈಲಿ ದೂರದ ನಫೀಸಾಳ ತಂದೆಯಿಂದ ಕಾಗದ ಬಂದಿತ್ತು.

"ಖಾಸಿಂ ಸರದಾರನಿಗೆ,

ನಿನ್ನ ಎರಡನೆಯ ಹೆಂಡತಿಯಾಗಲು ನಫೀಸಾ ಒಪ್ಪುವುದಿಲ್ಲ, ಅವಳಿಗೆ ಬೇರೆ ಮದುವೆ ನಿಶ್ಚಯವಾಗಿದೆ. ನೀನು ಮೊದಲ ಹೆಂಡತಿಗೆ ದ್ರೋಹ ಬಗೆಯದೇ ಅವಳೊಂದಿಗೇ ಸಂಸಾರ ನಡೆಸು...."

ಖಾಸಿಂ ಸರದಾರನಿಗೆ ಕಣ್ಣು ಕತ್ತಲಿಟ್ಟು ಬಂತು. ಅಲ್ಲೇ ಕುಸಿದ. ಕೈಯಲ್ಲಿದ್ದ ಪತ್ರ ಗಾಳಿಯಲ್ಲಿ ಎಲ್ಲೋ ಹಾರಿಹೋಯಿತು. ●

೧೬೫೩ರಲ್ಲಿ ಡೇಸನ್ ಎಂಬ ಫ್ರೆಂಚ್ ಮನುಷ್ಯ ಕಟ್ಟಿಗೆಯಿಂದ ಜಲಾಂತರ್ಗಾಮಿಯನ್ನು ತಯಾರಿಸಿ ಇಂಥ ಮುಳುಗುನಾವೆಯನ್ನು ಈ ವರೆಗೆ ಯಾರೂ ತಯಾರಿಸಿಯೇ ಇಲ್ಲವೆಂದು ಬಡಾಯಿಕೊಚ್ಚಿಕೊಂಡ. ಆತ ಹೇಳಿದ್ದು ಒಂದರ್ಥದಲ್ಲಿ ನಿಜವೇ. ಒಮ್ಮೆ ನೀರಿನಲ್ಲಿ ಮುಳುಗಿದ ಜಲಾಂತರ್ಗಾಮಿ ಮತ್ತೆಂದೂ ನೀರುಬಿಟ್ಟು ಮೇಲೇಳಲಿಲ್ಲ.

ಪುಸ್ತಕ ವಿಭಾಗ



# ಬೇಂದ್ರೆ ಎಷ್ಟೊಂದು ನೆನಪುಗಳು !

ವಿವಿಧ
ಲೇಖಕರು





ಬೇಂದ್ರೆ ತುಂಬ ಜನಾನುರಾಗಿ, ಅಂತಃಕರಣದ ಆಗರ ಎಂಬುದನ್ನು ಕಳೆದ ಕೆಲವು 'ಕಸ್ತೂರಿ' ಸಂಚಿಕೆಗಳಲ್ಲಿ ಪ್ರಕಟವಾದ 'ಬೇಂದ್ರೆ ನೆನಪು'ಗಳೇ ಎತ್ತಿ ತೋರಿಸಿವೆ. ತಮ್ಮನ್ನು ಭೆಟ್ಟಿಯಾದವರು ಯಾರೇ ಇರಲಿ, ಯಾವ ವಯಸ್ಸಿನವರೇ ಆಗಿರಲಿ, ಅವರೊಂದಿಗೆ ಆತ್ಮೀಯವಾಗಿ ನಡೆದುಕೊಂಡಂಥವರು ಅವರು. ಇಲ್ಲಿ ಈ ಸಲ ೨೫ ಜನರ ನೆನಪುಗಳನ್ನು 'ಪುಸ್ತಕ ವಿಭಾಗ'ದಲ್ಲಿ ಸಂಕಲಿಸಿಕೊಡುವುದರೊಂದಿಗೆ 'ಬೇಂದ್ರೆ ನೆನಪು' ಅಂಕಣಕ್ಕೆ ಪೂರ್ಣವಿರಾಮ ಹಾಕುತ್ತಿದ್ದೇವೆ.

ಇಲ್ಲಿ ನೆನಪುಗಳ ನಡುವೆ ಬಳಸಿಕೊಂಡ ರೇಖಾ ಚಿತ್ರಗಳನ್ನು ಧಾರವಾಡದ ಕಲಾವಿದ ಸುರೇಶ ಕುಲಕರ್ಣಿಯವರ ಅವರ 'ಭಾವರೇಖೆಯಲ್ಲಿ ಬೇಂದ್ರೆ' (ಪ್ರಕಾಶನ: ಮನೋಹರ ಗ್ರಂಥಮಾಲೆ, ಧಾರವಾಡ) ಎಂಬ ಪುಸ್ತಕದಿಂದ ಕೃತಜ್ಞತಾಪೂರ್ವಕ ಎತ್ತಿಕೊಂಡು ಪ್ರಕಟಿಸಿದ್ದೇವೆ.

● ಸಂಪಾದಕ

# ಜಿಗಿಸಿಯೇ ಬಿಟ್ಟರು!

ಬೇಂದ್ರೆಯವರು ೬೫ ವರ್ಷಗಳ ಹಿಂದೆ ಧಾರವಾಡದ ವ್ಹಿಕ್ಟೋರಿಯಾ ಹೈಸ್ಕೂಲಿನಲ್ಲಿ (ಈಗಿನ ವಿದ್ಯಾರಣ್ಯ ಹೈಸ್ಕೂಲು) ಶಿಕ್ಷಕರು. ನಾನು ಅಲ್ಲಿಯ ವಿದ್ಯಾರ್ಥಿ. ೧೯೩೦ರಲ್ಲಿ ಮ್ಯಾಟ್ರಿಕ್ಕಿನಲ್ಲಿದ್ದ ನನಗೆ ಅವರೇ ಕ್ಲಾಸ್‌ಮಾಸ್ತರರು. ಪ್ರತಿಯೊಬ್ಬ ವಿದ್ಯಾರ್ಥಿಯ ಹೆಸರು, ಊರು, ತಂದೆ-ತಾಯಿ ಇತ್ಯಾದಿ ಪರಿಚಯ ಮಾಡಿಕೊಳ್ಳುತ್ತಿದ್ದುದು ಅವರ ಸ್ವಭಾವ. ನನ್ನ ಊರು (ಸವದತ್ತಿ ಸಮೀಪದ) ಮುನವಳ್ಳಿ ಎಂದು ಗೊತ್ತಾಗಿ "ಅಲ್ಲೆ ಸಗರ ಚಿದಂಬರ ಶಾಸ್ತ್ರಿಗಳು ಅಂತ ನಮ್ಮ ಜೀವದ ಗೆಳ್ಯಾರು ಇದ್ರಪಾ. ಪಾಪ, ತೀರಿಹೋದ್ರು. ಒಂದ ಸಲಾ ನನ್ನ ನಿಮ್ಮೂರಿಗೆ ಕರರೊಂಡು ಹೋಗು ಹುಡುಗಾ. ಅವರ ಮನಿಯವರ್ನ ಮಾತಾಡಿಸಿ ಬರಲಿಕ್ಕಾಗ್ತದ," ಅಂದರು.

ಆದರೆ ಮ್ಯಾಟ್ರಿಕ್ ನಂತರ ನಾನು ನಮ್ಮೂರು ಮುನವಳ್ಳಿಯಲ್ಲಿಯೇ ಉಳಿದುಬಿಟ್ಟೆನಾದ್ದರಿಂದ ಅವರ ಸಂಪರ್ಕ ತಪ್ಪಿದಂತಾಯಿತು. ಅಷ್ಟೇ ಅಲ್ಲ, ಅವರನ್ನು ನಮ್ಮೂರಿಗೆ ಕರೆತರುವುದೂ ಸಾಧ್ಯವಾಗಲಿಲ್ಲ.

ಮಾಸ್ತರರ ನಿತ್ಯದರ್ಶನ, ವಾತ್ಸಲ್ಯಗಳಿಂದ ಪ್ರೀತನಾಗುತ್ತಿದ್ದ ನನ್ನ ಶಾಲಾ ದಿನಗಳಲ್ಲಿ ಒಮ್ಮೆ ಅವರ ಕ್ಲಾಸಿನ ನಂತರ ವಿರಾಮ ಕಾಲದ ಗಂಟೆ ಬಾರಿಸಿತು. ನಾವೆಲ್ಲ ಹುಡುಗರು ಹೊರಗೆ ಹೋದೆವು. ಸೂಟಿ ಬಿಟ್ಟಾಗ ನನಗೆ ನಮ್ಮ ರೂಮಿನ ಸಳಿಗಳಿಲ್ಲದ ಕಿಟಕಿಯಿಂದ ಹಾರಿ ಕ್ಲಾಸಿನ ಒಳಗೆ ಹೋಗುವುದೆಂದರೆ ಖುಷಿ. ಅಂದು ಹಾಗೆ ಹಾರಿದಾಗ ಒಳಗೆ ಬೇಂದ್ರೆ ಮಾಸ್ತರರು ಕಾವ್ಯ ಚಿಂತನೆಯಲ್ಲಿ ಕುಳಿತುಬಿಟ್ಟಿದ್ದಾರೆ! ನನ್ನ ನೆಗೆತದಿಂದ ಅವರ ಚಿಂತನೆಗೆ ಭಂಗ ಬಂದಿರಬೇಕು. "ಏನೋ ಜೋಶಿ? ಎಂಥಾ ಜಿಗತೋ ಸಿಂದು!" ಅಂದರು.

ನನಗೋ ನಾಚಿಕೆ ಸಾವು. ಕೈ ಹೊಸೆಯುತ್ತ "ತಪ್ಪಾತ್ರಿ ಸsರ್. ನೀವಿನ್ನೂ ಇಲ್ಲೇ ಕೂತೀರಿ ಅಂತ ಗೊತ್ತಾಗಲಿಲ್ಲ ನನಗ," ಅಂದೆ.

"ಅಂಥಾದೇನ ತಪ್ಪಾತೋs? ಇನ್ನೊಮ್ಮೆ ಜಿಗಿದುಬಿಡು ನೋಡೋಣ." ಅಂತ ಅವರು. ಇದೇನು ಚೇಷ್ಟೆಯೋ, ನಿಜವಾಗಿಯೂ ಹೇಳಿದ್ದೋ ಎಂದು ಅರ್ಥವಾಗದೇ ನಿಂತವ ನಾನು.

"ಯಾಕೋ? ಜಿಗಿಯsಬೇಕ ನೀನು,"

## "ನಾನೂ ಅವನs...."

೧೯೭೪ರಲ್ಲಿ ನಾನು ಮೈಸೂರ್ ಪಾವರ್ ಕಾರ್ಪೊರೇಶನ್‌ನಲ್ಲಿ ಇಂಜನಿಯರ್ ಆಗಿ ಅಂಬಿಕಾನಗರದಲ್ಲಿದ್ದಾಗ, ನಮ್ಮ ಕ್ಲಬ್ಬಿನ ವಾರ್ಷಿಕೋತ್ಸವಕ್ಕೆ ಬೇಂದ್ರೆ ಮುಖ್ಯ ಅತಿಥಿ. ಆಗ ಕ್ಲಬ್ಬಿನ ಅಧ್ಯಕ್ಷರಾಗಿದ್ದವರು ಚೀಫ್ ಇಂಜನಿಯರ್ ಚಿಕ್ಕೋಡಿಯವರು. ನಾವೆಲ್ಲ ಕಾರ್ಯಕ್ರಮಕ್ಕೆ ಮೊದಲು ಬೇಂದ್ರೆಯವರೊಂದಿಗೆ ಮಾತಾಡುತ್ತ ಕುಳಿತಿದ್ದಾಗ ಅವರು ತಟ್ಟನೆ ಕೇಳಿದರು. "ಚಿಕ್ಕೋಡಿಯವರ, ನಿಮ್ಮ ತಾಯಿ ಹೆಸರೇನು?" ಚಿಕ್ಕೋಡಿಯವರು "ಅಂಬಿಕಾ" ಎಂದರು. "ಹಾಗಾದರೆ ನಿಮ್ಮ ಹೆಸರು?" ಮತ್ತೆ ಪ್ರಶ್ನಿಸಿದರು ಬೇಂದ್ರೆಯವರು. "ದತ್ತಾತ್ರೇಯ" ಎಂದು ಚಿಕ್ಕೋಡಿಯವರು ಹೇಳುತ್ತಲೂ ಬೇಂದ್ರೆಯವರು ಗಹಗಹಿಸಿ ನಕ್ಕು "ಚಿಕ್ಕೋಡಿಯವರ, ಅಂತೂ ನೀವೂ 'ಅಂಬಿಕಾತನಯದತ್ತ'ರs ಇದ್ದೀರಿ. ನಾನೂ ಅವನs..." ಎಂದಾಗ ನಮ್ಮೆಲ್ಲರ ನಗೆಯಲ್ಲೂ ಅವರ ನಗೆ ಸ್ಪಷ್ಟವಾಗಿ ಕೇಳುತ್ತಿತ್ತು.

● ವಸಂತ ಸಿರೂರ,
ಧಾರವಾಡ

ಅಂತ ಒತ್ತಾಯಪೂರ್ವಕ ಹೊರಗೆ ಕಳಿಸಿ ನಾನು ಮತ್ತೆ ಕಿಟಕಿಯೊಳಗಿಂದ ಜಿಗಿಯುವಂತೆ ಮಾಡಿ "ವಾಹವ್ವಾ" ಎಂದು ಚಪ್ಪಾಳೆ ಹೊಡೆದು ನಕ್ಕರು

ತಮ್ಮ ವಿದ್ಯಾರ್ಥಿಗಳಿಗೆ ವಿಷಯ ಹೇಳಿ ಕವಿತೆ ಬರೆಯಲು ಪ್ರೇರೇಪಿಸುವುದು ಬೇಂದ್ರೆ ಮಾಸ್ತರರ ವೈಶಿಷ್ಟ್ಯ. ಆಗ ಮೇಲಿಂದ ಮೇಲೆ ವಿದ್ಯುದ್ದೀಪಗಳು ಕೈಕೊಡುತ್ತಿದ್ದುದನ್ನು ವಿಷಯವಾಗಿಟ್ಟುಕೊಂಡು "ಕಣ್ಣಿದ್ದ ಕುರುಡರು ಬೆಳಕಿಗಾಗಿ ಹೇಗೆ ಅಲೆಯುತ್ತಾರೆ?" ಎಂಬುದರ ಕುರಿತು ಕವಿತೆ ಕಟ್ಟಲು ಹೇಳಿದರು. ನಾವೆಲ್ಲ ಬರೆದೆವು. ಆದರೆ ಅದೇ ಹೊತ್ತಿಗೆ ಅವರು ಬರೆದ ಒಂದು ಚರಣ ಮಾತ್ರ ನನಗೆ ಇಂದಿಗೂ ನೆನಪಿದೆ.

ಅಗೋ ಹುಟ್ಟಿತು ಬೆಳಕಿನ ಬಳ್ಳಿ
ಕತ್ತಲು ಹುಳು ನುಂಗಿತು ಹೊಡಮಳ್ಳಿ
ಕಣ್ಣಿದ್ದಂಥಾ ಕುರುಡರು ಒಳ್ಳೆ
ಬೆಳಕಿನ ಭಿಕ್ಷೆಗೆ ತಿರುಗುವರಲ್ಲ!

● "ಅನಿಕೇತ"
ದಾಂಡೇಲಿ

## "ನಂದೂ ಒಂದು ಮಾಲಿ"

**ಬೇ**ಂದ್ರೆಯವರ ಷಷ್ಟ್ಯಬ್ದಿ ನಿಮಿತ್ತ ಧಾರವಾಡದ ವಿಜಯಾ ಚಿತ್ರಮಂದಿರದಲ್ಲಿ ಒಂದು ಸಮಾರಂಭ. ಅಪಾರ ಜನಸಂದಣಿ. ಹೊರಗೂ ನಿಂತು ಜನ ಕಾರ್ಯಕ್ರಮವನ್ನು 'ಕೇಳಲು' ಕಾದಿದ್ದರು. ಹಲವಾರು ಸಂಘ-ಸಂಸ್ಥೆಗಳು, ಗಣ್ಯವ್ಯಕ್ತಿಗಳು, ಬೇಂದ್ರೆಯವರ ಅಸಂಖ್ಯಾತ ಅಭಿಮಾನಿಗಳು ಮಾಲಾರ್ಪಣೆ ಮಾಡಲು ಮೊದಲೇ ಹೆಸರು ನೋಂದಾಯಿಸಿದ್ದರು. ತಮ್ಮ ಹೆಸರು ಕೂಗಲ್ಪಟ್ಟಾಗ ಕವಿವರ್ಯನಿಗೆ ಮಾಲೆ ಹಾಕಿ ನಮಸ್ಕರಿಸಿ ಸ್ವಸ್ಥಾನಕ್ಕೆ ಮರಳುತ್ತಿದ್ದರು. ಸುಮಾರು ಒಂದೂವರೆ ತಾಸಿನವರೆಗೆ ಬರೀ ಮಾಲಾರ್ಪಣೆಯದೇ ಕಾರ್ಯಕ್ರಮ. ಬೇಂದ್ರೆ ತಮ್ಮ ಕೊರಳೇರಿದ ಮಾಲೆಗಳನ್ನು ತೆಗೆತೆಗೆದು ಪಕ್ಕದಲ್ಲಿದ್ದ ಸಂಘಟಕರ ಕೈಯಲ್ಲಿ ಕೊಡುವುದು, ಅವರು ಅವನ್ನು ವೇದಿಕೆಯ ಎದುರು ಗುಡ್ಡೆ ಹಾಕುತ್ತ ಹೋಗುವುದು ಸಾಗಿಯೇ ಇತ್ತು. ಐದಡಿ ಎತ್ತರದ ಇಂಥ ನಾಲ್ಕು ಗುಡ್ಡೆಗಳೇ ಎದ್ದು ನಿಂತವೆಂದರೆ ಮಾಲಾರ್ಪಣೆ ಮಾಡಿದವರೆಷ್ಟು ಎಂಬುದನ್ನು ನೀವೇ ಲೆಕ್ಕ ಹಾಕಿಕೊಳ್ಳಿ. ನಾನಾ ವಿಧ ಪುಷ್ಪ ಸುಗಂಧ ಅಲ್ಲೆಲ್ಲ ಹಬ್ಬಿತ್ತು.

ಆಗ ಬೇಂದ್ರೆಯವರು ಮೈಕನ್ನು ಎದುರಿಗೆ ಸರಿಸಿಕೊಂಡು "ಇನ್ನೂ ಯಾರಾದ್ರೂ ಮಾಲಿ ಹಾಕಪ್ರಿದ್ರ ಬರ್ರೆಪಾ, ನಾ ತಯಾರಾಗೇ ನಿಂತೀನಿ, ಆಮ್ಯಾಲ ಬೇಂದ್ರೆ ಮಾಸ್ತರಿಗೆ ಮಾಲಿ ಹಾಕಲಿಕ್ಕೆ ಆಗ್ಲಿಲ್ಲಾ ಅಂತ ಹಳಹಳಸಬ್ಯಾಡ್ರಿ" ಎಂದಾಗ ಜನಸಾಗರದಲ್ಲಿ ನಗೆ ಅಲೆಗಳೆದ್ದವು.

ಒಂದು ಕ್ಷಣ ಅಲ್ಲೇ ನಿಂತ ಬೇಂದ್ರೆಯವರು ಇನ್ನಾರೂ ಬರಲಿಕ್ಕಿಲ್ಲ ಎಂದುಕೊಂಡು ಮುಂದುವರಿಯಬೇಕೆನ್ನುವಷ್ಟರಲ್ಲಿಯೇ ಓರ್ವ ವೃದ್ಧರು ಕೈಯಲ್ಲಿ ಮಾಲೆಯೊಂದನ್ನು ಹಿಡಿದು ವೇದಿಕೆಯೆಡೆಗೆ ಮೆಲ್ಲನೆ ನಡೆದು ಬರುತ್ತ "ತಡೀರೀ ಮಾಸ್ತರ" ಎಂದು ಕೂಗಿದ್ದು ಕೇಳಿ ಎಲ್ಲರ ದೃಷ್ಟಿಯೂ ಅತ್ತ ಹೊರಳಿತು.

ಬೇಂದ್ರೆಯವರಿಗೆ ವೇದಿಕೆಯ ಮೇಲಿನ ಲೈಟುಗಳಿಂದಾಗಿ ಆ ವ್ಯಕ್ತಿ ಯಾರೆಂದು ಥಟ್ಟನೆ ಗುರುತಿಸಲು ಆಗಲಿಲ್ಲ. ಆದರೆ ಆ ಧ್ವನಿ ತುಂಬ ಪರಿಚಿತ ಅನ್ನಿಸಿದ್ದು ಮಾತ್ರ ಸ್ಪಷ್ಟವಿತ್ತು.

ವೇದಿಕೆಯನ್ನೇರಿ ಎರಡೂ ಕೈಗಳಲ್ಲಿ ಮಾಲೆ ಹಿಡಿದು ಬರುತ್ತಿದ್ದ ಆ ವೃದ್ಧರೆಡೆಗೆ ಬೇಂದ್ರೆ ಧಾವಿಸಿದರು. "ಮಾಸ್ತರ...

ಪ್ಯಾಟ್ಯಾಗ ಮಾಲಿ ಸಿಗಲಿಲ್ಲಾ, ಊರ ಹೊರಗಿನ ತ್ವಾಟಕ್ಕ ಹೋಗಿ ಹೂ ಹರದು ಈ ಮಾಲಿ ಕಟಗೊಂಡ ಬರೂದ್ರಾಗs ವ್ಯಾಳ್ಯಾ ಆತು" ಎಂದು ಆ ವೃದ್ಧರು ಹೇಳುತ್ತಿದ್ದಂತೆ ಬೇಂದ್ರೆ, "ಎಂಥಾ ದೊಡ್ಡ ನಸೀಬ ನಂದು! ಅಗದೀ ತಾಜಾ ಹೂವು, ಅತ್ಯಂತ ಆತ್ಮೀಯ ತಾದ್ಲೇ ಸ್ವಥಾ ಕಟ್ಟಿದ ಮಾಲಿ! ಇಂಥಾ ನಸೀಬ ಯಾರಿಗದ?" ಎಂದಾಗ ಒಂದು ಕ್ಷಣ ಸಭೆಯಲ್ಲಿದ್ದ ಸಾವಿರಾರು ಸಭಿಕರು ಭಾವುಕರಾಗಿಬಿಟ್ಟರು.

ಆ ನಂತರ, "ಹಂಗಾರ ಇನ್ನ ಮಾಲಿ ಹಾಕವರು ಯಾರೂ ಇಲ್ಲ, ಹೌದಲ್ರೆಪಾ?" ಎಂದು ಕೇಳಿ, ಪಕ್ಕದಲ್ಲಿ ನಿಂತಿದ್ದವರಿಗೆ, "ಗಣಪ್ಪಾ, ನಾ ಒಂದು ಸ್ಪೇಶಲ್ ಮಾಲಿ ಹೇಳಿದ್ನೆಲ್ಲಾ ಅದನ್ನ ಇಲ್ಲೆ ಕೊಡು" ಎಂದರು. ಆ ಸ್ಪೆಶಲ್ ಹಾರ ಕೈಗೆ ಬಂದಾಗ ಆ ಮೋಡಿಕಾರ ಏನು ಮಾಡುತ್ತಾರೋ ಎಂಬ ಕುತೂಹಲ ನಮ್ಮದು. ಅದನ್ನು ಅಗಲಿಸಿ ಹಿಡಿದು, "ಇಷ್ಟೋತ್ತನಕಾ ನೀವೆಲ್ಲಾಹಾಕಿದ ಮಾಲಿಗಳು ನನಗ ಹಾಕಿದ ಮಾಲಿ ಅಲ್ಲಾ, ನನ್ನ ಒಳಗಿರೋ ಆ ಕವೀಗೆ ಹಾಕಿದ್ದೂ. ಅಂವಾ ಒಳಗ ಇದ್ದಾನಂಥೇಳೇ ಈ ಮಾಸ್ತರಗ ಈ ಸತ್ಕಾರಾ, ಈ ಗೌರವಾ. ಈ ಕವೀಗೆ ಭಾಳ ಖುಶೀ ಆಗೇದ. ನನಗೂ ಸಂತೋಷಾಗೇದ. ಆದ್ರ ಆ ಕವಿ ನನ್ನ ಪಕ್ಕಡಿ ಚುಚ್ಚಿ ಕೇಳ್ಳಿಕತ್ಯಾನ- 'ಅಲ್ಲಪಾ, ಇಷ್ಟ ಮಂದಿ ನನಗ ಮಾಲೀ ಹಾಕೀದ್ರು, ಮತ್ತ ನೀ ನನಗ ಮಾಲಿ ಹಾಕೂದಿಲ್ಲೇನು?' ಅಂತ. ಅದಕ್ಕs ಆ ನನ್ನೊಳಗಿರೋ ಅಂಬಿಕಾತನಯ ದತ್ತಗ ನಂದೂ ಒಂದು ಮಾಲಿ" ಎಂದು ಕೈಲಿದ್ದ ಮಾಲೆಯನ್ನು ತಾವೇ ಕೊರಳಿಗೇರಿಸಿಕೊಂಡರು.

● **ಕೃಷ್ಣ ಕುರ್ತಕೋಟಿ,**
ನವನಗರ, ಹುಬ್ಬಳ್ಳಿ



## ಕರ್ಕಿಯ ಕುರಿತು

**ಹು**ಬ್ಬಳಿಯ ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯದ ಸಭಾಂಗಣದಲ್ಲಿ (೧೯೬೭ರಲ್ಲಿ) ಬೇಂದ್ರೆ ಅವರ ೭೦ನೇ ಹುಟ್ಟು ಹಬ್ಬದ ಸಂದರ್ಭದ ಕಾರ್ಯಕ್ರಮ. ವರಕವಿ ಪತ್ನಿ ಸಮೇತರಾಗಿ ವೇದಿಕೆಯ ಮೇಲೆ ಆಸೀನರಾಗಿದ್ದನ್ನು ನೋಡುವ ಅಪರೂಪದ ಅವಕಾಶ ಒದಗಿತು. ಅವರು ಸನ್ಮಾನಕ್ಕೆ ಮುಂಚೆ ಮೈಕಿನೆದುರು ಬಂದು,

"ನಾನು ಇಂದು ಈ ನಿಮ್ಮ ಆಸ್ಪತ್ರೆಗೆ ಬಂದಿರುವುದು ಭಾಷಣಕಾರನೆಂದು. ಆದ್ದರಿಂದ ದಯಮಾಡಿ ನನ್ನನ್ನು ರೋಗಿಯೆಂದು ಪರಿಗಣಿಸಿ ಪರೀಕ್ಷಿಸುವ ಸಾಹಸ ಮಾಡಬೇಡಿ," ಎಂದಾಗ ಸಭೆಗೆ ಸಭೆಯೇ ನಗೆಗಡಲಲ್ಲಿ ಮುಳುಗಿತು.

೧೯೭೦ರಲ್ಲೊಮ್ಮೆ ಹುಬ್ಬಳ್ಳಿಯ ರೈಲು ನಿಲ್ದಾಣದ ಬಳಿಯ ಈಶ್ವರ ದೇವಸ್ಥಾನದಲ್ಲಿ ಗಣೇಶೋತ್ಸವದ ಕಾರ್ಯಕ್ರಮ. ಬೇಂದ್ರೆ ಮುಖ್ಯ ಅತಿಥಿ. ಕವಿ ಡಿ.ಎಸ್. ಕರ್ಕಿ ಸಭೆಯ

ಅಧ್ಯಕ್ಷತೆ ವಹಿಸಿದ್ದರು.

ಬೇಂದ್ರೆ ಮಾತಾಡುವ ಸರದಿ ಬಂತು. "ಈಗ ನಾನು ಯಾವ ವಿಷಯವನ್ನು ಕುರಿತು ಮಾತಾಡಲಿ?" ಎಂದು ಪ್ರಶ್ನಿಸಿದ ಬೇಂದ್ರೆ ಅಕ್ಕಪಕ್ಕದಲ್ಲಿ ನೋಡಿ, "ಹಾಂ, ಗಣೇಶನಿಗೆ ಅತ್ಯಂತ ಪ್ರಿಯವಾದ ಕರ್ಕಿಯ ಕುರಿತೇ ಮಾತಾಡುವೆ" ಎಂದು ಅರ್ಥಪೂರ್ಣವಾಗಿ ಹೇಳಿ ಕರಿಕೆಯ ಬಗ್ಗೆ ಸುದೀರ್ಘವಾಗಿ ವಿಚಾರ ವ್ಯಕ್ತಪಡಿಸಿದರು. ಅವರ ಮಾತಿನಲ್ಲಿ ಕರಿಕೆ ಮತ್ತು ಡಾ. ಕರ್ಕಿಯವರ ಮಹತ್ವಗಳೆರಡೂ ನಮಗೆ ಅರಿವಿಗೆ ಬಂದುವು.

● ವಿಮಲ ಆರ್. ಕುಲಕರ್ಣಿ
ಬೆಂಗಳೂರು

## ಏರಿಸಿದ ಛತ್ರಿ

ನಾನು ಸ್ನಾತಕ ಮತ್ತು ಸ್ನಾತಕೋತ್ತರ ಪರೀಕ್ಷೆಗಳಿಗಾಗಿ ಧಾರವಾಡಕ್ಕೆ ಹೋದಾಗ ಉಳಿಯುತ್ತಿದ್ದದ್ದು ನೃತ್ಯ ಗುರು ವೆಂಕಟರಮಣ ಉಪಾಧ್ಯಾಯರಲ್ಲಿ. ಆಗೆಲ್ಲ ಬಿಡುವು ಮಾಡಿಕೊಂಡು ಸಾಧನಕೇರಿಗೆ ಹೋಗಿ ಬರುವುದು ವಾಡಿಕೆ. ಮೊದಲ ಸಲ ಹೋದಾಗಲೇ ಕವಿಯ ಆತ್ಮೀಯತೆಯ ಪರಿಚಯ ನನಗೆ ಆಯಿತು.

"ನೀವು ಪುತ್ತೂರಿನವರು ಎನ್ನುತ್ತೀರಿ. ಕಾರಂತರ ಬಗ್ಗೆ ಹೇಳುವೆ. ಅವರು ನಮ್ಮ ನಿಮ್ಮ ಹಾಗೇ ಇದ್ದವರು. ಬೆಳೀತಾ ಬೆಳೀತಾ...." ಅಂತ ಅಭಿನಯಪೂರ್ವಕವಾಗಿ ಕಾರಂತರ ವಿರಾಟ್‌ರೂಪ ದರ್ಶನ ಮಾಡಿಸಿಬಿಟ್ಟರು ಬೇಂದ್ರೆ.

"ನೀವು ಬಂದ ಹೊತ್ತಿನಲ್ಲಿ ನನ್ನ ಮೊಮ್ಮಗನಿಗೆ ಸಂಖ್ಯಾಶಾಸ್ತ್ರದ ವಿಚಾರ ವಿವರಿಸುತ್ತಿದ್ದೆ. ಈಗ ಅದು ಅವನಿಗೆ ಅರ್ಥವಾಗದಿದ್ದರೂ ಮುಂದೊಮ್ಮೆ ಖಂಡಿತ ಅರ್ಥವಾಗೇ ಆಗುತ್ತದೆ. ಅವನಿಗೆ ಅರ್ಥವಾಗುವುದಿಲ್ಲ ಅಂತ ನಾನು ಈಗ ಕಲಿಸುವ ಪ್ರಯತ್ನ ಮಾಡದಿದ್ದರೆ ಮುಂದೆ ಅರ್ಥವಾಗುವುದಾದರೂ ಹೇಗೆ? ಕಲಿಯುವುದು ಹೇಗೆ?" ಬೇಂದ್ರೆ ಮಾಸ್ತರರು ಮಾಸ್ತರಿಕೆಯ ಮಹತ್ವವನ್ನು ಮಾರ್ಮಿಕವಾಗಿ ಹೇಳಿದರು.

"ನೋಡಿ, ಹಸುರು ಎಲೆ ಹಣ್ಣಾದಾಗ ಹಳದಿಯಾಗಿರುತ್ತದೆ. ಆ ಹಳದಿ ಅಂದರೆ ಭಂಡಾರದ ಬಣ್ಣ. ಭಾಂಡಾರಿ ಎಂದರೆ, ಯಾವುದೇ ವಿಷಯದಲ್ಲಿ ಹಣ್ಣಾದವ, ಪಕ್ವವಾದವ ಅಂತ ಅರ್ಥ" ಬೇಂದ್ರೆ ಮತ್ತೊಂದು ಸಂದರ್ಭದಲ್ಲಿ ಹೇಳಿದರು.

ಧಾರವಾಡದ ಬಯಲು ರಂಗಮಂದಿರದಲ್ಲಿ ಬೆಂಗಳೂರಿನ ಒಂದು ನೃತ್ಯ ತಂಡದವರು ಕಾರ್ಯಕ್ರಮವನ್ನು ಬೇಂದ್ರೆ ಉದ್ಘಾಟಿಸುವವರಿದ್ದರು. ನಾನು ಅವರ ಮಾತು ಕೇಳುವ ಕಾತರದಿಂದಲೇ ಹೋಗಿದ್ದೆ. ರಂಗದ ಮೇಲೇರಿ ನಿಂತ ಬೇಂದ್ರೆಯವರ ಕೈಯಲ್ಲಿ ಒತ್ತು ಗುಂಡಿಯ ಕೊಡೆಯಿತ್ತು. ಅದನ್ನೆತ್ತಿ ಗುಂಡಿಯೊತ್ತಿ, ಕೊಡೆ ಏರಿದಾಗ "ಉದ್ಘಾಟಿಸಿದ್ದೇನೆ" ಎಂದಿಷ್ಟೇ ಅಂದಾಗ ಜನ ಏನೂ ಅರ್ಥವಾಗದೆ ಕುಳಿತು ಬಿಟ್ಟರು. ಬೇಂದ್ರೆ ತಮ್ಮ ಆಸನಕ್ಕೆ ಬಂದಾಗ ನಾನು ಅವರ ಬಳಿ ಹೋಗಿ ನಮಸ್ಕರಿಸಿ, "ಈ ರೀತಿಯ ಉದ್ಘಾಟನೆಯ ಅರ್ಥ ಏನು?" ಎಂದು ಕೇಳಿದೆ.

"ಛತ್ರ ಅಂದರೆ ರಕ್ಷಣೆಯ ಸಂಕೇತ. ಅದರ ಅಡಿಯಲ್ಲಿ ಕಾರ್ಯಕ್ರಮ ಸುರಕ್ಷಿತವಾಗಿ, ಜಯಪ್ರದವಾಗಿ ಜರುಗಲೆಂಬುದೇ ಅದರ ಅರ್ಥ" ಎಂದುಬಿಟ್ಟರು ಬೇಂದ್ರೆ.

ಉಡುಪಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಆದಾಗ ಬೇಂದ್ರೆ ಬಂದಿದ್ದರು. ಅವರು ಉಳಿದುಕೊಂಡಿದ್ದ ಕೋಣೆಯ ಹೊರಗೆ ಬಹಳ ಜನ ಕವಿಯನ್ನು ಕಂಡು ಮಾತಾಡಲು ಕಾದು ನಿಂತಿದ್ದರು. ಒಳಗೆ ಯಾರೋ

ಇದ್ದರು. ಬಹಳ ಹೊತ್ತಾದರೂ ಅವರು ಹೊರಗೆ ಬಾರದ್ದರಿಂದ ನಾನು ಕಿಟಕಿಯಲ್ಲಿ ಇಣುಕಿ ನೋಡಿದೆ. ಅಲ್ಲಿದ್ದವರು ಯಾರು? ನಮ್ಮೂರಿನ ಜನ "ಹುಚ್ಚವಿ ಮಾಸ್ತರು" ಎಂದೇ ಚೇಷ್ಟೆ ಮಾಡುತ್ತಿದ್ದಂಥ ವ್ಯಕ್ತಿ! ಅವರು ಹಾಡುತ್ತಿದ್ದರೆ ಬೇಂದ್ರೆಯವರೂ ದನಿಗೂಡಿಸಿ ಹಾಡಿ ಹೆಜ್ಜೆ ಹಾಕುತ್ತಲಿದ್ದರು! ವರಕವಿಯನ್ನು ಕುಣಿಸಿದ ಆ ವ್ಯಕ್ತಿ ಅಂದಿನಿಂದ ನನ್ನ ದೃಷ್ಟಿಯಲ್ಲಿ ಬೇಂದ್ರೆಯವರಷ್ಟೇ ಗೌರವನೀಯನಾದ.

• ಕುದ್ಕಾಡಿ ವಿಶ್ವನಾಥ ರೈ,
ಪುತ್ತೂರು

## ಬೆಣ್ಣೆ ಅಜ್ಜ

ಆಗಿನ್ನೂ ನನಗೆ ಐದು ವರ್ಷವೂ ತುಂಬಿರಲಿಲ್ಲವೇನೋ. ಸೊಲ್ಲಾಪುರದಲ್ಲಿದ್ದ ಮುತ್ತಜ್ಜಿಯ ಮನೆಗೆ ಮದುವೆಗೆಂದು ಅಪ್ಪ-ಅವ್ವರೊಂದಿಗೆ ಹೋಗಿದ್ದೆ. ನನಗೆ ಊಟಕ್ಕೆ ಯಾವಾಗಲೂ ಬೆಣ್ಣೆ ಇರಲೇಬೇಕಾಗುತ್ತಿತ್ತು. ಆದರೆ ಅಲ್ಲಿ ಆ ಮದುವೆಯ ಗದ್ದಲದ ಮನೆಯಲ್ಲಿ ಬೆಣ್ಣೆ ಎಲ್ಲಿ ಸಿಗಬೇಕು? ಅದು ತಿಳಿಯದೆ ನಾನು ಹಟ ಹಿಡಿದೆ. ಆಗ ಪಕ್ಕದ ಮನೆಯ ಹಿರಿಯರೊಬ್ಬರು, "ನಿನಗ ಬೆಣ್ಣಿ ಬೇಕs? ಬಾ ನಮ್ಮನೀಗೆ," ಎಂದು ಕರೆದುಕೊಂಡು ಹೋಗಿ ಬಟ್ಟಲ ತುಂಬ ಬೆಣ್ಣೆ ಹಾಕಿ ಮೇಲೊಂದು ಚಮ್ಮಚವಿಟ್ಟು "ತಿನ್ನು" ಎಂದು ಕೊಟ್ಟರು. ಆದರೆ ಒಂದೆರಡು ಚಮ್ಮಚದಷ್ಟು ತಿನ್ನುವುದರೊಳಗೇ ಸಾಕಾಯಿತು. "ಯಾಕ?" ಎಂದರು. "ಸಾಕು" ಎಂದೆ. "ಹಂಗಾರ ಸಕ್ರಿ ಹಾಕಿ ಕೊಡತೀನಿ. ತಿನ್ನೀಯಂತಿ," ಎಂದು ಸಕ್ಕರೆ ಬೆರೆಸಿಕೊಟ್ಟರು. ಆದರೆ ಅದಾದರೂ ಎಷ್ಟು ಹೋದೀತು? ಮತ್ತೆ ಬಟ್ಟಲನ್ನು ಸರಿಸಿ ಇಟ್ಟುಬಿಟ್ಟೆ. ಅಲ್ಲಿದ್ದ ನನ್ನ ಸೋದರತ್ತೆ ನನಗೆ

## ನಡುವೆ ಒಂದು ಪೂಜಿ

ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಗೋಕಾಕರೂ ಮುಗಳಿಯವರೂ ಇದ್ದಾಗಿನ ಸಂದರ್ಭ. ಅವರು ನಡೆಸುತ್ತಿದ್ದ ಸಾಹಿತ್ಯ-ವೇದಿಕೆ 'ವರುಣ ಕುಂಜ' ದ ಸದಸ್ಯರಲ್ಲಿ ಜಿ.ಡಿ. ನಾಡಕರ್ಣಿ, ಸು.ರಂ. ಯಕ್ಕುಂಡಿ, ಮುಂತಾದ ವಿದ್ಯಾರ್ಥಿಗಳಿದ್ದರು. ಬೇಂದ್ರೆಯವರು ಒಮ್ಮೆ 'ವರುಣ ಕುಂಜ'ದ ಸಭೆಗೆ ಮುಖ್ಯ ಅತಿಥಿಯಾಗಿ ಬಂದು ಮಾತನಾಡಿದರು. ಮಾತಿನ ನಡುವೆ ಅವರು 'ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯಿತು' ಎಂಬ ನುಡಿಯನ್ನು ಉದಾಹರಿಸಿದರು. ಕೂಡಲೇ ವಿದ್ಯಾರ್ಥಿಯೊಬ್ಬ ಎದ್ದು ನಿಂತು ಹುರುಪಿನಿಂದ "ಸರ್, ಸರಿಯಾದ ಪಾಠ 'ನೀರಿಳಿಯದ ಗಂಟಲೊಳ್ ಕಡುಂಬಂ ತುರುಕಿದಂತಾಯಿತು' ಎಂದಿದೆ" ಎಂದ. ಬೇಂದ್ರೆಯವರು ತುಸು ತಡೆದರು. ಆಮೇಲೆ, "ಅಲ್ಲೊ ತಮ್ಮಾ ಸಾದಾ ಕಡುಬೇ ಗಂಟಲಲ್ಲಿ ಹೋಗಲಾರದು. ಇನ್ನು ನೀನು ನಡುವೆ ಒಂದು ಪೂಜಿ ಸೇರಿಸಿದರೆ ಹ್ಯಾಗೆ ಗಂಟಲೊಳಗೆ ಇಳಿದೀತಪ್ಪಾ?"

ಆ ವಿದ್ಯಾರ್ಥಿಯೂ ಇತರರ ನಗೆಯಲ್ಲಿ ಪಾಲ್ಗೊಂಡು ಸುಮ್ಮನೆ ಕುಳಿತ.

ಈ ಪ್ರಸಂಗವನ್ನು ನನಗೆ ಹೇಳಿದವರು ಕವಿ ದಿ. ಸುಬ್ಬಣ್ಣ ರಂ. ಯಕ್ಕುಂಡಿಯವರು.

• ರಾಮಚಂದ್ರ ಕಿತ್ತೂರ
ವಿಜಾಪುರ

ಬೈಯತೊಡಗಿದರು. "ಊಹುಂ. ಬೈಬ್ಯಾಡ್ರಿ. ಬಾಳಾ, ನಿನಗೆಷ್ಟು ಬೇಕೋ ಅಷ್ಟs.. ತಿನ್ನು. ಬ್ಯಾಡಾಗಿದ್ರ ಇಟ್ಟು ಬಿಡು" ಎಂದು ಪ್ರೀತಿಯಿಂದ ಮೈದಡವಿದರು.

ನಾನು ಬೆಳೆದು ದೊಡ್ಡವಳಾಗಿ ಧಾರವಾಡದಲ್ಲಿ ಬಂದು ನೆಲೆಸಿದಾಗ ಸೊಲ್ಲಾಪುರದಲ್ಲಿ ಬೆಣ್ಣೆ ತಿನ್ನಲು ಕೊಟ್ಟವರು ಬೇಂದ್ರೆ ಅಜ್ಜ ಎಂದು ಗೊತ್ತಾಗಿ ನಾನೆಷ್ಟು ಧನ್ಯಳು ಎಂದೆನಿಸಿದ್ದು ಒಂದಲ್ಲ, ಹಲವು ಬಾರಿ.

ಆ ಅಜ್ಜನಿತ್ತ ಬೆಣ್ಣೆ ನನ್ನ ಭಾಗ್ಯವನ್ನು ತೆರೆದಿದೆ.

● ಶೈಲಾ ಛಬ್ಬಿ
ಧಾರವಾಡ

## "ನೀವs ಮಾತಾಡ್ರಿ"

ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಎಂ.ಬಿ.ಬಿ.ಎಸ್. ವಿದ್ಯಾರ್ಥಿಯಾಗಿದ್ದಾಗಲೇ ಅಲ್ಲಿಯ ಕರ್ನಾಟಕ ಸಂಘದ ಚಟುವಟಿಕೆಗಳಲ್ಲಿ ನನಗೆ ಹೆಚ್ಚೆಚ್ಚು ಆಸಕ್ತಿ ಮೂಡಿತು. ನಾನು ಅದರ ಸಹಕಾರ್ಯದರ್ಶಿಯಾಗಿದ್ದ ಸಮಯದಲ್ಲೇ ಬೇಂದ್ರೆಯವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ 'ಫೆಲೋಶಿಪ್' ಪ್ರಕಟಿಸಲ್ಪಟ್ಟಿತು. ವರಕವಿಗಳನ್ನು ನಮ್ಮ ಸಂಘದ ಪರವಾಗಿ ಸತ್ಕರಿಸಬೇಕೆಂದು ಯೋಚಿಸಿ ಅವರನ್ನು ಆಮಂತ್ರಿಸಲು ಸಾಧನಕೇರಿಯ 'ಶ್ರೀಮಾತಾ'ಕ್ಕೆ ಹೋದೆವು.

"ಫೆಲೋಶಿಪ್? ಯಾವ ಫೆಲೋಶಿಪ್? ಬಫೆಲೋಶಿಪ್ಪೋ ಅಥವಾ ಫೂಲಿಶ್‌ಫೆಲೋಶಿಪ್ಪೋ? ನನಗಿನ್ನೂ ಅಂಥಾ ಯಾವ ಸುದ್ದೀನೂ ಬಂದಿಲ್ಲ" ಎಂದು ನಕ್ಕರಾದರೂ ನಮ್ಮ ಸಂಘಕ್ಕೆ ಬರಲು ಒಪ್ಪಿಕೊಂಡರು.

"ಅಂಥಂಗ, 'ಸತ್ಕಾರ' ಅಲ್ದ ಮತ್ತ ಏನೇನ್ಮಾಡ್ತೀರಿ?" ಎಂದೂ ಕೇಳಿದರು.

"ನಿಮ್ಮ ಸಾಹಿತ್ಯದ ಬಗ್ಗೆ ಒಂದು ನಾಲ್ಕು ಜನ ಗಣ್ಯರನ ಮಾತಾಡ್ಲಿಕ್ಕೆ ಕೇಳಿಕೊಂಡೀವಿ," ಅಂದೆ.

"ಬೇಂದ್ರೇನ ಸಾಹಿತ್ಯದ ಬಗ್ಗೆ ಮಾತಾಡ್ಲಿಕ್ಕೆ 'ಬಾಡಿಗಿ' ಮಂದಿ ಬರತಾರಂದ್ರ ನಾ ಅಲ್ಲೆ ಬರೂದs ಇಲ್ಲಾ. ನಿಮ್ಮ ಪೈಕಿ ಬೇಂದ್ರೇನ್ನ ಎಷ್ಟು ಮಂದಿ ತಿಳಕೊಂಡಾರ ಅದು ಮುಖ್ಯ. ನೀವು ವೈದ್ಯಕೀಯ ವಿದ್ಯಾರ್ಥಿಗಳs ಮಾತಾಡೋದಾದ್ರ ಬರತೇನಿ," ಎಂದು ಹೇಳಿ, "ಕುಲಕರ್ಣಿ, ನೀನು 'ಬೇಂದ್ರೆ ನಾಟಕಗಳು' ಬಗ್ಗೆ ಮಾತಾಡು. ಹಾಂ, ನೀವಿಬ್ರೂ 'ಬೇಂದ್ರೆ ಕಾವ್ಯ' 'ಬೇಂದ್ರೆ ಕತೆ'ಗಳ ಬಗ್ಗೆ ಮಾತಾಡ್ರಿ. ತಿಳಿತs" ಎಂದು ಕಟ್ಟುನಿಟ್ಟಾಗಿ ಹೇಳಿ ಬೆನ್ನು ತಟ್ಟಿ ಬೀಳ್ಕೊಟ್ಟರು.

ಅಂತೂ ಇಂತೂ ನಾವು ವಿಷಯ ಸಿದ್ಧಪಡಿಸಿಕೊಂಡು ತಯಾರಾದೆವು.

ಸಮಾರಂಭದ ದಿನ ಬೇಂದ್ರೆಯವರೇ ಸಾರಿಬಿಟ್ಟರು- "ಇವತ್ತ ಮಾತಾಡುವವರು ನಿಮ್ಮ ಹುಡುಗರೇ ಬೇಂದ್ರೇನ ಬಗ್ಗೆ ಅವರೇನು ಹೇಳತಾರ ಅನ್ನೂದನ್ನ ನಿಮ್ಮ ಜತಿ ನಾನೂ ಕೇಳಬೇಕಂತs ಇಲ್ಲಿಗೆ ಬಂದೀನಿ."

ಕಾರ್ಯಕ್ರಮ ಮುಗಿದ ಮೇಲೆ ಅವರು ನನ್ನ ಬೆನ್ನು ತಟ್ಟಿ ಆಶೀರ್ವದಿಸಿದ್ದು ನನ್ನ ಪಾಲಿನ ಬಾಳಿನ ಬುತ್ತಿಯಾಯಿತು.

● ಡಾ. ವಸಂತ ಕುಲಕರ್ಣಿ,
ವಿಜಾಪುರ.

## "ಹೀಂಗ ಕುಣದರ ಚೆಂದಿರತsದ"

"೧೯೩೪ರ ಇರಬೇಕು. ನಾನು ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಓದುತ್ತಿದ್ದೆ. ಆಗ ಅಲ್ಲಿ ನಾಡ ಹಬ್ಬದ ಕಾರ್ಯಕ್ರಮ ಹಮ್ಮಿಕೊಂಡಿದ್ದೆವು. ಕವಿ ಬೇಂದ್ರೆಯವರು

ಮುಖ್ಯ ಅತಿಥಿಯಾಗಿ ಬಂದಿದ್ದರು. ಅವರೆದುರು 'ಕುಣಿಯೋಣು ಬಾರಾ ಕುಣಿಯೋಣು ಬಾ' ಕವಿತೆಯನ್ನು ಕುಣಿಯುತ್ತಲೇ ಹಾಡಿ ತೋರಿಸುವ ಸದವಕಾಶವು ನನಗೆ ಪ್ರಾಪ್ತವಾಗಿತ್ತು.

"ನನ್ನ ಹಾಡ್ಗುಣಿತ ಮುಗಿದ ಮೇಲೆ ಸ್ವತಃ ಬೇಂದ್ರೆಯವರು ವಿಂಗಿನೊಳಗಿದ್ದ ನನ್ನ ಹತ್ತಿರ ಬಂದರು. ಬಂದರಷ್ಟೇ ಅಲ್ಲ, 'ತಮ್ಮಾ ಬಾ ಇಲ್ಲೆ, ಇದನ್ನ ನೀ ಹೀಂಗ ಹಾಡಿ ಕುಣದರ ಇನ್ನೂ ಚೆಂದಿರತsದ' ಎಂದು ಸ್ವತಃ ಹಾಡುತ್ತ ಕುಣಿದೇ ಬಿಟ್ಟರು. ಆ ಕ್ಷಣವನ್ನು ನಾನೆಂದಿಗೂ ಮರೆಯುವ ಹಾಗಿಲ್ಲ."

-ಇದು ವೃದ್ಧ ಶಿಕ್ಷಕ ದಿವಂಗತ ಪಿ.ಪಿ.ಜೋಶಿ ಎಂಬವರು ಇಂಗ್ಲೀಷಿನಲ್ಲಿ ಬರೆದ ಪತ್ರದಲ್ಲಿನ ಬೇಂದ್ರೆ ನೆನಪು. ೧೩-೬-೧೯೮೦ ರಂದು ಅವರೊಂದು ಪತ್ರ ಬರೆದು ತಮಗೆ ಓಡಾಡುವುದು ಅಸಾಧ್ಯವಾದುದರಿಂದ ಬೇಂದ್ರೆಯವರ 'ಕುಣಿಯೋಣು ಬಾರಾ' ಕವಿತೆಯ ಒಂದು ಪ್ರತಿಯನ್ನು ಕಳಿಸಿಕೊಡಬೇಕೆಂದು ನಮ್ಮ ಕಾಲೇಜು ವಾಚನಾಲಯಕ್ಕೆ ವಿನಂತಿಸಿಕೊಂಡಿದ್ದರು. ಅವರ ಇಚ್ಛೆಯನ್ನು ಕೂಡಲೇ ಪೂರೈಸಿದೆವು. ಮರುದಿನವೇ ಮೇಲಿನ ನೆನಪಿನೊಂದಿಗಿನ ಕೃತಜ್ಞತಾಪೂರ್ವಕ ಪತ್ರ ಜೋಶಿಯವರಿಂದ ನನಗೆ ಬಂದಿತ್ತು. ಅದನ್ನೇ ಇಲ್ಲಿ 'ಕಸ್ತೂರಿ'ಯ ಓದುಗರೊಂದಿಗೆ ಹಂಚಿಕೊಂಡಿರುವೆ.

● **ಪಿ.ಎಸ್.ಕನಮಡಿ,**
ಮುದ್ದೇಬಿಹಾಳ



# "ಎಂಥಾ ಮಾತು!"

**ಮ**ಳೆ ಸುರಿಯುತ್ತಿದ್ದ ಆ ರಾತ್ರಿ (೧೯೬೭ರ ಜೂನ್ ತಿಂಗಳು) ಘಟಪ್ರಭಾ ಸ್ಟೇಶನ್ನಿನಿಂದ ಪುಣೆಯ ರೈಲು ಹತ್ತಿದೆವು. ಮಗಳು ಕುಂಜು ನಿದ್ರಿಸುತ್ತಿದ್ದುದರಿಂದ ನನಗೆ ಯಜಮಾನರೆದುರು ಕೆಲವು ಭಾವನೆಗಳನ್ನು ನಿರಾತಂಕವಾಗಿ ವ್ಯಕ್ತ ಪಡಿಸಲು ಸಾಧ್ಯವಾಯಿತು. ದುಸುಮುಸು, ಕಣ್ಣೀರುಗಳು ಜತೆಗೂಡಿದ್ದ ಮಾತುಗಳವು. ಎಷ್ಟಂತ ಮಾತಾಡಲಿಕ್ಕೆ ಸಾಧ್ಯ? ನಿದ್ರೆ ಅದಕ್ಕೆ ಪೂರ್ಣ ವಿರಾಮವಿಕ್ಕಿದ್ದು ಯಾವಾಗ ಎಂಬುದೇ ಗೊತ್ತಾಗಲಿಲ್ಲ.

ಚುಮುಚುಮು ನಸುಕಿನಲ್ಲಿ ಎಚ್ಚರವಾಯಿತು. ಪುಣೆ ಸಮೀಪಿಸುತ್ತಿತ್ತು. ಆಚೀಚೆ ಕಿಟಕಿಗಳಿಂದ ಹೊರಗೆ ದೃಷ್ಟಿ ಹರಿಸಿದೆ. ಯಜಮಾನರು ನನ್ನ ತೊಡೆ ತಟ್ಟಿ ಪಿಸುಗುಟ್ಟಿದರು- "ಏ, ನೋಡsು ಅಲ್ಲೆ..."

ನೋಡಿದೆ. ನಮ್ಮೆದುರಿನ ಸೀಟಿನಲ್ಲಿಯೇ ಬೇಂದ್ರೆಯವರು! ಮಂಕಿಕ್ಯಾಪ್ ಹಾಕಿಕೊಂಡು ಕುಳಿತಿದ್ದರು, ಕಿಟಕಿಯಿಂದಾಚೆ ಹಿಂದೆ ಓಡುವ ಹೊಲ-ಗದ್ದೆ-ಬೆಟ್ಟ-ಝರಿಗಳನ್ನು ನೋಡುತ್ತ.

ನಾವಿಬ್ಬರೂ ನಮಸ್ಕರಿಸಿದೆವು.

"ನಾನು ಡಾ. ಎಸ್.ಆರ್.ಜೋಶಿ ಅಂತ. ಮುನವಳ್ಳಿಯಂವಾ. ಸಧ್ಯ ಮುಂಬಯಿದಾಗ ಇದ್ದೀನಿ. ಈಕಿ ನನ್ನ ಹೇಣ್ತಿ, ಭಾರತಿ. ಈ ಕೂಸು ನಮ್ಮ ಮಗಳು ಕುಂಜು," ನಮ್ಮ ಯಜಮಾನರು ಪರಿಚಯ ಹೇಳಿದರು.

"ಒಳ್ಳೇದು. ನನಗೂ ಪ್ರವಾಸದಾಗ ಯಾರರೇ ಮಾತಾಡ್ಲಿಕ್ಕೆ ಸಿಕ್ರ ಖುಶಿ. ಪುಣೆ ಬರಲಿಕ್ಕಿನ್ನೂ ಸಾಕಷ್ಟು ವ್ಯಾಳ್ಯಾ ಅದ," ಎಂದ ಬೇಂದ್ರೆಯವರು, "ಮುನವಳ್ಳಿಯವರು ಅಂದ್ರೆಲ್ಲs? ಹಂಗಾರ ನಿಮಗ ನಮ್ಮ



ಜೋಶಿ ರಾಮಣ್ಣಂದೇನರೆ ಗುರತು ಅದs ಏನು?" ಎಂದು ವಿಚಾರಿಸಿಯೇಬಿಟ್ಟರು.

"ನಾನು ಅವರ ಮಗನsರೀ..." ಎಂದು ನಮ್ಮ ಯಜಮಾನರು.

"ಅಲೆಲೆ! ಹೀಂಗs... ನಿಮ್ಮ ತಂದಿ ನಮ್ಮ ಶಿಷ್ಯಾರೆಪಾ..... ಅಂಥಂಗ, ಏನವಾ ಭಾರತಿ, ನೀ ಯಾರ ಮಗಳು?" ಎಂದರು ಬೇಂದ್ರೆ. ನಾನು ತಂದೆಯವರ ಹೆಸರು ಹೇಳಿದೆ.

"ಭಾಳ ಛೋಲೋ ಆತು, ನೀ ನಮ್ಮ ನರಸಿಂಹ ದಾಬಡೆಯವರ ಮಗಳು ಅಂತ ತಿಳದು. ಅವರೂ ನನಗ ಆಪ್ತ ಮಿತ್ರರs..." ಎಂದು ನಗೆ ಅರಳಿಸಿ, "ಮುಂಬಯಿದಾಗಿ ರ್‍ರೀರಿ. ಆದ್ರ ಕನ್ನಡ ಮಾತ್ರ ಕಡಗಣಸಬ್ಯಾಡ್ರಿ. ಈ ಕುಂಜುಽಗ ಕನ್ನಡ ಕಲಸ್ರಿ" ಎನ್ನುತ್ತ ಕೂಸಿನ ಮೈದಡವಿದರು. ಆಮೇಲೆ "ನಿನ್ನೆ ರಾತ್ರಿ ನೀವಿಬ್ರೂ ಭಾಳೊತ್ತು ಮಾತಾಡಿ ಕೋತ ಕೂತಿದ್ರೆಲ್ಲs?" ಎಂದು ಕೇಳಿಯೇ ಬಿಟ್ಟರು.

"ನಮ್ಮ ಮಾತಿನಿಂದ ನಿಮ್ಮ ನಿದ್ದಿಗೆ ತೊಂದ್ರಿ ಆಗಿದ್ರ ಕ್ಷಮಾಮಾಡ್ರಿ," ಎಂದೆ.

"ಊಹುಂ. ತೊಂದ್ರೆಲ್ಲೀದು? ಹಾಂಗ ಕೇಳಿದರ ಪ್ರವಾಸದಾಗ ನನಗ ನಿದ್ದೀನ ಬರೂದುಲ್ಲಾ. ಭಾರತಿ, ನೀ ಹೇಳಿದ ಒಂದು ಮಾತು ನನಗ ಭಾಳ ಸೇರಿತು? 'ಜೀವನ ದಾಗ ಬರೇ "ಇಲ್ಲ" ಅನ್ನೂದs ಲೆಕ್ಕಾ ಹಾಕದ ಇದ್ದದ್ದನ್ನೂ ಲೆಕ್ಕಾ ಹಾಕಬೇಕು,' ಅಂದೆಲ್ಲs ನೀ... ವಾಹವ್ವಾ, ಎಂಥಾ ಮಾತವಾ ಅದು!" ಬೇಂದ್ರೆ ಮೆಚ್ಚುಗೆ ಸೂಚಿಸುವ ಹೊತ್ತಿಗೆ ಪುಣೆ ಸಮೀಪಿಸಿತು.

ನಾವು ನಮ್ಮೆಲ್ಲ ಸಾಮಾನು ಕೆಳಗಿರಿಸಿ ಕೊಂಡು ಬೇಂದ್ರೆಯವರಿಗೆ ನಮಸ್ಕರಿಸಿ, ಸ್ಟೇಶನ್ ಬಂದ ಕೂಡಲೇ ಇಳಿದು ಮುಂಬಯಿ ರೈಲು ಹಿಡಿಯಲು ಧಾವಿಸಿ ದೆವು.

● **ಭಾರತಿ ಜೋಶಿ,**
ಧಾರವಾಡ

## ಎಂಥ ಚೇತನ!

ಮೈಸೂರಿನ ಶ್ರೀರಾಮಕೃಷ್ಣ ವಿದ್ಯಾರ್ಥಿ ನಿಲಯಕ್ಕೆ ನಮ್ಮ ಊರಿನ ಬಂಧುಗಳೊಂದಿಗೆ ಸೇರಿಕೊಂಡಿದ್ದೆ. ಆಗ ಶ್ರೀ ಸ್ವಾಮಿ ಸಿದ್ಧೇಶ್ವರಾನಂದರು ಆಶ್ರಮದ ಅಧ್ಯಕ್ಷರು. ಕುವೆಂಪು ಅವರು ಈ ಸ್ವಾಮೀಜಿಯ ಕೃಪೆಯಿಂದ ಶ್ರೀ ರಾಮಕೃಷ್ಣಾಶ್ರಮದ ಕೊಠಡಿಯೊಂದರಲ್ಲಿ ವಾಸಿಸುತ್ತಿದ್ದರು.

ಒಂದೊಮ್ಮೆ ಬೇಂದ್ರೆಯವರು ಪುಟ್ಟಪ್ಪನವರನ್ನು ಕಾಣಲೆಂದು ಆಶ್ರಮಕ್ಕೆ ಬಂದರು. ಆಶ್ರಮದೆದುರಿನ ಹುಲ್ಲು ಬಯಲಿನ ಮೇಲೆ ಸಂಜೆಯ ತಂಗಾಳಿಗೆ ಮೈಯೊಡ್ಡಿ ಕೂತಿದ್ದ ಆ ಇಬ್ಬರೂ ತೇಜಸ್ವಿಗಳನ್ನು ಸಮೀಪದಿಂದ ನೋಡಲು ನಾವು ಬಾಲಕರು ಅಲ್ಲಿಯೇ ಸುತ್ತತೊಡಗಿದೆವು. ಪುಟ್ಟಪ್ಪನವರ ಬಿನ್ನಹದ ಮೇರೆಗೆ ಬೇಂದ್ರೆಯವರು, 'ಹಕ್ಕಿ ಹಾರುತಿದೆ ನೋಡಿದಿರಾ?' ಎಂಬ ಕವಿತೆಯನ್ನು ಸುಶ್ರಾವ್ಯವಾಗಿ ಹಾಡಿದರು. ಕಾಲವೆಂಬ ಪಕ್ಷಿಯನ್ನು

ಕುರಿತ ಆ ಕವಿತೆಯನ್ನು ಹಾಡಿ ಮುಗಿಸುವ ಹೊತ್ತಿಗೆ ಸರಿಯಾಗಿ ಸೂರ್ಯಾಸ್ತವಾಗಿತ್ತು!

ಇನ್ನೊಂದು ಸಂದರ್ಭ. ಕಾದಂಬರಿ ಸಮ್ರಾಟ ಅ.ನ.ಕೃ. ಅವರು ಅಧ್ಯಕ್ಷತೆ ವಹಿಸಿದ್ದ ಕನ್ನಡ ಸಾಹಿತ್ಯ ಸಮ್ಮೇಳನದ್ದು. ಅ.ನ.ಕೃ. ಅವರನ್ನು ಕುರಿತಂತೆ ನಾಲ್ಕಾರು ಜನ ಸಾಹಿತಿಗಳು ಮಾತನಾಡಬೇಕಿತ್ತು. ಬೇಂದ್ರೆಯವರ ಸರದಿ ಬಂದಾಗಲಂತೂ ನಾನು ಮೈಯೆಲ್ಲ ಕಿವಿಯಾಗಿ, ಕಣ್ಣಾಗಿ ಕೂತೆ. ಅವರು ಅ.ನ.ಕೃ. ಬಗ್ಗೆ ಹೇಳುತ್ತ "ಸಾಮಾನ್ಯವಾಗಿ, ಸಂಗ್ರಾಮದ ಕಣಕ್ಕಿಳಿದ ಯೋಧರಿಗೆ, ಕೆಲವರಿಗೆ ಎಧೆಯ ಮೇಲೆ ಗಾಯಗಳಾಗುತ್ತವೆ; ಇನ್ನು ಕೆಲವರಿಗೆ ಬೆನ್ನ ಮೇಲೆ ಗಾಯಗಳಾಗುತ್ತವೆ. ಆದರೆ ಕನ್ನಡ ಸಂಗ್ರಾಮದ ಮುಂಚೂಣಿಯ ಈ ಯೋಧ ಅ.ನ.ಕೃ.ಗೆ ಎದೆಯ ಮೇಲಿನ ಗಾಯಗಳೇ ಜಾಸ್ತಿ" ಎಂದು ಅರ್ಥಪೂರ್ಣವಾಗಿ ನುಡಿದಾಗ ಸಭೆ ಎಷ್ಟೋ ಹೊತ್ತಿನವರೆಗೆ ಚಪ್ಪಾಳೆಯಿಂದ ಪ್ರತಿಧ್ವನಿಸುತ್ತಿತ್ತು.

● ದೇವಂಗಿ ಚಂದ್ರಶೇಖರ,
ದೇವಂಗಿ

## "ನನಗ ಇಷ್ಟೊ ಹೊಳೀಲಿಲ್ಲ"

ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಸಮ್ಮೇಳನ ಹೈದರಾಬಾದಿನಲ್ಲಿ ಎ.ಆರ್.ಕೃಷ್ಣ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆದಾಗ (೧೯೪೧) ಅಲ್ಲಿ ಬೇಂದ್ರೆಯವರು

## ಧ್ರುವತಾರೆ

ಮುಂಬಯಿಯ ಸೆರಗಿನಲ್ಲಿರುವ ನನಗೆ ಧಾರವಾಡಕ್ಕೆ ಹೋದಾಗಲೆಲ್ಲ ಕವಿವರ್ಯರನ್ನು ಕಾಣುವುದು, ಅವರೊಡನೆ ಮಾತನಾಡುವುದು ಒಂದು ಹವ್ಯಾಸ. ಹೀಗೊಮ್ಮೆ ಅವರ ಮನೆ 'ಶ್ರೀಮಾತಾ'ಕ್ಕೆ ಹೋದಾಗ ಬೇಂದ್ರೆಯವರು ಖಗೋಲ ಶಾಸ್ತ್ರದ ಅಭ್ಯಾಸದಲ್ಲಿ ನಿರತರಾಗಿದ್ದರು. ನಾನು ನರೇಗಲ್ ಪ್ರಹ್ಲಾದರಾಯರ ಶಿಷ್ಯನಾದ್ದರಿಂದ ನನ್ನನ್ನು ತಮ್ಮ ಶಿಷ್ಯನ ಶಿಷ್ಯ ಎಂದು ಬೇಂದ್ರೆಯವರು ವಿಶೇಷ ಅಭಿಮಾನದಿಂದ ಕಾಣುತ್ತಿದ್ದರು.

ಆ ದಿನ ನಾನು, "ನಿಮ್ಮ 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ' ನಾನಂತೂ ಬಹಳ ಮೆಚ್ಚಿಕೊಂಡಿದ್ದೇನೆ. ಪಂ. ಭೀಮಸೇನ ಜೋಶಿಯವರಂತೂ ಬಹಳೇ ಪರಿಣಾಮಕಾರಿಯಾಗಿ ಹಾಡಿದ್ದಾರೆ," ಎಂದೆ.

ಬೇಂದ್ರೆಯವರು ನಗೆ ಮುಖದಿಂದ ಹೇಳತೊಡಗಿದರು. "ಹೌದು, ಅದು ನನ್ನ ಕಲ್ಪನಾ ವಿಲಾಸ. ಆದರ ಈಗ ನಾನು ಖಗೋಲಶಾಸ್ತ್ರದ ಅಭ್ಯಾಸ ಮಾಡಲಿಕ್ಕೆ ಹತ್ತೀನಿ ನೋಡ್ರಿ. ಯಾವ ನಕ್ಷತ್ರ ಎಲ್ಲೆದ, ಧ್ರುವ ನಕ್ಷತ್ರಕ್ಕ ಎಷ್ಟು ಸಮೀಪ ಅದ, ಇನ್ನೊಂದು ನಕ್ಷತ್ರ ಯಾಕ ದೂರ ಹೋಗಲಿಕ್ಕೆ ಹತ್ಯೇದ, ಚಂದ್ರಲೋಕಕ್ಕ ಎಷ್ಟು ಸಮೀಪ ಅದ, ಮತ್ತ ಉತ್ತರ ಧ್ರುವದಿಂದ ದಕ್ಷಿಣ ಧ್ರುವಕ್ಕ...." ಅಂತೆಲ್ಲ ವಿವರಿಸುತ್ತಿದ್ದಾಗ ನಾನು ಅವಾಕ್ಕಾಗಿ ಕೂತಿದ್ದೆ. ಅವರೇ ಮುಂದುವರಿಸಿ, "ಒಂದಿಲ್ಲೊಂದಿನ ನಾವು ಆ ಧ್ರುವನಕ್ಷತ್ರದ ಹತ್ರ ಹೋಗವ್ರು ಅಲ್ಲs!" ಎಂದಾಗಲಂತೂ ಈ ಚೇತನ ಎಲ್ಲಿಂದೆಲ್ಲಿಗೆ ಜಿಗಿತ ನೆಗೆತ ಮಾಡುವುದೋ ತಿಳಿಯುವಂತಿಲ್ಲ ಎನ್ನಿಸಿತು.

● ಜಿ.ಜಿ. ಜೋಶಿ
ಕಳವಾ-ಠಾಣೆ

ಮೂರ್ನಾಲ್ಕು ಭಾವಗೀತೆಗಳನ್ನು ಹಾಡಿತೋರಿಸಿದ್ದನ್ನು ಕೇಳಿದ್ದು ನನ್ನ ಮೊದಲ ಬೇಂದ್ರೆ ನೆನಪು.

೧೯೫೭ ಜನವರಿ ೪ ರಂದು ನಮ್ಮ ತಂದೆಯವರಾದ 'ಮಿರಿಯಾಲ ರಂಗಯ್ಯಾ ಸ್ಮಾರಕ ಉಪನ್ಯಾಸ ಮಾಲೆ'ಯ ಉದ್ಘಾಟನೆ ಬೇಂದ್ರೆಯವರಿಂದಲೇ ನೆರವೇರಿತು. ಅಂದು ಅವರು ತಮ್ಮ ಉಪನ್ಯಾಸದಲ್ಲಿ ಕಲೆ, ಸಾಹಿತ್ಯ ಜ್ಯೋತಿಷ, ಖಗೋಲ ಎಲ್ಲವನ್ನೂ ಒಳಗೊಂಡಂತೆ ಮಾತನಾಡಿದರು.

ಅಂದೇ ರಾತ್ರಿ ನಮ್ಮ ಮನೆಯಲ್ಲಿ ಅವರೊಂದಿಗೆಸಹಭೋಜನದ ಸದವಕಾಶ ಪ್ರಾಪ್ತವಾಯಿತು. ಮಾತಾಡುತ್ತ ಊಟಮಾಡುತ್ತಿದ್ದಾಗ ಇದ್ದಕ್ಕಿದ್ದ ಹಾಗೆಯೇ ಗಂಟಲಲ್ಲಿ ತುತ್ತು ಸಿಕ್ಕು ಹಾಕಿಕೊಂಡಿದ್ದರಿಂದ ಅವರು ತಲೆತಲೆಜಜ್ಜಿಕೊಳ್ಳತೊಡಗಿದರು. ನನ್ನ ಶ್ರೀಮತಿ, "ಸ್ವಲ್ಪ ನೀರು ಕುಡೀರಿ, ಸರಿಯಾಗ್ತದ," ಎಂದಾಗ ಹಾಗೇ ಮಾಡಿದ ಬೇಂದ್ರೆಯವರು "ನನಗ ಇಷ್ಟು ಹೊಳೀಲಿಲ್ಲ ನೋಡು," ಎಂದು ನಗೆ ಚಿಮ್ಮಿಸಿದರು.

ಬೇಂದ್ರೆಯವರಿಗೆ ಪಕ್ಕದ ಮನೆಯಲ್ಲಿ ಮಲಗುವ ವ್ಯವಸ್ಥೆಯಾಗಿತ್ತು. ನಾನೂ ನನ್ನ ಕೆಲ ಸ್ನೇಹಿತರೂ ಅವರೊಟ್ಟಿಗೆ ಆ ಈ ಮಾತಾಡುತ್ತ ಒಂದರ್ಧ ಗಂಟೆ ಕುಳಿತಿದ್ದೆವು. ಆಗ ಬೇಂದ್ರೆಯವರು ಸಟಕ್ಕನೆ ಎದ್ದು "ಹೂಂ, ಇನ್ನು ನಡೆಯಿರಿ, ನನಗೆ ನಿದ್ದೆ ಬಂತು" ಎಂದವರೇ ಸೊಳ್ಳೆಯ ಪರದೆಯ ಒಳ ಸೇರಿ ಮೈ ತುಂಬ ಹೊದ್ದುಕೊಂಡು ಮಲಗಿಬಿಟ್ಟಾಗ ಅವರ ಕಟ್ಟುನಿಟ್ಟಿನ ಅನುಶಾಸಿತ ಜೀವನದ ಇನ್ನೊಂದು ಮುಖದ ಪರಿಚಯ ನನಗಾಯಿತು.

• ಎಂ.ಆರ್. ಬುದ್ಧಿವಂತ ಶೆಟ್ಟಿ
ರಂಗಂಪೇಟೆ

## ಹೀಂಗಿದ್ದ ಇಂವ ನಮ್ಮ ಅಜ್ಜ

ಸಾವಿರದೊಂಬೈನೂರಾ ಎಂಬತ್ತರಲ್ಲಿ ಎಂ.ಎ. ವಿದ್ಯಾರ್ಥಿಯಾಗಿ ಕ.ವಿ.ವಿಯ ಕನ್ನಡ ಅಧ್ಯಯನ ಪೀಠದಲ್ಲಿ ಕಲಿಯುತ್ತಿದ್ದಾಗ ಹೊಟ್ಟೆ ಪಾಡಿಗಾಗಿ ನಾನು ದಿನವೂ ಬೆಳಗಿನಲ್ಲಿ 'ಸಂಯುಕ್ತ ಕರ್ನಾಟಕ' ಪತ್ರಿಕೆ ಹಂಚುವ ಕೆಲಸ ಮಾಡುತ್ತಿದ್ದೆ. ವಿದ್ಯಾಗಿರಿಯಿಂದ ಶುರುವಾಗಿ ಸಾರಸ್ವತಪುರ ಕಲ್ಯಾಣನಗರ, ವಿಶ್ವವಿದ್ಯಾಲಯ, ಸಪ್ತಾಪುರಗಳ ಮೂಲಕ ಸಾಧನಕೇರಿಯವರೆಗೂ ನಾನು ಸೈಕಲ್ಲು ತುಳಿಯಬೇಕಾಗುತ್ತಿತ್ತು. ಶಾಲಾ ದಿನಗಳಿಂದಲೇ ಬೇಂದ್ರೆ ಕವಿತೆಗಳ ಮೋಡಿಗೆ ಒಳಗಾಗಿ ಏಕಾಂತದಲ್ಲಿ ಹಾಡಿ ಕುಣಿಯುತ್ತಿದ್ದ ನನಗೆ ಅಂಥ ನಸುಕಿನಲ್ಲಿ ಎಂದಾದರೊಂದು ದಿನ ಮಹಾಕವಿಯ ದರ್ಶನವಾದೀತು ಎಂಬ ಆಶೆ. ಅಂತೆಯೇ 'ಶ್ರೀಮಾತಾ'ದ ಎದುರೇ ಎರಡೆರಡು ಸಲ ಸೈಕಲ್ಲು ಓಡಿಸುತ್ತಿದ್ದೆ. ಅವರು ತಮ್ಮ ಮನೆಯ ಪಡಸಾಲೆಯಲ್ಲಿ ಮಂಕಿಕ್ಯಾಪು ಹಾಕಿಕೊಂಡು ಅತ್ತಿತ್ತ ತಿರುಗಾಡುತ್ತಿದ್ದುದನ್ನು ಕಂಡು ಮನದಲ್ಲಿಯೇ ಹಿಗ್ಗುತ್ತಿದ್ದೆ. ಆದರೆ ಸಮೀಪದಿಂದ ಅವರನ್ನು ಕಂಡು ಮಾತನಾಡಿಸುವ ಯೋಗ ಯಾವಾಗ ಕೂಡಿಬರುವುದೋ ಎಂದು ಕಾದುಕೊಂಡಿದ್ದೆ.

ಮುಂದೊಂದು ದಿನ ಗೆಳೆಯರಿಬ್ಬರ ಜತೆ ಸೇರಿ ಸ್ಥಳೀಯ ವಿದ್ಯಾರಣ್ಯ ಹೈಸ್ಕೂಲಿಗೆ ಬೇಂದ್ರೆ ಅಜ್ಜನನ್ನು ಮುಖ್ಯ ಅತಿಥಿಯೆಂದು ಆಮಂತ್ರಿಸಲು ಅವರ ಮನೆಗೆ ಹೋದೆ.

# "ಉಪೇಂದ್ರೋ ವಾಮನಃ ಪ್ರಾಂಶುಃ.."

೧೯೫೯ನೆಯ ಇಸವಿ ನವೆಂಬರ್ ತಿಂಗಳಲ್ಲಿ ಬೇಂದ್ರೆಯವರು ದಕ್ಷಿಣ ಕನ್ನಡಕ್ಕೆ ಒಮ್ಮೆ ಸಂದರ್ಶನವಿತ್ತಿದ್ದರು. ಕಯ್ಯಾರ ಕಿಞ್ಞಣ್ಣ ರೈಯವರು ಆಗ ಕಾಸರಗೋಡಿನ ಬದಿಯಡ್ಕದ ನವಜೀವನ ಹೈಸ್ಕೂಲಿನಲ್ಲಿ ಅಧ್ಯಾಪಕರು. ದಕ್ಷಿಣಕನ್ನಡಕ್ಕೆ ಯಾರೇ ಕನ್ನಡದ ಪ್ರಸಿದ್ಧ ಸಾಹಿತಿ ಬರಲಿ, ಅವರನ್ನೊಮ್ಮೆ ಬದಿಯಡ್ಕಕ್ಕೂ ಆಹ್ವಾನಿಸಿ, ತಮ್ಮ ವಿದ್ಯಾರ್ಥಿಗಳಿಗೆ ಅವರ ದರ್ಶನ ಲಾಭವೊದಗಿಸಿ, ಅವರ ಸಾಹಿತ್ಯದ ಪರಿಚಯ ಮಾಡಿಸುವುದು ಕಯ್ಯಾರರ ಪರಿಪಾಠ. ಹಾಗೆಯೇ ಬೇಂದ್ರೆಯವರನ್ನೂ ಕರೆಸಿಕೊಂಡರು. ಆಗ ನಾನು ನವಜೀವನದಲ್ಲಿ ಅಧ್ಯಾಪಕನಾಗಿದ್ದೆ. ಬದಿಯಡ್ಕದಲ್ಲಿ ಬೇಂದ್ರೆಯವರು ಎರಡು ದಿನ ಇದ್ದು ಕಾಸರಗೋಡಿನ ಸರಕಾರೀ ಕಾಲೇಜಿನ ಕನ್ನಡ ಸಂಘ ಮತ್ತು ಪೆರ್ಲದ ಶ್ರೀ ಸತ್ಯನಾರಾಯಣ ಹೈಸ್ಕೂಲುಗಳ ಸಾಹಿತ್ಯ ಕೂಟಗಳಲ್ಲಿಯೂ ಪಾಲ್ಗೊಂಡರು.

ಕಾಸರಗೋಡು ಕಾಲೇಜಿನ ಕನ್ನಡ ಸಂಘವು ಆಗ ತಾನೇ ಪ್ರಾರಂಭವಾಗಿತ್ತು. ಕೇರಳ ಸರಕಾರದ ಆಧೀನದ ಕನ್ನಡ ನೆಲದ ಏಕಮೇವ ಕಾಲೇಜಿನ ಕನ್ನಡ ವಿದ್ಯಾರ್ಥಿಗಳು ಕಟ್ಟಿದ ಸಂಘವದು. ವಿದ್ಯಾರ್ಥಿಗಳಲ್ಲದೆ, ಕಾಸರಗೋಡಿನ ಇತರ ಅನೇಕ ಕನ್ನಡಾಭಿಮಾನಿಗಳಿಂದ ಸಭಾಂಗಣವು ಕಿಕ್ಕಿರಿದು ತುಂಬಿತ್ತು. ಕಾಲೇಜಿನ ಪ್ರಾಂಶುಪಾಲ ಕರಿಂಬುಳ ರಾಮಕೃಷ್ಣನ್‌ರು ಅಂದಿನ ಸಮಾರಂಭದ ಸಭಾಧ್ಯಕ್ಷರು. ಅವರು ಸಾಹಿತ್ಯ ಪ್ರೇಮಿ, ಹೆಸರಾಂತ ಮಲೆಯಾಳ ಸಾಹಿತಿ; ಸಂಸ್ಕೃತ ಭಾಷೆಯಲ್ಲಿಯೂ ಅಪ್ರತಿಮ ವಿದ್ವಾಂಸ.

---

ಆದರೆ ಮನೆಯ ಜನ ನನ್ನೊಬ್ಬನನ್ನೇ ಒಳಗೆ ಬರಲು ಹೇಳಿದರಲ್ಲದೆ ಎರಡು ನಿಮಿಷಕ್ಕಿಂತ ಹೆಚ್ಚು ಹೊತ್ತು ಮಾತಾಡಕೂಡದೆಂದು ತಾಕೀತು ಮಾಡಿದರು. ಅಲ್ಲದೆ, "ಅವರನ್ನು ಎಲ್ಲಿಗೂ ಆಮಂತ್ರಿಸಬಾರದು" ಎಂಬ ಕರಾರು ಬೇರೆ ಹಾಕಿದರು.

ಬೇಂದ್ರೆಯವರನ್ನು ಕಂಡು ನಮಸ್ಕರಿಸಿದೆ. ಪರಿಚಯ ಹೇಳಿದೆ. ಆದರೆ ಅವರು ಆಡತೊಡಗಿದ ಮಾತು ಎಲ್ಲಿಂದೆಲ್ಲಿಯೋ ಸಾಗಿಬಿಡತೊಡಗಿತು. ನನಗೆ ಅವರ ಮನೆ ಜನ ಕೊಟ್ಟ ಸಮಯವೂ ಮೀರಿತ್ತಾದ್ದರಿಂದ ನಾನು ನಿರಾಶೆಯಿಂದಲೇ ಮರಳಬೇಕಾಯಿತು.

ಬೇಂದ್ರೆ ತೀರಿಕೊಂಡಾಗ ನಾನು ಏನನ್ನೋ ಕಳಕೊಂಡವನಂತೆ ಚಡಪಡಿಸಿದೆ. ಕನ್ನಡ ಅಧ್ಯಯನ ಪೀಠದಲ್ಲಿ 'ಬೇಂದ್ರೆ ಸಪ್ತಾಹ' ಆಚರಿಸಲು ಏರ್ಪಾಡಾಯಿತು. ಕೊನೆಯ ದಿನ 'ಬೇಂದ್ರೆ ಸ್ಮರಣೆ' ಎಂಬ ಕವಿಗೋಷ್ಠಿ. ಅಂದು ನಾನು ಓದಿದ್ದು 'ಹೀಂಗಿದ್ದ ನಮ್ಮ ಅಜ್ಜ' ಎಂಬ ಕವನ.

'ಎದೆಯ ಆಳವ ಬಗೆದು
ಪ್ರೀತಿರಸವನು ಮೊಗೆದು
ಕಾವ್ಯರಸಾಯನ ಮಾಡಿ ಹಂಚುತ್ತ ಬಂದಾವ
ಸಮರಸದ ಬದುಕೀಗೆ
ಭಾಷ್ಯ ಬರೆದವನಂತೆ
ಕಾವ್ಯ ಕೃಷಿಯನು ಗೈದ ಎದೆಯ ಒಕ್ಕಲಿಗ
ಹೀಂಗಿದ್ದ ಇಂವ ನಮ್ಮ ಅಜ್ಜ'

ಬೇಂದ್ರೆ ನನ್ನ ಮನದಲ್ಲಿ ಅಜ್ಜನಾಗಿ ಇಂದಿಗೂ ನೆಲೆಸಿದ್ದಾರೆ.

● **ಈರಪ್ಪ ಎಂ. ಕಂಬಳಿ,**
ಬೆಂಗಳೂರು

ಕಾರ್ಯಕ್ರಮದ ಪೂರ್ವಭಾವಿಯಾಗಿ ಕಯ್ಯಾರರು ಅವರಿಗೆ ವರಕವಿಯ ಸಂಪೂರ್ಣ ವಿವರಗಳನ್ನಿತ್ತಿದ್ದರು.

ಅಧ್ಯಕ್ಷ ಭಾಷಣದ ಸಂದರ್ಭ ಬಂತು. ರಾಮಕೃಷ್ಣನ್‌ರು ಆ ಭಾಷಣದ ಉದ್ದಕ್ಕೂ ವರಕವಿಯ ಹೆಸರನ್ನು ಹೇಳಬೇಕಾದಲ್ಲೆಲ್ಲ 'ಬೇಂದ್ರೆ' ಎನ್ನುವುದಕ್ಕೆ ಬದಲಾಗಿ 'ಉಪೇಂದ್ರ' ಎಂದೇ ಹೇಳುತ್ತಿದ್ದರು. ಎದುರು ಕುಳಿತ ವಿದ್ಯಾರ್ಥಿಗಳು ಪರಸ್ಪರ ಮುಖ ನೋಡಿಕೊಂಡು ಮುಗುಳ್ನಕ್ಕರು. ಅಷ್ಟೆ. ಬೇಂದ್ರೆಯವರೂ ಮುಗುಳ್ನಗುತ್ತ ಮಿಂಚುವ ಕಣ್ಣುಗಳಿಂದ ಅಧ್ಯಕ್ಷರನ್ನೇ ನೋಡುತ್ತಿದ್ದರು. ಕಯ್ಯಾರರು ಒಂದು ಚಿಕ್ಕ ಕಾಗದದ ತುಂಡಿನಲ್ಲಿ ಇಂಗ್ಲೀಷ್‌ನಲ್ಲಿ ಬೇಂದ್ರೆಯವರ ಹೆಸರನ್ನು ವಿವರವಾಗಿ ಸ್ಪಷ್ಟವಾಗಿ ಬರೆದು ಪ್ರಾಂಶುಪಾಲರ ಕೈಗಿತ್ತರು. (ರಾಮಕೃಷ್ಣನ್ ಮಲೆಯಾಳಿ; ಅವರ ಭಾಷಣ ಇಂಗ್ಲೀಷ್‌ನಲ್ಲಿಯೇ ಸಾಗಿತ್ತು.) ಕಾಗದವನ್ನು ನೋಡಿದ ರಾಮಕೃಷ್ಣನ್ ಒಮ್ಮೆಗೆ ಅವಾಕ್ಕಾದರೂ. ಆದರೆ, ಪ್ರತ್ಯುತ್ಪನ್ನಮತಿಗಳಾದ ಅವರ, ಕೂಡಲೇ ಪ್ರಾಂಜಲವಾಗಿ ತಮ್ಮ ತಪ್ಪನ್ನು ಒಪ್ಪಿಕೊಂಡರಲ್ಲದೆ ಅಂತಹ ತಪ್ಪು ಸಂಭವಿಸಲು ಕಾರಣವೇನೆಂಬುದನ್ನೂ ಅತ್ಯಂತ ಮನೋಜ್ಞವಾಗಿ ನಿರೂಪಿಸಿದರು.

"ಬೇಂದ್ರೆ.... ಎಂಬ ಹೆಸರು ನನಗೆ ತೀರ ಹೊಸದು ಕಯ್ಯಾರರೇ, ನೀವು ವರಕವಿಯವರನ್ನು ನನಗೆ ಪರಿಚಯಿಸುವಾಗ ಸರಿಯಾಗಿಯೇ ಹೇಳಿದ್ದಿರಿ. ಆದರೆ, ಅವರನ್ನು ನೋಡಿದಾಗ ನನಗೆ ಮೊದಲಿಗೇ ನೆನಪಾದುದು ವಾಮನ ಮೂರ್ತಿಯದು. ಒಡನೆಯೇ ನನಗೆ ನನ್ನ ನಿತ್ಯ ಪಾರಾಯಣದ ಶ್ರೀ ವಿಷ್ಣು ಸಹಸ್ರನಾಮದ, 'ಉಪೇಂದ್ರೋ ವಾಮನಃ ಪ್ರಾಂಶುಃ....' ಎಂಬ ಸಾಲಿನ ನೆನಪಾಯಿತು. ಈ ವಾಮನ ಮೂರ್ತಿ- ಕನ್ನಡದ ವರಕವಿ! ಕನ್ನಡಿಗರ ಕಣ್ಮಣಿಯಾಗಿ ಪ್ರಾಂಶುಃ-ತ್ರಿವಿಕ್ರಮನೇ ಆಗಿದ್ದಾರೆ. ಇವರು ಉಪೇಂದ್ರನೇ.... ಎಂದೆಲ್ಲ ನನ್ನ ಮನಸ್ಸಿನಲ್ಲಿ ಮೂಡಿತು. ನನ್ನ ಸುಪ್ತ ಚೇತನದಲ್ಲಿ ಮುದ್ರಿತವಾದ ಈ 'ಉಪೇಂದ್ರ' ಎಂಬ ಹೆಸರೇ ನನ್ನ ಭಾಷಣದ ಉದ್ದಕ್ಕೂ ಬಂದಿರಬೇಕು. ವರಕವಿ ಬೇಂದ್ರೆಯವರೇ, ಆಕಸ್ಮಿಕ ಘಟಿಸಿದ ನನ್ನ ಈ ಪ್ರಮಾದ ದಯವಿಟ್ಟು ಕ್ಷಮಿಸಿರಿ," ಎಂದು ಪ್ರಾಂಶುಪಾಲರು ಬೇಂದ್ರೆಯವರಿಗೆ ಕೈ ಮುಗಿದರು.

ಬೇಂದ್ರೆಯವರು ತಟ್ಟನೆ ಆಸನಬಿಟ್ಟೆದ್ದು, ಪ್ರಾಂಶುಪಾಲರ ಎರಡೂ ಕೈಗಳನ್ನೂ ತಮ್ಮ ಹಸ್ತಗಳಲ್ಲಿ ಹಿಡಿದುಕೊಂಡು "ಸ್ವಾಮಿ, ನೀವೇನೂ ತಪ್ಪುಮಾಡಿಲ್ಲ, ಮತ್ತೆ ನಾನು ಕ್ಷಮಿಸಬೇಕಾದ ಪ್ರಮೇಯವೆಲ್ಲಿದೆ? ದಯವಿಟ್ಟು ನಿಶ್ಚಿಂತರಾಗಿರಿ," ಎಂದು ನಕ್ಕರು.

ಇಡೀ ಸಭಾಂಗಣವೇ ಕರತಾಡನ ಧ್ವನಿಯಿಂದ ಮಾರ್ದನಿಗೊಂಡಿತು.

ಮುಂದೆ 'ಜ್ಞಾನಪೀಠ'ದಿಂದ ಪುರಸ್ಕೃತರಾದ ಈ ವಾಮನಮೂರ್ತಿ ಪ್ರಾಂಶುವಾದರು. ಕನ್ನಡ ಸಾಹಿತ್ಯದ ಉಪೇಂದ್ರನೇ ಆಗಿ ಅವರು ವಿಜೃಂಭಿಸಿದರು.

● ಎಸ್. ಶ್ರೀ ಕೃಷ್ಣ
ಬದಿಯಡ್ಕ

# ಹುರಿಗಾಳು

ಐವತ್ತು ವರ್ಷಗಳ ಹಿಂದಿನ ಮಾತು. ಪುಣೆಯ ಆರ್ಡಿನನ್ಸ್ ಡಿಪೋದಲ್ಲಿ ಕೆಲಸ ಮಾಡುತ್ತಲಿದ್ದೆ. ಬುಧವಾರಪೇಟ್ಠದಲ್ಲಿ ಕರ್ನಾಟಕ ಸಂಘದ ಸಂಪರ್ಕ ಬಂತು.

ಕೆಲದಿನಗಳಲ್ಲಿಯೇ ಬೇಂದ್ರೆಯವರು ಪುಣೆಗೆ ಬಂದರು. ಕರ್ನಾಟಕ ಸಂಘದ ಆಗಿನ ಕಾರ್ಯದರ್ಶಿಗಳಾಗಿದ್ದ ಏರಿಯವರು, "ಹೋಗಿ ಬೇಂದ್ರೆಯವರನ್ನ ಆಮಂತ್ರಿಸಿ ಬನ್ನಿರಿ" ಎಂದರು. ನಾವು ವರಕವಿಯ ಬಳಿ

ಹೋಗಿ ಉದ್ದೇಶ ವಿವರಿಸಿದೆವು.

"ಬರೇ ಭಾಷಣದಿಂದ ಕೆಲಸ ಆಗೂದಿಲ್ಲ, ಸತತ ಆಸಕ್ತಿ ಬೇಕು. ನಿಮ್ಮಲ್ಲಿ ಅದು ಅದS ಏನು? ಕನ್ನಡ ಸೇವಾ ಅಂದರ ಒಂದು ತಪಸ್ಸು," ಎಂದರು.

"ಆ ತಪಸ್ಸಿಗೆ ನಿಮ್ಮಂಥವರ ಆಶೀರ್ವಾದ-ಮಾರ್ಗದರ್ಶನ ಬೇಕು. ಅದಕ್ಕಾಗಿ ನೀವು ಬರಬೇಕು," ಎಂದು ವಿನಂತಿಸಿಕೊಂಡೆವು. ಬೇಂದ್ರೆ ಸಂಘಕ್ಕೆ ಬಂದರು. 'ಕನ್ನಡದ ಸೇವೆ' ಎಂಬ ವಿಷಯವಾಗಿ ಮಾತನಾಡಿದರು. ಅವರು ಮಾತು, ವ್ಯಕ್ತಿತ್ವ, ವಿಚಾರಗಳೆಲ್ಲ ನನ್ನ ಮೇಲೆ ಪ್ರಭಾವ ಬೀರಿದುವು.

೧೯೫೭ರಲ್ಲಿ ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ, ತರುಣನಾಗಿದ್ದ ನಾನು ಅಲ್ಲಿದ್ದೆ. ಮಾಸ್ತಿ-ಬೇಂದ್ರೆ ಬಾಂಧವ್ಯದ ಕುರಿತು ಕೇಳಿದ್ದೆ. "ಬೇಂದ್ರೆ ರೇಲ್ವೆ ನಿಲ್ದಾಣಕ್ಕೆ ಬಂದಿರ್ತಾರೆ. ಅವರಿಗೆ ಹುರಿಗಾಳು ಅಂದರೆ ತುಂಬ ಇಷ್ಟ;" ಎಂದುಕೊಂಡು ಮಾಸ್ತಿಯವರು ಒಂದು ಡಬ್ಬದ ತುಂಬ ಹುರಿಗಾಳು ತಂದಿದ್ದರು. "ಮಾಸ್ತಿ ಬರ್ತಾರೆ, ಹುರಿಗಾಳು ತರ್ತಾರೆ" ಎಂದು ಬೇಂದ್ರೆಯವರು ಸ್ಟೇಶನ್ನಿನಲ್ಲಿ ಕಾದು ನಿಂತಿದ್ದರು.

ಗಾಡಿ ಬಂತು. ಮಾಸ್ತಿಯವರನ್ನು ಕಂಡ ಬೇಂದ್ರೆಯವರು ಭರದಿಂದ ಹೆಜ್ಜೆ ಹಾಕಿ ಹೋಗಿ ಅವರನ್ನು ಇಳಿಸಿಕೊಳ್ಳುತ್ತ, "ಹುರಿಗಾಳು ಎಲ್ಲಿ?" ಎಂದು ಕೇಳಿಯೇಬಿಟ್ಟರು. ಮಾಸ್ತಿ ನಗುತ್ತ "ತಂದಿದೀನಿ ತಗೊಳ್ಳಿ" ಎಂದವರೇ ಡಬ್ಬವನ್ನು ಬೇಂದ್ರೆ ಕೈಗೆ ವರ್ಗಾಯಿಸಿದರು. "ಇಲ್ಲಿಯೇ ರುಚಿ ನೋಡೇ ಮನೆಗೆ ಹೋಗೋಣ" ಎಂದು ಬೇಂದ್ರೆಯವರು ಮಾಸ್ತಿಯವರನ್ನು ಅಲ್ಲಿಯೇ ಇದ್ದ ಬೆಂಚಿನ ಮೇಲೆ ಕೂಡಿಸಿಕೊಂಡು ಹುರಿಗಾಳನ್ನು ಬಾಯಿಗೆ ಹಾಕಿಕೊಂಡೇ ಎದ್ದರು. ಇದೆಲ್ಲವನ್ನೂ ನೋಡಿ ಅವರ ಸಮೀಪವೇ ಸುಳಿಯುತ್ತಿದ್ದ ನನಗೆ ಅವರಿಬ್ಬರ ಸರಳತನ, ಸ್ನೇಹ, ಅಂತಃಕರಣಗಳನ್ನು ಕಂಡು ಅಚ್ಚರಿಯಾಯಿತು; ಅಭಿಮಾನವೂ ಮೂಡಿತು.

● ಡಾ. ಶ್ರೀಪಾದ ನ. ಕುಲಕರ್ಣಿ,
ಬೆಂಗಳೂರು

## "ಮೂಗS ಹೇಳತದ"

ಇಪ್ಪತ್ತು ವರ್ಷಗಳ ಹಿಂದೆ ಗದಗಿನಲ್ಲಿ ನಾವು ಕೆಲವರು ಮಿತ್ರರು ಸೇರಿಕೊಂಡು ಪ್ರೊ. ಕೀರ್ತಿನಾಥ ಕುರ್ತಕೋಟಿಯವರಿಂದ ಐದು ದಿನಗಳ ಕಾಲ 'ಕುಮಾರವ್ಯಾಸ ಭಾರತ'ದ ಕುರಿತು ಉಪನ್ಯಾಸ ಏರ್ಪಡಿಸಿದ್ದೆವು. ಮುಕ್ತಾಯದ ದಿನದಂದು ಡಾ. ದ.ರಾ. ಬೇಂದ್ರೆಯವರನ್ನು ಮುಖ್ಯ ಅತಿಥಿಯನ್ನಾಗಿ ಆಮಂತ್ರಿಸಿದ್ದೆವು.

ಕಾರ್ಯಕ್ರಮ ಮುಗಿದ ಮೇಲೆ ಕುರ್ತಕೋಟಿಯವರು ಮತ್ತು ಬೇಂದ್ರೆಯವರು ಕೂತಿದ್ದಲ್ಲಿಗೆ ಹೋಗಿ ನಾವು ಹರಟೆಯಲ್ಲಿ ತೊಡಗಿದ್ದಾಗ ನನ್ನತ್ತ ನೋಡಿ, "ನೀವು ಹೊಂಬಳದ ಕೋಣೇಗೌಡರ ಪೈಕಿ ಕಾಣಸ್ತದ" ಅಂದರು ವರಕವಿಗಳು. ಅವರು ಇಷ್ಟು ನಿಖರವಾಗಿ ನನ್ನ ಊರು ಹಾಗೂ ಮನೆತನದ ಬಗ್ಗೆ ಕೇಳಿದ್ದು ನನಗೆ ಆಶ್ಚರ್ಯವುಂಟುಮಾಡಿತು. "ಹೌದ್ರಿ," ಎಂದೆ.

"ಇಲ್ರಿ ಅಂದ್ರ ನಾ ಎಲ್ಲೆ ಕೇಳತೇನಿ? ನಿಮ್ಮ ಮೂಗೇ ಹೇಳ್ತದ ನೀವು ಕೋಣೇಗೌಡರ ಪೈಕಿ ಅಂತ" ಎಂದು ಬೇಂದ್ರೆ ಹೇಳಿದಾಗ ಅವರ ಅಗಾಧ ನೆನಪಿನ ಶಕ್ತಿ ಮತ್ತು ತೀಕ್ಷ್ಣ ನಿರೀಕ್ಷಣೆಗಳು ನನ್ನನ್ನೂ ಅಲ್ಲಿದ್ದ ಇತರರನ್ನೂ ವಿಸ್ಮಯಕ್ಕೀಡುಮಾಡಿದವು.

● ವ್ಹಿ. ಎಲ್. ಪಾಟೀಲ,
ಧಾರವಾಡ

# ಓದಿ ಮೆಚ್ಚಿದರು

೧೯೭೦ ಇರಬೇಕು. ಧಾರವಾಡದ ಟ್ಯಾಗೋರ್ ಹಾಲಿನಲ್ಲಿ ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಳನ. ಅದರ ಕವಿಗೋಷ್ಠಿಯಲ್ಲಿ, ಗುರುಗಳೊಬ್ಬರ ಶಿಫಾರಸಿನಿಂದಾಗಿ, ಭಾಗವಹಿಸುವ ಅವಕಾಶ ಪಡೆದಿದ್ದೆ. ಪಾ.ವೆಂ. ಅಧ್ಯಕ್ಷತೆಯ ಆ ಕವಿಗೋಷ್ಠಿಗೆ ಬೇಂದ್ರೆ ಮುಖ್ಯ ಅತಿಥಿ. ನಾವೆಲ್ಲ ಹಿಂದಿನ ಸಾಲಿನಲ್ಲಿ ಕೂತಿದ್ದೆವು. ನನ್ನ ಮುಂದೆಯೇ ಬೇಂದ್ರೆಯವರ ಆಸನ. ಪ್ರತಿಯೊಬ್ಬ ಕವಿಯ ಕವನದ ಪಲ್ಲವಿಯನ್ನು ಬರೆದುಕೊಳ್ಳುತ್ತ ಅದರ ಮುಂದೆ ಅದೇ ಆಶಯದ ತಮ್ಮ ಕವಿತೆಯ ಸಾಲನ್ನೂ ಬೇಂದ್ರೆ ಆಗಿಂದಾಗಲೇ ಮುತ್ತಿನಂಥ ಅಕ್ಷರಗಳಲ್ಲಿ ಬರೆದಿಡುತ್ತಿದ್ದುದು ನನಗೆ ಕಾಣುತ್ತಿತ್ತು. ನಾನು ಓದಿದ್ದು 'ಮಗುವಾಗಿರಬೇಕು' ಎಂಬೊಂದು ಕವನ. ಅದನ್ನು ಓದಿ ಮುಗಿಸಿ ನನ್ನ ಜಾಗಕ್ಕೆ ಬಂದಾಗ ಬೇಂದ್ರೆಯವರೇನು ಬರೆದಿರಬಹುದು ಎಂಬ ಕುತೂಹಲದಿಂದ ನೋಡಿದೆ. ಕಂಡಿತು- 'ಮೊಗ್ಗಾಗಿರಬೇಕು.... ಹಿಗ್ಗಾಗಿ ಆಡುವ ಮೊಗ್ಗಾಗಿರಬೇಕು.'

ರೋಮಾಂಚಿತನಾದೆ.

ಎರಡು ವರ್ಷಗಳ ನಂತರ...

ಗೆಳೆಯರ ಗುಂಪಿನವರಲ್ಲೊಬ್ಬರಾಗಿದ್ದ ಪ್ರಹ್ಲಾದ ನರೇಗಲ್ಲರು ನಿತ್ಯ ಸಂಜೆ ನನ್ನನ್ನು ಹುಡುಕಿಕೊಂಡು ಬರುತ್ತಿದ್ದರು. (ನನ್ನನ್ನವರು "ಲೇ ಮಗನೇ" ಎಂದು ಕರೆಯುತ್ತ ಬೆನ್ನು ಚಪ್ಪರಿಸುತ್ತಿದ್ದಾಗಿನ ಆತ್ಮೀಯತೆಯಂತೂ ಮರೆಯಲಾಗದಂಥದ್ದು.) ತಾಸೆರಡು ತಾಸು ಹುಬ್ಬಳ್ಳಿಯ ನೆಹರೂ ಮೈದಾನದಲ್ಲೋ ಟೌನ್ ಹಾಲಿನ ಕಟ್ಟೆಯ ಮೇಲೋ ಕೂತು ನನಗೆ ಬೇಂದ್ರೆ, ಟ್ಯಾಗೋರ್, ಮಹಲಿಂಗರಂಗರ ಕಾವ್ಯದ ಕುರಿತು ವಿವರಿಸುತ್ತಿದ್ದರು. ಟ್ಯಾಗೋರರ 'ಜನ್ಮಭೂಮಿ' ಎಂಬ ಕವನದ ಆಂಗ್ಲ ಅನುವಾದ (ಜ.ಕಾರ್ಯಪ್ಪನವರಿಂದ) ರೂಪ 'ಭವನ್ಸ್ ಜರ್ನಲ್'ನಲ್ಲಿ ಪ್ರಕಟವಾಗಿತ್ತು. ನಾನದನ್ನು ಕನ್ನಡಕ್ಕೆ ಅನುವಾದಿಸಿ ನರೇಗಲ್ಲ ಮಾಸ್ತರರೆದುರು ಓದಿ ತೋರಿಸಿದೆ.

"ಗುಡ್. ಆದರ ನೀನಿದನ್ನ ಬೇಂದ್ರೆ ಮಾಸ್ತರಿಗೊಮ್ಮೆ ತೋರಸು," ಅಂದದ್ದು ನನಗಿನ್ನಷ್ಟು ಹುರುಪು ತುಂಬಿತು.

ಮುಂದಿನ ಭಾನುವಾರವೇ ಧಾರವಾಡಕ್ಕೆ ಹೋದೆ. ಸಾಧನಕೇರಿಯ ಬೇಂದ್ರೆ ನಿವಾಸಕ್ಕೆ ಹೋದಾಗ ಮುಂಜಾನೆ ಎಂಟು ಗಂಟೆ. ಬೆಲ್ಲು ಬಾರಿಸಿದೆ. ಬಲಗಡೆಯ ತಮ್ಮ ಕೋಣೆಯಿಂದ ಹೊರಬಂದ ಬೇಂದ್ರೆಯವರು ಬಾಗಿಲು ತೆರೆಯದೇ "ಹೂಂ, ಏನು?" ಎಂದರು. ನಾನು ಒಂದೈದು ನಿಮಿಷ ಮಾತಾಡಲು ಬಂದಿದ್ದೇನೆ ಅಂದೆ. "ನಿಮಗೇನು ಹೊತ್ತು ಗೊತ್ತು ಇಲ್ಲೇನು? ಮುಂಜಾನೆದ್ದ ಕೂಡ್ಲೆ ಬಂದ್ರ ಹ್ಯಾಂಗ? ಆಮ್ಯಾಲ ಬಾ ಹೋಗು," ಎಂದು ಮತ್ತೆ ತಮ್ಮ ಕೋಣೆ ಸೇರಿದರು.

ಅಲ್ಲಿಲ್ಲಿ ತಿರುಗಾಡಿ ಬಂದು ಮತ್ತೊಮ್ಮೆ ಅವರ ಮನೆಯ ಬೆಲ್ಲನ್ನು ಒತ್ತಿದಾಗ ಮತ್ತೆ ಮುಂಜಾನೆಯ ದೃಶ್ಯದ್ದೇ ಪುನರಾವರ್ತನೆ. ಬೇಂದ್ರೆ ಈಗ ಸ್ವಲ್ಪ ಬೇಸರಗೊಂಡಂತಿತ್ತು. "ಈಗ ಊಟದ ಹೊತ್ತು, ನನಗ ತ್ರಾಸಕೊಡಬ್ಯಾಡಾ" ಅಂದು ಒಳಗೆ ಹೋಗಿಬಿಟ್ಟರು.

ನನಗೆ ಅಳುವ ಹಾಗಾಯಿತಾದರೂ ಮಧ್ಯಾಹ್ನದ ಮೇಲೆ ಬಂದರಾಯಿತೆಂದುಕೊಂಡು ಮರಳಿದೆ. ಮಧ್ಯಾಹ್ನ ಹೋದರೆ ಏನನ್ನುವರೋ ಏನೋ ಎಂಬ ಅಂಜಿಕೆಯಿಂದ ಸ್ವಲ್ಪ ತಡವಾಗಿಯೇ ಬೇಂದ್ರೆ ನಿವಾಸವನ್ನು ತಲುಪಿದೆ. ಬೇಂದ್ರೆ ಎಲ್ಲಿಗೋ ಹೊರಡಲು ತಯಾರಾಗಿ ನಿಂತಂತಿತ್ತು. ನಾನು ಗೇಟು ದಾಟಿ ಒಳಗೆ ಹೋಗಲು ಹಿಂಜರಿದೆ. ನನ್ನತ್ತ ನೋಡಿದ ಅವರು, "ಬಾ



ಹುಡುಗಾ. ನೀನು ಬಿಡೂಹಂಗ ಕಾಣೂದುಲ್ಲ. ನಕ್ಷತ್ರಿಕನ್ಹಂಗ ಗಂಟs ಬಿದ್ದೀ. ಮೂರಕ್ಕ ಮುಕ್ತಾಯಾಗ್ಲಿ ನೀ ಎಡತಾಕೋದು," ಅಂದು ಕರೆದಾಗಲಂತೂ ಮಾತನ್ನೇ ಮರೆತೆ.

"ಹೂಂ, ಕೂಡು, ಯಾರ ನೀನು?

ಎಲ್ಲಿಯಂವಾ?" ಎಂದು ಕೇಳಿದರು."

"ಲಕ್ಷ್ಮೇಶ್ವರದಂವಾ..." ನಾನು ಉಗುಳು ನುಂಗುತ್ತಲೇ ಹೆಸರು, ಪರಿಚಯ ಹೇಳಿದೆ.

"ಲಕ್ಷ್ಮೇಶ್ವರನs! ಹಂಗಾರ ನೀ ನಮ್ಮ ಶಿರಟ್ಟಿ ತಾಲೂಕಿನವನs ಆದಿ. ಅಂಥಂಗ ಲಕ್ಷ್ಮೇಶ್ವರದ ಶ್ರೀಪಾದ ದೀಕ್ಷಿತರಿಗೆ ನೀ ಏನಾ ಗಬೇಕು?" ಎಂದು ನನ್ನ ಪಕ್ಕವೇ ಕುಳಿತರು.

"ನಾನು ಅವರ ಮರಿಮೊಮ್ಮಗ."

ಈಗ ಅವರು ಇನ್ನಷ್ಟು ಸಮೀಪಕ್ಕೆ ಸರಿದು ಕೂತರು. ನಮ್ಮ ಹಿರಿಯರ ಬಗ್ಗೆ ನನಗೆ ಗೊತ್ತಿಲ್ಲದಂಥ ಎಷ್ಟೋ ವಿಷಯಗಳನ್ನ ಹೇಳಿಯೇ ಹೇಳಿದರು.

ಅಷ್ಟರಲ್ಲಿ ವಾಮನ ಬೇಂದ್ರೆಯವರು ಬಂದು "ಹೋಗೋಣs?" ಎಂದು ತಂದೆ ಯವರನ್ನು ವಿಚಾರಿಸಿದರು.

"ಆತಪಾ ಭಾಳ ಸಂತೋಷಾತು," ಎಂದು ನನಗೆ ಹೇಳುತ್ತ ಬೇಂದ್ರೆಯವರು ಎದ್ದು ನಿಂತಾಗ ನಾನು ಮೆಲ್ಲನೆ ಜೇಬಿನಿಂದ ಕಾಗದವೊಂದನ್ನು ತೆಗೆಯುತ್ತಿರುವುದನ್ನು ನೋಡಿ "ಏನದು?" ಎಂದು ಪ್ರಶ್ನಿಸಿದರು.

"ನನ್ನ ನಿಮ್ಮತ್ರ ನರೇಗಲ್ಲ ಮಾಸ್ತರು ಕಳಿಸ್ಯಾರ್ರಿ... ಇದು..." ಎಂದು ನಾನನ್ನುವಷ್ಟ ರಲ್ಲೇ.... "ನರೇಗಲ್ಲ ಕಳಿಸ್ಯಾರs? ಮದ್ಲs ಹೇಳಬಾರದೇನೋ?" ಎಂದು ಮತ್ತೆ ಕುಳಿ ತರು.

ನಾನು ಕಾಗದವನ್ನು ಅವರ ಕೈಗಿತ್ತು, "ಇದು ನಾ ಅನುವಾದ ಮಾಡಿದ ಟ್ಯಾಗೋ ರರ ಕವಿತಾರಿ" ಎಂದೆ.

"ಬಾಳಾ, ಇವತ್ತ ಹೊರಗ ಹೋಗೋ ಪ್ರೊಗ್ರಾಂ ಕ್ಯಾನ್ಸಲ್" ಎಂದು ವಾಮನರಿಗೆ ಹೇಳಿ ಪೂರ್ತಿ ಕವನವನ್ನು ಒಂದಲ್ಲ ಎರಡು ಸಲ ಓದಿ, "ಸರಿ ದಾರೀ ಒಳಗs ಇದ್ದೀ" ಎನ್ನುತ್ತ "ಇದನ್ನ ಏನ ಮಾಡಾಂವಾ? ನನ್ನತ್ರ ಇರ್ಲಿ. ನಾ ಬೆಳಗಾಂವಕರ ರಾಮಚಂದ್ರರಾ ಯರಿಗೆ ಕೊಡ್ತೇನಿ. ಅವರು ಪ್ರಿಂಟ್ ಮಾಡ ತಾರ. ಆತs? ಮತ್ತ ಮತ್ತ ಬಾ" ಎಂದವರೆ ಕೈಗೆ ಸಕ್ಕರೆ ಹಾಕಿದರು.

ಮುಂದೆ ವಿನೀತ ರಾಮಚಂದ್ರರಾಯರ 'ಪ್ರದೀಪ' ಮಾಸಪತ್ರಿಕೆಯ ಆಗಸ್ಟ್ ಸಂಚಿಕೆ ನನ್ನ ಕೈ ಸೇರಿತು. ಮೊದಲ ಪುಟದಲ್ಲೇ ನಾನು ಅನುವಾದಿಸಿದ ಕವನ. ಕೆಳಗೆ "ವರಕವಿ ಬೇಂದ್ರೆಯವರೇ ಓದಿ ಮೆಚ್ಚಿ ಪ್ರಕಟಣೆಗೆ ಕಳಿಸಿದ ಕವಿತೆ" ಎಂಬ ಸಂಪಾದಕರ ಟಿಪ್ಪಣಿ!

● **ಗೋಪಾಲ ವಾಜಪೇಯಿ,**
ಹುಬ್ಬಳ್ಳಿ

## "ಸಾಹಿತ್ಯ ಅಂದರ..."

ಹತ್ತೊಂಬತ್ತು ವರ್ಷಗಳ ಹಿಂದೆ ಧಾರವಾಡದ ಯುನಿವರ್ಸಿಟಿ ಪಬ್ಲಿಕ್ ಸ್ಕೂಲಿನಲ್ಲಿ ನಡೆದ ಲೇಖಕರ ಶಿಬಿರದಲ್ಲಿ ನಾನೂ ಭಾಗವಹಿಸಿದ್ದೆನು. ನನಗೆ ಅಲ್ಲಿಯ ಪರಿಸರ ಮತ್ತು ಹೊಸ ಗೆಳೆಯರ ಪರಿಚಯಗಳೊಂದಿಗೆ ಖ್ಯಾತ ವಿಮರ್ಶಕರು, ನಾಟಕಕಾರರು, ಕವಿಗಳ ಉಪನ್ಯಾಸಗಳನ್ನು ಕೇಳುವ ಅವಕಾಶ ದೊರೆತು ಸಂತೋಷವಾಗಿತ್ತು. ಈ ಸಂತೋಷವನ್ನು ಇನ್ನಷ್ಟು ಹೆಚ್ಚಿಸಿದವರು ಬೇಂದ್ರೆಯವರು. ಒಂದು ದಿನ ಬೇಂದ್ರೆಯವರೊಟ್ಟಿಗೆ ಶಿಬಿರಾರ್ಥಿಗಳೆಲ್ಲ ಊಟ ಮಾಡುವ ಸುಸಂಧಿ ದೊರೆಯಿತು. ನಾನು ಹೇಗೋ ಅವರ ಪಕ್ಕದಲ್ಲಿಯೇ ಕೂತುಕೊಳ್ಳುವಲ್ಲಿ ಸಫಲನಾದೆನು. ಊಟ ಮಾಡುತ್ತಿದ್ದಾಗ ನಾನು ಒಂದು ಪ್ರಶ್ನೆಯನ್ನು ಕೇಳಿಯೇಬಿಟ್ಟೆ:

"ಸರ್, ಸಾಹಿತ್ಯ ಅಂದ್ರ ಏನ್ರಿ?"

ಹುಬ್ಬೇರಿಸಿದ ಬೇಂದ್ರೆಯವರು ನನ್ನತ್ತಲೇ ನೋಡುತ್ತ "ನೀ ಯಾವ ಕಡಿಯಾವಾ?" ಎಂದು ಪ್ರಶ್ನಿಸಿದರು.

"ನಾನು ಬೆಳವಲದ ಕಡ್ಯಾವ್ರಿ,"

ಅಂದೆನು.

"ನೀನು ಏನೇನು ಊಟಾ ಮಾಡತಿ?"

"ಹಕ್ಕರಕಿ, ಪುಂಡಿಪಲ್ಯೆ, ಖಾರಾ, ಎಣ್ಣೆ ಜ್ವಾಳದ ರೊಟ್ಟಿ, ಹುಳಿನುಚ್ಚು, ಕೆನಿಮಸರು, ಉಳ್ಳಾಗಡ್ಡಿ, ಮಜ್ಜಿಗಿ..." ಎಂದೆಲ್ಲ ಹೇಳಿ ಬಿಟ್ಟೆ.

"ಹೂಂ.... ಅದನ್ನ ಉಂಡಮ್ಯಾಲೆ ಏನಾಕ್ಕೆತಿ?" ಅವರು ಮತ್ತೆ ಒಂದು ಪ್ರಶ್ನೆ ಹಾಕಿದರು.

"ಡೇಗ (ತೇಗು) ಬರತೈತಿರಿ," ಅಂದು ಬಿಟ್ಟೆ.

"ಹೂಂ. ಆ ಡೇಗ ಏನೈತಲಾ ಅದS ಸಾಹಿತ್ಯ ನೋಡ ತಮ್ಮಾ... ನೀ ಏನೇನ ಓದಿ ಅರಗಿಸಿಕೋಳ್ತಿಯಲಾ, ಆ ಮ್ಯಾಲ ಅದರಿಂದ ಹೊರಹೊಮ್ಮೊ ವಿಚಾರನS ಸಾಹಿತ್ಯಾ" ಎನ್ನುತ್ತ ಬೇಂದ್ರೆಯವರು ಕೈ ತೊಳೆಯಲು ಎದ್ದರು.

● **ಯಲ್ಲಪ್ಪ ಹುಲಕುರ್ಕಿ,**
ರೋಣ



# ಕಣ್ಣೀರು ತರಿಸಿದ ಹಾಡು

ವೃತ್ತಿಯಿಂದ ಅಡ್ವೋಕೇಟರಾಗಿದ್ದ ಎಸ್.ವಿ.ಕೃಷ್ಣಮೂರ್ತಿರಾಯರು ಈ ಶಾಲೆಗೆ ಸಾಹಿತಿಗಳನ್ನು, ರಾಜಕೀಯ ಮುಖಂಡರನ್ನು ಕರೆತಂದು ಆಗಾಗ ಉತ್ಸವ ಮಾಡಿಸುತ್ತಿದ್ದರು. ಸ್ವಯಂ ಸಾಹಿತಿಗಳೂ ಸಾಹಿತ್ಯಪ್ರಿಯರೂ ಆಗಿದ್ದ ರಾಯರು ನಮ್ಮೂರಿನ ಕರ್ನಾಟಕ ಸಂಘದ ಕಾರ್ಯದರ್ಶಿಗಳಾಗಿದ್ದರು. ಇವರೇ ಬೇಂದ್ರೆಯವರಂತಹ ಸಾಹಿತ್ಯ ದಿಗ್ಗಜರನ್ನು ನನ್ನ ಆ ಶಾಲೆಗೆ ಕರೆತಂದದ್ದು.(೧೯೪೬.)

ಅಂದು ಮಧ್ಯಾಹ್ನ ಮೂರುವರೆ ನಾಲ್ಕರ ಮೇಲೆ ಶಾಲೆಯ ವಿದ್ಯಾರ್ಥಿಗಳಿಗೆ "ಆಫ್" ಕೊಟ್ಟು ಬೇಂದ್ರೆಯವರ ಕಾರ್ಯಕ್ರಮಕ್ಕೆ ಅನುಕೂಲಮಾಡಿಕೊಡಲಾಯಿತು. ಶಾಲೆಯ ಕಾರಿಡಾರೆ ಅದರ ಸಭಾಂಗಣ. ಸಭೆ ಕಿಕ್ಕಿರಿದಿತ್ತು. ಎಸ್.ವಿ.ಕೆ.ಯವರೇ ಬೇಂದ್ರೆಯವರನ್ನು ವೇದಿಕೆಗೆ ಒಯ್ದು ಆಸೀನಗೊಳಿಸಿದ್ದು ಮಾತ್ರವಲ್ಲ, ಪರಿಚಯ ಭಾಷಣ ಮಾಡಿದ್ದರು ಕೂಡ.

ಪ್ರಾರ್ಥನೆ, ಅತಿಥಿಗಳ ಕೀರ್ತನೆ ಎಲ್ಲ ಮುಗಿದ ಮೇಲೆ ಬೇಂದ್ರೆಯವರಿಂದ ಅವರದೇ ಕವನ ವಾಚನ.

ಬೇಂದ್ರೆಯವರು ಆ ಕ್ಷಣದಿಂದ ತನ್ಮಯರಾಗಿ ಬೇರೊಂದೇ ಲೋಕದಲ್ಲಿದ್ದವರಂತೆ ಪುಸ್ತಕದ ಹಿಂಭಾಗದ ರಟ್ಟಿನ ಮೇಲೆ ಬೆರಳಿಂದ ಬಾರಿಸಿಕೊಳ್ಳುತ್ತಾ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಲಾರಂಭಿಸಿದ್ದರು. ಶ್ರೋತೃಗಳು ಅಭಿಮಾನದಿಂದ ಮೆಚ್ಚುಗೆ ಸೂಚಿಸುತ್ತಿದ್ದರ

ಲ್ಲದೆ ಚಪ್ಪಾಳೆ ಕೂಡ ಬಾರಿಸುತ್ತಿದ್ದರು. 'ಇನ್ನೂ ಯಾಕ ಬರಲಿಲ್ಲವ್ವಾ.....'

ಅದರಲ್ಲಿನ (ಸನ್ನಿವೇಶ ತಿಳಿಯದೆ ಅವರು ಹಾಡಿದ) ಒಂದು ಸಾಲು ಮಾತ್ರ ನಮ್ಮನ್ನೆಲ್ಲ ನಗೆಗೀಡುಮಾಡಿತು. ಸಂಘದ ಕಾರ್ಯದರ್ಶಿಗಳಾದ ನಾಗಪ್ಪಶೆಟ್ಟರು ಅವತ್ತೆಲ್ಲ ಏನು ಕೆಲಸವಿತ್ತೊ ಏನೋ ತಡವಾಗಿ ಬಂದು ಮುಂದಣ ಸಾಲಿನ ಕುರ್ಚಿಯಲ್ಲಿ ಬಂದು ಕೂರುವುದಕ್ಕೆ ಸರಿಯಾಗಿ ಬೇಂದ್ರೆಯವರು

'ಯಲ್ಲೀ ಮಲ್ಲೀ ಪಾರಿ, ತಾರೀ
ನೋಡೀರೇನ್ರವ್ವಾ
ನಮ ಶೆಟ್ಟರ ಹುಡುಗ ಶಟಗೊಂಡ್ಹೋದ
ಅಂತ ನನ ಜೀಂವಾ'

-ಅಂತ ಧಾರವಾಡದ ಶೈಲಿ ರಾಗದಲ್ಲಿ ತಾಳ ಬಡಿಯುತ್ತ ಕುಣಿಯುತ್ತ ಅನ್ನುವುದಕ್ಕೂ ಸರಿಹೋಯಿತು. ಪ್ರೇಕ್ಷಕರ ನಡುವಿಂದ ನಗೆಬುಗ್ಗೆ ಎದ್ದಿತು. ಅದರ ಕಾರಣ ಹಾಡಿದ ಬೇಂದ್ರೆಯವರಿಗಾಗಲಿ ಅದಕ್ಕೆ ಗುರಿಯಾದ ನಾಗಪ್ಪ ಶೆಟ್ಟರಿಗಾಗಲಿ ತಿಳಿಯದು. ಜನ ಮಾತ್ರ ನಗುತ್ತಿದ್ದಾರೆ. ಹೆಡ್‌ಮಾಷ್ಟರು; ನಗಲಾರರು ನಗದೆ ಇರಲಾರರು; ಕೃಷ್ಣಮೂರ್ತಿರಾಯರು ತುಂಬ ಗಂಭೀರ ವದನರಾಗಿ ಒಮ್ಮೆ ಪ್ರೇಕ್ಷಕರನ್ನೂ ಒಮ್ಮೆ ಬೇಂದ್ರೆಯವರನ್ನೂ ನೋಡಿ ಸಂಶಯದಿಂದ ಎದುರಿಗೆ ದೃಷ್ಟಿ ಹಾಯಿಸುತ್ತ ಕೂತಿದ್ದರು.

ಮುಂದೆ ಬೇಂದ್ರೆಯವರು 'ಗಂಗಾವತರಣ' ವಾಚನ ಮಾಡಿದರು. ಬೇಂದ್ರೆಯವರು ಹುಬ್ಬಳ್ಳಿಯ ಧಾರವಾಡ ಶೈಲಿಯಲ್ಲಿ ಹಾಡಿದ್ದು. ಈ ತರಹದ ಸಾಹಿತ್ಯ ಕೃತಿಗಳನ್ನು ಆ ತರದ ಶೈಲಿಯಲ್ಲಿ ಹಾಡಬಹುದು ಎಂದು ಅವತ್ತೇ ನಮಗೆ ತಿಳಿದದ್ದು. ಆ ಪವಿತ್ರ ಗಂಗೆ ಹಿಮಾಲಯದಿಂದ ಶಿವಮೊಗ್ಗೆಯ ಬಾಲರಾಜ ರಸ್ತೆಯವರೆಗೆ ಹರಿದು ಬಂದು ಪಕ್ಕಕ್ಕೆ ತಿರುಗಿ, ನಾವಿರುವಲ್ಲಿನವರೆಗೆ ಬಂದು, ನಾವೆಲ್ಲ ಆ ನೀರಲ್ಲಿ ಮಿಂದು ಪಾವನರಾದ ಅನುಭವ ನಮಗೆ.

ಹಿಂದುಗಡೆಯಿಂದ ಯಾರೋ ಒಂದು ಚೀಟಿ ಕಳಿಸಿದರು. ಎಸ್.ವಿ.ಕೆ.ಯವರು ಅಂತಹ ಚೀಟಿಗಳನ್ನೆಲ್ಲ ಮೊದಲು ತಾವು ಇಸಿದುಕೊಂಡು ನೋಡಿ ಹಾಡಬಹುದಾದ ಕವನಗಳ ಹೆಸರುಗಳಿದ್ದರೆ ಮಾತ್ರ ಅವನ್ನು ಬೇಂದ್ರೆಯವರಿಗೆ ರವಾನಿಸುತ್ತಿದ್ದರು. ಈ ಚೀಟಿಯಲ್ಲಿ "ದಯವಿಟ್ಟು 'ನೀ ಹಿಂಗ ನೋಡಬ್ಯಾಡ ನನ್ನ' ಅಂತ ಕವನ ಅಂದು ತೋರಿಸಿರಿ" ಅಂತ ಬರೆದಿತ್ತು. ಅದನ್ನೋದಿದ ರಾಯರು ಕಿಡಿ ಕಿಡಿಯಾದರು. "ಇದನ್ನು ಬರೆದು ಕಳಿಸಿದವರ್‍ಯಾರು?" ಅಂತ ಗರ್ಜನೆ ಹಾಕಿಯೂ ಬಿಟ್ಟರು. ಹೊಸತಾಗಿ ಶಾಲೆಯಲ್ಲಿ ನೇಮಕಗೊಂಡ ಅಧ್ಯಾಪಕರದ್ದೇ ಈ ಕೆಲಸ ಎಂದು ತಿಳಿಯಿತು ಅವರಿಗೆ.

ಬೇಂದ್ರೆಯವರು ಬಲವಂತವಾಗಿ ರಾಯರ ಕೈಯಿಂದ ಚೀಟಿ ಕಿತ್ತುಕೊಂಡು ಮೈಕ್ ಮುಂದೆ ಗಟ್ಟಿಯಾಗಿ ಓದುತ್ತ ಯಾರು ಬರೆದದ್ದು ಇದನ್ನ ಎಂದು ಕೇಳಿ, ಕೇಳಿದವರು ಎದ್ದು ನಿಂತೂ ಆಯಿತು. "ದಯಮಾಡಿ ಇದೊಂದನ್ನು ಕೇಳಬ್ಯಾಡ್ರಿ" ಎಂದು ಅತಿ ದೈನ್ಯದಿಂದ ಬರೆದುಕಳಿಸಿದವರನ್ನು ಬೇಡಿಕೊಂಡರು.

ನಮ್ಮ ಅಧ್ಯಾಪಕರು, "ಪ್ರೊಫೆಸರ್ ಬೇಂದ್ರೆಯವರು ಇಂಥಾ ಕಡಿ ಈ ಕವಿತಾವನ್ನೇ ಅಂದು ತೋರಿಸಿದ್ರು ನಮಗೆ, ಅದೇ ಆಗ ಭಾರಿ ಲೈಕ್ ಆಯಿತು. ಅವರಿಗೀಗ ಅದರಿಂದ ತೊಂದ್ರಿ ಆಗದೇ ಇದ್ದರ ಅದನ್ನೇ ಇಲ್ಲೂ ಒಂದ್ ಸರ್ತಿ ಅಂದು ತೋರಿಸಬಹುದು" ಅಂತ ವಿನಂತಿಸಿದರು.

ನಿಂತ ಬೇಂದ್ರೆಯವರು ಒಂದು ಬಾರಿ ದೀರ್ಘವಾಗಿ ಉಸಿರುಬಿಟ್ಟರು. ಹೊದ್ದ ಶಲ್ಯದಿಂದ ಮುಖ ಒರೆಸಿಕೊಂಡರು. ಟೋಪಿ

ತೆಗೆದು ತಲೆಯ ಮೇಲೆ ಕೈಯಾಡಿಸಿಕೊಂಡರು. ನೀರು ತುಂಬಿದ ಕಂಗಳಿಂದ ಜನರತ್ತ ಅವರು ನೋಡಿದರು.

ಮತ್ತೊಮ್ಮೆ ಶಲ್ಯದಿಂದ ಕಣ್ಣೀರೊರಿಸಿಕೊಂಡ ಬೇಂದ್ರೆಯವರು, "ಇಲ್ರೆಪಾ.... ಅದನ್ನೇ ಓದತೀನಿ ನಾನು. ಕೇಳೋ ಜನಕ್ಕೆ ನಿರಾಶಾ ಆಗದಿದ್ರಾತು," ಎಂದವರೇ

'ನೀ ಹಿಂಗ ನೋಡಬ್ಯಾಡ ನನ್ನ....
ನೀ ಹೀಂಗ ನೋಡಿದರ ತಿರುಗಿ
ನಾ ಹೆಂಗ ನೋಡಲೇ ನಿನ್ನ..."

-ಅಂತ ಹಾಡಲಾರಂಭಿಸಿಯೇ ಬಿಟ್ಟರು. ಅವರ ದನಿ ಭಾರವಾಗಿತ್ತು. ಗದ್ಗದಿಸುತ್ತಿದ್ದರು. ನಡು- ನಡುವೆ ಬಿಕ್ಕುತ್ತಲೇ ಇದ್ದರೆಂದು ನೆನಪು ನನಗೆ. ಅವರ ವಾಚನ ಮುಗಿದ ಮೇಲೆ ಎಲ್ಲರ ಕಣ್ಣಲ್ಲೂ ನೀರು.

ಆಮೇಲೆ ಗೊತ್ತಾಯಿತು ನನಗೆ ವಿಷಯ. ಅವರ ಹುಡುಗ ತೀರಿಕೊಂಡಿದ್ದಾಗ ಅಂತಹ ದುರ್ಭರ ಸನ್ನಿವೇಶದಲ್ಲಿ ಹೆಂಡತಿ ಗಂಡನ ಕಡೆ ನೋಡಿದಾಗ ಈ ಗಂಡ ಅದರ ನೆನಪಿನಲ್ಲಿ 'ನೀ ಹೀಂಗ ನೋಡಬ್ಯಾಡ ನನ್ನ' ಕವನ ರಚಿಸಿರಬೇಕು. ಹೊರಗಿನ ಜನ 'ಅದನ್ನೇ ಹಾಡಿ' ಎಂದು ಒತ್ತಾಯಮಾಡಿದಾಗ ಅದೇ ಅಂಶ ಅವರ ಸ್ಮೃತಿಪಟಲದಲ್ಲಿ ಪುನರಾವರ್ತನೆಯಾಗುತ್ತಿತ್ತೋ ಏನೋ. ಅದಕ್ಕೇ ಅವರು ಅದನ್ನ ಹೇಳಲಿಚ್ಛಿಸಲಿಲ್ಲವೋ ಏನೋ.

● ಖಜಾನೆ ಕೃಷ್ಣಮೂರ್ತಿ
ಶಿವಮೊಗ್ಗೆ

# ಮನೆಯ ಇತಿಹಾಸ

"ಎಂ.ಎ. ಪರೀಕ್ಷಾ ಅಂತೀದಿ. ವಿಷಯ ಯಾವ್ದಪಾ?" ಬೇಂದ್ರೆಯವರು 'ಶ್ರೀಮಾತಾ'ದಲ್ಲಿ ತಮ್ಮೆ..ುು ಕುಳಿತಿದ್ದ ನನ್ನನ್ನು ಕೇಳಿದರು.



"ಇತಿಹಾಸ," ಎಂದೆ.

ಈ ಮೊದಲೇ ನಾನು ಯಾವ ಊರವ, ಹೆಸರೇನು ಎಂದೆಲ್ಲ ಕೇಳಿ ತಿಳಿದುಕೊಂಡಿದ್ದ ಅವರು, "ಅಂಥಂಗ ನಿನಗ ನಿಮ್ಮನೀ ಇತಿಹಾಸ ಗೊತ್ತದ ಏನು?" ಎಂದು ಕೇಳಿಯೇ ಬಿಟ್ಟರು.

ನನಗೆ ತಂದೆಯವರು ಹೇಳಿದಷ್ಟನ್ನು ಹೇಳಿ "ಇಷ್ಟು ಮಾತ್ರ ಗೊತ್ತು," ಎಂದೆ.

"ನಿಮಗ ಇನಾಮದಾರಿಕಿ ಹ್ಯಾಂಗ ಬಂತು? ಯಾರಿಂದ ಬಂತು ಅಂತ ಗೊತ್ತೇನು?" ಎಂದು ಕೇಳಿ ನಾನು ನಿರುತ್ತರನಾದಾಗ ಅವರೇ ಮುಂದುವರಿಸಿದರು.

"ನಾನು ನಿಮ್ಮೂರಿಗೆ ಹೋಗಿದ್ದೆ. ಅಲ್ಲೆ ನದಿ ದಂಡೀಮ್ಯಾಲ ದತ್ತಪ್ಪನ ಗುಡಿ ಅದ. ಭಾಳ ಜಾಗ್ರತ ಸ್ಥಾನ ಅದು. ನಿಮ್ಮೂರು ಹಂಪಿಹೋಳಿ ಒಳಗ ಶಿವಪ್ಪಯ್ಯನವರು ಅಂತ ಮಹಾತ್ಮರಿದ್ದರು. ಅವರು ಶಿರಸಂಗಿ ದೇಸಾಯರ ವಂಶಸ್ಥರಿಗೆ ಆಶೀರ್ವಾದಾ ಮಾಡಿ ಅವರಿಗಿದ್ದ ಜಾಡ್ಯಾ ಪರಿಹರಿಸಿದರು. ಆ ಉಪಕಾರಕ್ಕೆ ದೇಸಾಯರು ಗುರುಕಾಣಿಕೆ ಅಂತ ಐದು ಹಳ್ಳಿ 'ಇನಾಮ' ಹಾಕಿ

ಶಿವಪ್ಪಯ್ಯನವರಿಗೆ ಕೊಟ್ಟರು. ಆದ್ರ ತಾವು ಬ್ರಹ್ಮಚಾರಿ, ತಮಗ್ಯಾಕ ಈ ಇನಾಮು ಅಂತ ಶಿವಪ್ಪಯ್ಯನವರು ನಿರಾಕರಿಸಿಬಿಟ್ರು. ಆಗ ದೇಸಾಯರು ಆ ಇನಾಮನ್ನು ಶಿವಪ್ಪಯ್ಯನ ವರ ತಮ್ಮ ನರಸಪ್ಪಯ್ಯನವರಿಗೆ ಕೊಟ್ಟರು. ಅವತ್ತಿನಿಂದ ಆ ಮನಿತನದವರು ಇನಾಮ ದಾರ ಆದ್ರು."

ನಮ್ಮ ಮನೆತನದ ಪೂರ್ವಾಪರಗಳನ್ನು ಬೇಂದ್ರೆಯವರ ಬಾಯಿಂದ ಕೇಳುತ್ತ ನಾನು ಹಾಗೇ ಬಾಯಿ ತೆರೆದು ಕೂತಿದ್ದೆ.

● **ಗುರುನಾಥ ಇನಾಮದಾರ,**
ಮುಂಡಗೋಡ

# ಎರಡು ಸಂದರ್ಭ

ಬೇಂದ್ರೆಯವರೊಂದಿಗೆ ಎರಡು ಸಂದರ್ಭಗಳಲ್ಲಿ ಗಂಟೆಗಟ್ಟಲೇ ಮಾತನಾಡುವ ಅಪೂರ್ವ ಅವಕಾಶ ನನಗೆ ನನ್ನ ವಿದ್ಯಾರ್ಥಿ ಜೀವನದಲ್ಲಿ ದೊರಕಿತ್ತು.

ಮೊದಲ ಬಾರಿಗೆ ಬೇಂದ್ರೆ ಅವರನ್ನು ಕಂಡಿದ್ದು ನಾನು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ. ಬೇಂದ್ರೆ ಕೊಪ್ಪಳಕ್ಕೆ ಬಂದಿದ್ದರು (೧೯೫೫ ಇರಬಹುದು.) ನಮ್ಮ ಅತ್ತಿಗೆಯವರ ತಂದೆ ದಿ. ಗಂಗಾಧರ ಶಾಸ್ತ್ರಿಗಳು ಕೂಡ ಕವಿಗಳು. ಬೇಂದ್ರೆಯವರ ಆತ್ಮೀಯ ಸ್ನೇಹಿತರು. ಹೀಗಾಗಿ ಬೇಂದ್ರೆಯವರು ಕಾರ್ಯನಿಮಿತ್ತವಾಗಿ ಕೊಪ್ಪಳಕ್ಕೆ ಬಂದಾಗಲ್ಲೆ ತಪ್ಪದೇ, ಕೋಟೆಯಲ್ಲಿರುವ ಅವರ ಮನೆಗೆ ಬಂದು, ಒಂದೆರಡು ಗಂಟೆ ಇದ್ದು ಅವರ ಹೆಂಡತಿ-ಮಕ್ಕಳ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿದ್ದರು. ಅಂಥ ಒಂದು ಸಂದರ್ಭದಲ್ಲಿಯೇ ನನ್ನ ಅತ್ತಿಗೆ ನನ್ನನ್ನು ಬೇಂದ್ರೆಯವರಿಗೆ ಪರಿಚಯಿಸಿದರು. ಅದೊಂದು ನನ್ನ ಪಾಲಿಗೆ ಅವಿಸ್ಮರಣೀಯ ಗಳಿಗೆ! ಬೇಂದ್ರೆ ಏನು ಕೇಳಿದರೋ? ನಾನೇನು ಉತ್ತರಿಸಿದೆನೋ? ಈಗ ನನಗೆ ಸರಿಯಾಗಿ ನೆನಪಿಲ್ಲ

ನಾನು ಬೇಂದ್ರೆಯವರನ್ನು ಎರಡನೆಯ ಸಲ ಕಂಡಿದ್ದು ಎಂ.ಎ. (೧೯೬೭) ವಿದ್ಯಾರ್ಥಿಯಾಗಿದ್ದಾಗ. ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಸಮಾರಂಭವೊಂದಕ್ಕೆ ಅತಿಥಿಗಳಾಗಿ ಆಗಮಿಸಿದ್ದರು. ಅವರನ್ನು ಭೇಟಿಯಾಗಿ ಹಿಂದಿನ ಕೊಪ್ಪಳದ ಪರಿಚಯ ಹೇಳಿಕೊಂಡೆ. ಗುರುತುಹಿಡಿದರು. ನಮ್ಮ ಅತ್ತಿಗೆ ಮತ್ತು ಮನೆಜನರ ಕ್ಷೇಮ ವಿಚಾರಿಸಿದರು. ನನಗೆ ಸಂಭ್ರಮಾಶ್ಚರ್ಯ. ನಮ್ಮಂತಹ ಹಲವಾರು ಜನರನ್ನು ಭೇಟಿಯಾಗುವಂಥ ಅವರ ಅದ್ಭುತವಾದ ಜ್ಞಾಪಕಶಕ್ತಿಗೆ ಬೆರಗಾದೆ.

ಬೇಂದ್ರೆಯವರು ಮಾತನಾಡಲಿ-ಇಲ್ಲವೇ ಕಾವ್ಯವಾಚನ ಮಾಡಲಿ; ಅದರ ಸೊಬಗೇ ಬೇರೆ. ಅವರ ಕವನ ವಾಚನವನ್ನು ಕೇಳುವುದೇ ಒಂದು ಅನನ್ಯ ಅನುಭವ. "ನಿನ್ನಂಗ ಆಡಾಕ ನಿನ್ನಂಗ ಹಾಡಾಕ ಪಡೆದು ಬಂದಿರಬೇಕೋ ಗುರುದೇವ" ಎಂದು ರವೀಂದ್ರನಾಥ ಠಾಕೂರರ ಬಗ್ಗೆ ಬೇಂದ್ರೆ ಬರೆದಿದ್ದಾರೆ. ಅದನ್ನೇ ಬೇಂದ್ರೆಯವರಿಗೆ ಅನ್ವಯಿಸಬೇಕೆಂದು ನನಗೆನ್ನಿಸುತ್ತದೆ.

● **ಲಕ್ಷ್ಮಣ ಅಳವಂಡಿ,**
ಅಳವಂಡಿ

# "'ಕೋಟೆ' ಅಂದರೆ..."

ಎಪ್ಪತ್ತರ ದಶಕದಲ್ಲಿ ನಾನು ಧಾರವಾಡದ ಹಿರಿಯ ಕನ್ನಡ ಚಳವಳಿ ಧುರೀಣ ರಾಮ ಜಾಧವ ಅವರ ಮನೆಯ ಆವಾರದ ಒಂದು ಕೋಣೆಯಲ್ಲಿ ವಾಸಿಸುತ್ತಿದ್ದೆ. ಜಾಧವರ ಮನೆಗೆ ಬೇಂದ್ರೆಯವರು 'ಸಾಹಿತ್ಯ ಸಂವಾದ'ಕ್ಕಾಗಿ ಬರುತ್ತಿದ್ದರು. ಆಗೆಲ್ಲ ಅವರೊಟ್ಟಿಗೆ ಇರುವ ಸೌಭಾಗ್ಯ ನನ್ನದಾಗಿತ್ತು.

ಒಂದು ಸಲ ನನ್ನ ಅಡ್ಡ ಹೆಸರಿನ

(ಜೋಶಿ) ಮೂಲವನ್ನು ಕುರಿತು ಅವರು ಹೇಳಿದ್ದು ನನ್ನನ್ನು ಅವಾಕ್ಕಾಗಿಸಿತ್ತು. "ಸಂಸ್ಕೃತದಲ್ಲಿ 'ಜೋಶ್ಯಮ್' ಅಂದರೆ ಜ್ಞಾನ, ಪ್ರಜ್ಞೆ ಅಂತ ಅಂರ್ಥ ಜ್ಞಾನದ ಸಾಧನೆ, ತಪಸ್ಸು ಮಾಡುವವ 'ಜೋಶಿ.' ಭವಿಷ್ಯಜ್ಞಾನ ಬೆಳೆಸಿಕೊಂಡವರು 'ಜ್ಯೋತಿಷಿ'ಗಳಾದರು. ವೈದಿಕ ವೃತ್ತಿಗೆ ತೊಡಗಿದವ 'ಜೋಯಿಸ'ನಾದ. ಮೂಲತಃ ಉತ್ತರ ಪ್ರದೇಶದ ಘಡವಾಲ ಜಿಲ್ಹೆಯ ಜೋಶಿಮಠ-ಬದ್ರಿನಾಥ ಮುಂತಾದ ತಾಣಗಳಿಂದ ಜೋಶಿಗಳು ದಕ್ಷಿಣಕ್ಕೆ ಸರಿಯುತ್ತ ಬಂದು ಉ.ಪ್ರದೇಶ, ರಾಜಸ್ಥಾನ, ಗುಜರಾತ, ಮಹಾರಾಷ್ಟ್ರ, ಉತ್ತರ ಕರ್ನಾಟಕಗಳಿಗೂ ಹಬ್ಬಿದರು. ಈ ಜೋಶಿ ಅನ್ನಾವರು ಭಾಳ ಶಾಣ್ಯಾರು. ಸರಸ್ವತಿ ಒಲದಾಳ ಅವರಿಗೆ, ಆದರ ಲಕ್ಷ್ಮೀನs ಮುನದಾಳ," ಎಂದು ನಕ್ಕಿದ್ದರು.

ನಾನು ೧೯೭೭ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಚೀನ ಇತಿಹಾಸ ವಿಭಾಗದಲ್ಲಿ ಪ್ರೊ. ಅ. ಸುಂದರ ಅವರ ಮಾರ್ಗದರ್ಶನದಲ್ಲಿ 'ಕರ್ನಾಟಕದಲ್ಲಿ ರಕ್ಷಣಾ ವಾಸ್ತುಶಿಲ್ಪ' ಎಂಬ ವಿಷಯದ ಮೇಲೆ ಪಿಎಚ್.ಡಿ.ಗಾಗಿ ವಿಷಯ ಸಂಗ್ರಹ ನಡೆಸಿದ್ದೆ. ಪ್ರೊ. ಸುಂದರ ಅವರು ಒಮ್ಮೆ "ಜೋಶಿ, ಕೋಟೆಗಳ ವಿಷಯವಾಗಿ ಕವಿಗಳ ದೃಷ್ಟಿ ಹೇಗಿರುತ್ತದೆ ಎಂದು ತಿಳಿದುಕೊಂಡು ಬರಲು ನೀವು ಬೇಂದ್ರೆಯವರನ್ನು ಭೆಟ್ಟಿಯಾಗಿ," ಎಂದು ಸೂಚಿಸಿದರು.

ಮೊದಲೇ ತಿಳಿಸಿ ಅವರು ಕೊಟ್ಟ ಸಮಯಕ್ಕೆ ಬೇಂದ್ರೆಯವರ ಮನೆಗೆ ಹೋದೆ.

"ಹೂಂ.... ಕೋಟೆಗಳ ಬಗ್ಗೆ ಕವಿದೃಷ್ಟಿ ಏನು ಅಂತ ತಿಳಕೊಳ್ಳಿಕ್ಕೆ ಬಂದೀರಿ. ಹೌದಲ್ಲೋ? ಹೂಂ...." ಎಂದು ಒಂದು ಕ್ಷಣ ನನ್ನನ್ನೇ ತದೇಕ ಚಿತ್ತದಿಂದ ನೋಡಿ, " 'ಕೋಟೆ' ಅಂದರ ಕಲ್ಲಿನವು. 'ಕವಿತೆ' ಅಂದರ ಕವಿಯವು. ಕೋಟೆಗೂ ಕವಿತೆಗೂ



ಭಾಳ ಫರಕ ನೋಡ್ರಿ. ಒಂದು ಕಠಿಣ; ಇನ್ನೊಂದು ಮೃದು. ಕೋಟೆಕಲ್ಲು ರಾಜರಿಂದ ಪ್ರಜೆಗಳ ತನಕಾ ಎಲ್ಲಾರನೂ ರಕ್ಷಣಾ ಮಾಡತದ. ಆದರ, ಕವಿತೆ ಮಾನವರ ಮನಸ್ಸನ್ನ ರಕ್ಷಣಾ ಮಾಡತದ. ಅವನ ಭಾವನೆಗಳನ್ನು ಜಾಗೃತಗೊಳಿಸಿ ಮುಗಿಲೆತ್ತರಕ ಒಯ್ಯತದ.

"ಕೋಟೆಗಳಾದರೂ ಎಷ್ಟು ತರಹದ್ದೂ ಅಂತೀರಿ? ನಮ್ಮ ಪ್ರಾಚೀನ ಕಾವ್ಯ-ಸಾಹಿತ್ಯದೊಳಗ ಅವುಗಳ ವರ್ಣನಾ ಬರತದ. ಸ್ವರ್ಣದುರ್ಗ (ರಾವಣನದು ಬಂಗಾರದ ಕೋಟೆಯಂತೆ), ಮೃಣ್‌ದುರ್ಗ, ಕಾಷ್ಠದುರ್ಗ, ಜಲದುರ್ಗ, ಶಿಲಾದುರ್ಗ.... ಆದರ

ಈ ಎಲ್ಲಾ ದುರ್ಗಗಳಿಗೂ ಮನುಷ್ಯರ ರಕ್ತ ಮೆತ್ತೇದ. ಕ್ವಾಟೀ ಒಳಗs ಮತ್ತೆಂಥೆಂಥಾ ಕ್ವಾಟಿ ಅಂತೀರಿ! 'ಏಳು ಸುತ್ತಿನ ಕೋಟೆ' ಅಂತ ಕೇಳಿರೆಲ್ಲs? ಛತ್ರಪತಿ ಶಿವಾಜಿಗೆ ಇಂಥಾದೊಂದು ಕ್ವಾಟೆತ್ತಂತ. 'ಗೋಳು' (ಜವಾಬ್ದಾರಿ) ಛಾಳಿದ್ದಾಂವಗ 'ಯೋಳು' ಸುತ್ತು ಬೇಕs. ತನ್ನ ಕೈಯಾಗಿನ ಮಾಂಡಲಿಕ್ರನ 'ಏಳ'ಸಾಕ ಇಂಥಾದು ಬೇಕs. ಪ್ರಜಾನ್ನ ಚಂದಾಗಿ ನೋಡಿಕೊಳ್ರಿ, ಇಲ್ಲದಿದ್ದರ ಅವರು ನಿಮ್ಮನ್ನ 'ಕೊಳ್ಳೀ' ಹೊಡೀತಾರ ಅಂತ ಛತ್ರಪತಿ ಅನುಶಾಸನ ಹೊರಡಸ್ತಿದ್ದ.

"ಸಂಸ್ಕೃತದ 'ಅರ್ಥಶಾಸ್ತ್ರ,' 'ಮಯಮತ,' 'ಮಾನಸಾರ' ಇಂಥಾ ಗ್ರಂಥಗಳೊಳಗ ಕೋಟೆಗಳ ಬಗ್ಗೆ, ರಕ್ಷಣಾ ವಾಸ್ತುಗಳ ಬಗ್ಗೆ ಸಾಕಷ್ಟ ಹೇಳ್ಯಾರ,"

-ಹೀಗೇ ಸಾಗಿತ್ತು ಅವರ ವಾಗ್ಝರಿ.

ಬೇಂದ್ರೆ ನೀಡಿದ ಬೆಳಕಿನಲ್ಲೇ ಸಾಗಿ ನಾನು 'ಪ್ರಾಚೀನ ಕರ್ನಾಟಕದಲ್ಲಿ ರಕ್ಷಣಾ ವಾಸ್ತುಶಿಲ್ಪ' (Defence Architecture in early Karnataka) ಎಂಬ ಪ್ರೌಢಪ್ರಬಂಧ ಬರೆದೆ. ೧೯೮೫ರಲ್ಲಿ ಅದು ಹೊಸದಿಲ್ಲಿಯ ಸಂದೀಪ ಪ್ರಕಾಶನದಿಂದ ಪ್ರಕಟವೂ ಆಯಿತು.

● **ಡಾ. ಎಸ್.ಕೆ. ಜೋಶಿ,**
ಧಾರವಾಡ



# ಊಹೆಗೆ ನಿಲುಕದ ವ್ಯಕ್ತಿತ್ವ

**ಮ**ಹಾಕವಿಗೆ 'ಜ್ಞಾನಪೀಠ ಪ್ರಶಸ್ತಿ'ಯನ್ನು ತಂದುಕೊಟ್ಟ 'ನಾಕು ತಂತಿ' ಕಾವ್ಯ ಸಂಗ್ರಹವನ್ನು ನಾನು ಮರಾಠಿಯಲ್ಲಿ 'ಚಾರ್‌ತಂತು' ಎಂದು ಅನುವಾದ ಮಾಡುವ ಸಂದರ್ಭದಲ್ಲಿ ಬೇಂದ್ರೆಯವರನ್ನು ಮೊದಲ ಬಾರಿಗೆ ಭೇಟ್ಟಿಯಾದೆ. ಭೆಟ್ಟಿಗೆ ಮುಂಚೆ ಅವರಿಗೆ ಪತ್ರ ಬರೆದು ಇಂಥಿಂಥ ದಿನ ಇಷ್ಟು ಹೊತ್ತಿಗೆ ಬರುತ್ತೇನೆಂದು ತಿಳಿಸಿದ್ದೆ. ನಾನು ಸೂಚಿಸಿದ್ದು ಮಧ್ಯಾಹ್ನ ಎರಡು ಗಂಟೆಗೆ ಎಂದು. ಆದರೆ ಬೆಳಗಾಂವಿಯಿಂದ ಧಾರವಾಡ ತಲುಪಿ ಸಾಧನಕೇರಿ ಮುಟ್ಟುವ ಹೊತ್ತಿಗೆ ಎರಡೂವರೆ ಗಂಟೆಯಾಗಿತ್ತು. ಅಂಬಿಕಾತನಯದತ್ತರು ಅಂಥ ಉರಿಬಿಸಿಲಿನಲ್ಲೂ 'ಶ್ರೀಮಾತಾ'ದ ಎದುರು ಕೊಡೆ ಹಿಡಿದು ನನ್ನ ದಾರಿ ಕಾಯುತ್ತ ನಿಂತಿದ್ದರು! ಗಲಿಬಿಲಿಗೊಂಡ ನನಗೆ ಅವರು "ಜೋಶಿಯವರೆ, ನೀವು ಅಷ್ಟು ದೂರದಿಂದ, ಸ್ವಂತದ ಖರ್ಚಿನಲ್ಲಿ, ಇಂಥ ಬಿಸಿಲಲ್ಲಿ ಇಲ್ಲಿಗೆ ಬಂದಿರುವಾಗ ನಾನು ಇಷ್ಟು ಮಾಡಿದರೆ ಬಹಳವಾಯಿತೇನು? ಬನ್ನಿ, ಬನ್ನಿ," ಎಂದುಬಿಟ್ಟರು.

ಒಳಗೆ ಹೋಗಿ ಕುಳಿತುಕೊಳ್ಳುವ ಹೊತ್ತಿಗೆ 'ಜಿಜ್ಞಾಸು' ಅಂದರೇನು ಎಂಬ ವಿಷಯವಾಗಿ ಹೇಳಲಾರಂಭಿಸಿದ ಬೇಂದ್ರೆಯವರರು "ಅಂದ ಹಾಗೆ ನೀವು ಬಂದ ಉದ್ದೇಶವನ್ನೇ ಮರೆತಿದ್ದೆ. ಹಾಂ, ಎಲ್ಲಿ, ನಿಮ್ಮ ಅನುವಾದ ಓದಿ ತೇಳಿರಿ," ಎಂದರು. ನಾನು ಮರಾಠಿಯಲ್ಲಿ ಅನುವಾದಿಸಿದ ಅವರ ಕವನಗಳಾದ 'ಚೈತನ್ಯದ ಪೂಜೆ,' 'ನಿರ್ಬುದ್ಧ'

ಮುಂತಾದವುಗಳನ್ನು ಕೇಳಿಸಿಕೊಂಡು ಮೆಚ್ಚಿದರು. "ಜೋಶಿಯವರೇ, ಇವನ್ನೆಲ್ಲ ಕನ್ನಡದಲ್ಲಿ ಯಾರ ಕಡೆಯಿಂದ ಓದಿಸಿಕೊಂಡಿರಿ?" ಎಂದು ವಿಚಾರಿಸಿದರು.

"ಇಲ್ಲ, ಸರ್. ನನ್ನ ಮಾತೃಭಾಷೆ ಕನ್ನಡವೆ. ಶಿಕ್ಷಣ ಮಾತ್ರ ಮರಾಠಿಯಲ್ಲಿ, ಅದೂ ಸಾಂಗ್ಲಿಯಲ್ಲಿ," ಅಂದೆ.

"ಅಡ್ಡಿಯಿಲ್ಲ, ಕೆಲಸ ಮುಂದುವರಿಸಿರಿ" ಎಂದವರೆ ಅದೇ ತಾನೇ ಪ್ರಕಟವಾಗಿದ್ದ ತಮ್ಮ 'ಸಾಹಿತ್ಯದ ವಿರಾಟ್‌ಸ್ವರೂಪ' ಪುಸ್ತಕಕ್ಕೆ ಸಹಿ ಹಾಕಿ ಆಶೀರ್ವಾದಪೂರ್ವಕ ಕೊಟ್ಟರು.

ಆರು ತಿಂಗಳ ಮೇಲೆ ಮತ್ತೊಮ್ಮೆ ಹೋದೆ. ಅವರು ಬಳಸಿದ ಕೆಲವು ಕನ್ನಡ ಶಬ್ದಗಳನ್ನು ಮರಾಠಿಯಲ್ಲಿ ಹೇಗೆ ಅನುವಾದಿಸಬೇಕೆಂಬುದು ಗೊತ್ತಾಗುತ್ತಿಲ್ಲವೆಂಬ ಸಮಸ್ಯೆಯನ್ನು ಹೇಳಿಕೊಂಡೆ. "ಜೋಶಿ, ಅನುವಾದ ಮಾಡ್ತಿರುವವರು ನೀವು. ನಾನಲ್ಲ, ಇದರ ಬಗ್ಗೆ ನೀವು ನನ್ನನ್ನು ಏನೂ ಕೇಳತಕ್ಕದ್ದಲ್ಲ. ಓದಿರಿ, ಕವಿತೆಗಳನ್ನು ಮತ್ತೆ ಮತ್ತೆ ಓದಿರಿ **Knock the door and it will open** (ಮತ್ತೆ ಮತ್ತೆ ಬಾಗಿಲು ಬಡಿದರೆ ಅದು ತೆರದೇ ತೆರೆಯುತ್ತದೆ.)" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿದರು. ಮಗ ವಾಮನರಿಗೂ ಅವರು ಕೆಲವು ವಿಷಯಗಳಲ್ಲಿ ಹೀಗೆಯೇ ಹೇಳುತ್ತಿದ್ದರಂತೆ. 'ಚಾರ್‌ತಂತು' ಅನುವಾದ ಪೂರ್ತಿ ಮುಗಿಯಿತು. ಅವರು ನನ್ನ ಶ್ರಮವು ಸಾರ್ಥಕ ಎಂದುಕೊಂಡಾಡಿದರು.

೧೯೮೧ರ ಅಗಸ್ಟ್ ತಿಂಗಳಿನ ಕೊನೆಗೆ ಕವಿವರ್ಯರ ಪ್ರಕೃತಿ ವಿಷಮಿಸಿ ಅವರನ್ನು ನರ್ಸಿಂಗ್ ಹೋಮಿಗೆ ಸೇರಿಸಿದ ವಿಷಯ ತಿಳಿದು ಧಾರವಾಡಕ್ಕೆ ಧಾವಿಸಿದೆ. ಎನ್ನೆ ಅವರ ಮನೆಗೆ ಹೋಗಿ ಅವರೊಡಗೂಡಿ ಆಸ್ಪತ್ರೆಗೆ ಹೋದೆ. ಬೇಂದ್ರೆಯವರು ತುಂಬ ಸಂತಸಪಟ್ಟರು. ಆದರೆ ನಾವಾಗಲಿ ಅವರಾಗಲಿ ಮಾತಾಡದೆ ಪರಸ್ಪರ ಮುಖ ನೋಡುತ್ತ ಕೂತು ಬಿಟ್ಟೆವು. ಕೊನೆಗೆ ಅವರೇ, "ನೀವು ಗಪ್ಪ ಯಾಕ ಕೂತೀರಿ, ನನಗ ಗೊತ್ತು. ಆದರೆ ನನಗೆ ಬೇನೆ ಹೊಟ್ಟೆಯಲ್ಲಿ ಇದೆ, ತುಟಿ ಅಥವಾ ತಲೆಯಲ್ಲಿ ಇಲ್ಲ, ತಲೆ ಸರಿ ಇರುವವರೆಗೆ ನಾನು ಮಾತಾಡುತ್ತ ಇರುವವನೆ. ಡಾಕ್ಟರು ಏನು ಬೇಕಾದರೂ ಅನ್ನಲಿ," ಎಂದು ಹಲವಾರು ವಿಷಯ ಹೇಳಿದರು.

ನಮಗೋ ಅವರ ಸ್ಥಿತಿ ಕಂಡು ಕಣ್ಣು ತೇವಗೊಂಡವು.

ಆದರೆ ಅದೇ ಅವರ ಕೊನೆಯ ಭೆಟ್ಟಿ ಆಗುತ್ತದೆಂದು ನಾನು ಅಂದುಕೊಂಡಿರಲಿಲ್ಲ. ಯಾಕೆಂದರೆ **Unpredictable are the ways of destiny, and Bendre, too, was unpredictable** (ವಿಧಿಯ ದಾರಿಗಳು ಅನೂಹ್ಯವಾದಂಥವು. ಮತ್ತು, ಬೇಂದ್ರೆ ಕೂಡ ಊಹೆಗೆ ನಿಲುಕದಂಥವರಾಗಿದ್ದರು.)

● ಮ್ಯಂ. ಲ. ಜೋಶಿ,
ಬೆಳಗಾಂವಿ

## ಝೀರೋ ಝೀರೋ..

ಹುಬ್ಬಳ್ಳಿಯ ಒಂದು ಸಭೆಯಲ್ಲಿ ಬೇಂದ್ರೆ ಬರಿ ಸಂಖ್ಯಾಶಾಸ್ತ್ರದ ವಿಚಾರವನ್ನೇ ಹೇಳುತ್ತಿದ್ದರು. ಎದುರಿಗೆ ಕೂತಿದ್ದವರು ತಿಳಿಯದಿದ್ದರೂ ತಿಳಿದವರಂತೆ ತಲೆ ಹಾಕುತ್ತಿದ್ದರು. ಇದು ಗೊತ್ತಾಗಿ ಬೇಂದ್ರೆ ಒಂದು ಸಂಖ್ಯೆಯನ್ನು ಕೊಟ್ಟು "ಹಂಗಾರ ಈಗ ಒಂದೊಂದs ಅಂಕಿ ಕೂಡ್ಸಿ ಇದರ ಒಟ್ಟು ಮೊತ್ತದ ಕಡೀ ಅಂಕಿ ಹೇಳ್ರಿ" ಎಂದರು.

ತಕ್ಷಣವೇ "ಝೀರೋ ಝೀರೋ" ಅಂದ, ಒಬ್ಬ ಉತ್ಸಾಹಿ.

ಬೇಂದ್ರೆ– "ನಂಗೊತ್ತದ, ನಾ ಹೇಳಿದ್ದು ನಿಮ್ಮ ಪಾಲಿಗೆ ಝೀರೋ ಝೀರೋ ಅಂತ" ಎಂದು ಕೈ ಮುಗಿದು ಕೂತುಬಿಟ್ಟರು.

● ಕೆ. ಎಸ್. ಪಾಟೀಲ,
ಗದಗ



# ಯಾರು ಈ 'ಹುಬ್ಬಳ್ಳಿಯಾಂವಾ?'

ಬೇಂದ್ರೆಯವರ ಅತ್ಯಂತ ಪ್ರಸಿದ್ಧವಾದ ಕವನಗಳಲ್ಲಿ ಒಂದಾದ 'ಹುಬ್ಬಳ್ಳಿಯಾಂವಾ' ಅವರ ಜಾನಪದ ಭಾಷಾ ಪ್ರಯೋಗವನ್ನು ನಿದರ್ಶಿಸುವ ಒಂದು ಉತ್ತಮ ಕವನ. ನಾನು ಶಾಲೆಯ ವಿದ್ಯಾರ್ಥಿಯಾಗಿದ್ದಾಗ ಈ ಕವಿತೆಯ ರೆಕಾರ್ಡನ್ನು ಹಳ್ಳಿಯ ರಸಿಕರು ಉಡುಪಿ ಹೊಟೇಲುಗಳಲ್ಲಿ ಕೇಳಿ ಮೆಚ್ಚಿಕೆ ವ್ಯಕ್ತಪಡಿಸುವುದನ್ನು ನೋಡಿದ್ದೇನೆ. ಈ ಕವಿತೆಯನ್ನು ರೂಪನಿಷ್ಠವಾಗಿ, ಸಾಮಾಜಿಕವಾಗಿ, ಮನಃಶಾಸ್ತ್ರೀಯವಾಗಿ ವಿಶ್ಲೇಷಿಸಬಹುದಾಗಿದೆ. ದೇವಿ ಯಲ್ಲಮ್ಮನ ಭಕ್ತಳಾದ ಒಬ್ಬ ಜೋಗವ್ವ, ದೇವದಾಸಿಯಂತೆ ಜೀವನ ನಡೆಸುತ್ತಿದ್ದರೂ, ಅನೇಕ ಪುರುಷರ ಸಂಪರ್ಕ ಪಡೆದವಳಾಗಿದ್ದರೂ, ಒಬ್ಬ ತರುಣನಲ್ಲಿ ಅನುರಕ್ತೆಯಾಗಿ, ಅವನ ವಿರಹ ವೇದನೆಯಲ್ಲಿ ಹುಚ್ಚಾಗಿ, ಉನ್ಮಾದದ ಸ್ಥಿತಿಯಲ್ಲಿ ಈ ಹಾಡನ್ನು ಹಾಡುತ್ತಾಳೆ. ಬೇಂದ್ರೆಯವರು ಬರೆದ ನಾಟಕಗಳಿಗಿಂತ ಬರೆಯದೇ ಇದ್ದ ನಾಟಕಗಳೇ ಹೆಚ್ಚಾಗಿರುವಂತೆ ತೋರುತ್ತದೆ. ಈ ಹಾಡು, ಅವರ ಅಲಿಖಿತ ನಾಟಕದ ಹಾಡು. 'ಸಖೀ ಗೀತ' ಕಾವ್ಯ ಸಂಗ್ರಹದಲ್ಲಿದೆ. ಈ ಹಾಡು ಬೇಂದ್ರೆಯವರಿಗೂ ಬಹಳ ಮೆಚ್ಚಿಕೆಯದಾಗಿತ್ತು. ಹತ್ತಾರು ಸಲ ಅವರ ಬಾಯಿಯಿಂದ ಈ ಹಾಡು ಕೇಳಿರುವೆ. ಕೆಲವು ಮಾತು ತಿಳಿಯದೇ ಇದ್ದಾಗ ಅವರಿಂದ ವಿವರಣೆ ಪಡೆದಿರುವೆ.

ಪಟ್ಟಾಭಿರಾಮ ಸೋಮಯಾಜಿಯವರ 'ಚಹಾದ ಜೋಡಿ ಚೂಡಾ' ಎಂಬ ಲೇಖನವನ್ನು ಓದಿದಾಗ ನನಗೆ ಬಹಳೇ ಅಸಮಾಧಾನವಾಯಿತು. ('ರುಜುವಾತು' ಜನವರಿ-ಮಾರ್ಚ್ ೧೯೮೮, ಸಂಚಿಕೆ, ೧೩). ಈ ಬಗ್ಗೆ ಎಂ.ಫಿಲ್. ವಿದ್ಯಾರ್ಥಿಗಳ ಸೆಮಿನಾರಿನಲ್ಲಿ ಒಂದು ಪ್ರಬಂಧ ಬರೆಯಿಸಿ ವಿಶೇಷ ಚರ್ಚೆ ನಡೆಸಿದೆ. ಶ್ರೀ ಸೋಮಯಾಜಿಯವರ ಸುದೀರ್ಘವಾದ ಅಭ್ಯಾಸ ಪೂರ್ಣ ಪ್ರಬಂಧದಲ್ಲಿ ಈ ಕವನದ ನಾಯಕನಿಗೆ ಅನ್ಯಾಯವಾಗಿದೆ ಎಂದು ನನಗೆ ಅನಿಸಿತು. ಅವರು ನಾಯಕನನ್ನು 'ಮಾತಿನ ಮಲ್ಲ, ಘಟಿಂಗ, ಖದೀಮ' ಎಂದು ಕರೆದಿದ್ದಾರೆ. 'ಭಾರೀ ಜರದ ವಾರಿ ರುಮಾಲು ಸುತ್ತಿ ತುಂಬ ಮೀಸೆ ತೀಡಿ ಕೋತ, ಹುಬ್ಬುಹಾರಿಸಿ ಬರುವ ಲಂಪಟ' ಎಂದು ಹೇಳಿದ್ದಾರೆ. ಅವರ ಚಿತ್ರಣ ತಪ್ಪು ಕಲ್ಪನೆಯದಾಗಿದೆ.

ಧಾರವಾಡದ ಪರಿಸರ, ಅಂದಿನ ಸಾಮಾಜಿಕ ಸ್ಥಿತಿಗತಿಗಳನ್ನು, ತಿಳಿಯದಿದ್ದರೆ ಬೇಂದ್ರೆಯವರು ಕಲ್ಪಿಸಿದ ನಾಯಕನನ್ನು ನಾವು ಕಲ್ಪಿಸದೇ ಇದ್ದರೆ, ನಾವು ಕವಿತೆಗೆ ಅನ್ಯಾಯ ಮಾಡುತ್ತೇವೆ ಎಂದೆನಿಸುತ್ತದೆ. ತೀ.ನಂ. ಶ್ರೀ.ಯವರು 'ಗರಿ' ಸಂಗ್ರಹ ವಿಮರ್ಶಿಸುತ್ತ 'ಪಾತರಗಿತ್ತಿ' ಕವನ ತಪ್ಪು ಅರ್ಥ

• ಪ್ರೊ. ಜಿ.ಎ. ಕುಲಕರ್ಣಿ

('ಕರ್ನಾಟಕ ಮಲ್ಲ'ದಿಂದ ಸಾಭಾರ)

ಮಾಡಿ ಟೀಕಿಸಿದ್ದರು. ನಂತರ ಅವರಿಗೆ 'ಪಾತರ ಗಿತ್ತಿ' ಇದರ ಅರ್ಥ 'ಚಿಟ್ಟೆ' ಎಂದು ತಿಳಿದಾಗ, ತಾನೆಂತಹ ಪ್ರಮಾದ ಮಾಡಿದೆನೆಂದು ತಾವೇ ತಪ್ಪೊಪ್ಪಿಕೊಂಡರು. 'ಹುಬ್ಬಳ್ಳಿಯಾಂವ ಸಭ್ಯನೋ, ಘಟಿಂಗನೋ ನಮಗೇನಾಗಬೇಕು?' ಎನ್ನುವಂತಿಲ್ಲ. ಬೇಂದ್ರೆಯವರ ಬಾಯಿಯಿಂದ ಈ ಪದ್ಯದ ಬಗ್ಗೆ ಹಲವಾರು ಸಲ ಕೇಳಿದ್ದರಿಂದ, ನನ್ನ ಮುಂದೆ ಒಂದು ಚಿತ್ರವಿದೆ. ಹುಬ್ಬಳ್ಳಿಯಾಂವ ಯಾವನೋ ಅಜ್ಞಾತ ವ್ಯಕ್ತಿಯಲ್ಲ. ನಮಗೆ ತೀರಾ ಪರಿಚಿತ ಹುಡುಗ. ನಾವು ಜೀವನದಲ್ಲಿ ಕಂಡು, ಮಾತಾಡಿಸಿದ ಅನೇಕ ರಸಿಕ ಮಿತ್ರರಿಗಿಂತ ಅವನು ಹೆಚ್ಚು ಜೀವಂತವಾಗಿ ನಮ್ಮ ಮನಸ್ಸಿನ ಮೇಲೆ ಅಚ್ಚೊತ್ತುವಂತಹ ಪ್ರಭಾವ ಬೀರಿದ್ದಾನೆ. ಅವನಿಗೆ ಬೈದರೆ ನಮ್ಮ ಒಬ್ಬ ಆತ್ಮೀಯ ಮಿತ್ರನಿಗೆ ಬೈದಷ್ಟೇ ನಮ್ಮ ಮನಸ್ಸಿಗೆ ನೋವಾಗುತ್ತದೆ.

ಈ ಲೇಖನವನ್ನು ಓದಿ ನಮ್ಮಂತೆ ಬೇಸರಪಟ್ಟುಕೊಂಡು ಎಚ್.ಆರ್. ಅಮರನಾಥ ಅವರು 'ಹುಬ್ಬಳ್ಳಿಯಾಂವ ಘಟಿಂಗನೋ?' ಎಂಬ ಲೇಖನವನ್ನು ಬರೆದಿದ್ದಾರೆ. ಇವರು ಸೋಮಯಾಜಿಗಳಿಗಿಂತ ಧಾರವಾಡಕ್ಕೆ ಹತ್ತಿರದಲ್ಲಿರುವವರು. ('ಸೃಜನವೇದಿ' ಆಗಸ್ಟ್ ೧೯೮೭, ಸಂಪುಟ-೪, ಸಂಚಿಕೆ-೨). ತಮ್ಮ ಸುದೀರ್ಘ ಲೇಖನದಲ್ಲಿ ಅವರು 'ಹುಬ್ಬಳ್ಳಿಯಾಂವ' ಪದ್ಯದ ನಾಯಕನ ಮಾನಹಾನಿ ಮೊಕದ್ದಮೆಯನ್ನು ನಡೆಸುವ ವಕೀಲರಂತೆ ತಮ್ಮ ಕಾಲ್ಪನಿಕ ಕಕ್ಷಿಗಾರನ ಬಗ್ಗೆ ವಾದಿಸಿದ್ದಾರೆ. ಕಾವ್ಯ ರಸಿಕರು ಇವೆರಡೂ ಲೇಖನಗಳನ್ನು ಅವಶ್ಯ ಓದಬೇಕು.

ಕೀರ್ತಿನಾಥ ಕುರ್ತಕೋಟಿಯವರು 'ಕನ್ನಡ ಕಾವ್ಯದಲ್ಲಿ ಪರಂಪರೆಯ ಪ್ರಜ್ಞೆ' ಎಂಬ ಲೇಖನದಲ್ಲಿ (ಡಾ. ಜಿ.ಎಸ್.ಎಸ್. ಸಂಪಾದಿಸಿದ 'ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು' -೧೯೭೨, ಬೆಂಗಳೂರು ವಿ.ವಿ.) ಹೇಳುತ್ತಾರೆ, "...ಬೇಂದ್ರೆಯವರ 'ಹುಬ್ಬಳ್ಳಿಯಾಂವ' ಕವಿತೆ ನಿಜವಾದ ಅರ್ಥದಲ್ಲಿ ಸಾಂಪ್ರದಾಯಿಕವಾಗಿದೆ. ಸಂಪ್ರದಾಯ ವಿರೋಧಿಯಾದ ಕವಿ ಸೂಳೆಯ ಬಗ್ಗೆ ಕವಿತೆಯನ್ನು ಬರೆದಿದ್ದರೆ ಅದರಲ್ಲಿ ಸೂಳೆಯ ಬಾಳಿನ ಬಗ್ಗೆ ಕನಿಕರವಿರುತ್ತಿತ್ತು, ಇಲ್ಲವೆ ಹೆಣ್ಣನ್ನು ಈ ರೀತಿ ಹಾದಿಗೆಡಿಸಿದ ಸಮಾಜದ ಬಗ್ಗೆ ರೋಷವಿರುತ್ತಿತ್ತು. ಕನಿಕರ, ರೋಷ, ವಿಡಂಬನೆಗಳು ಪ್ರತಿಕ್ರಿಯೆಗಳೇ ಹೊರತು ಮೂಲ ಭಾವನೆಗಳಲ್ಲ. 'ಹುಬ್ಬಳ್ಳಿಯಾಂವ'ದ ನಾಯಿಕೆ ಒಂದು ಸಮಾಜದ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುತ್ತಾಳೆ".

ಬೇಂದ್ರೆಯವರು ವೇಶ್ಯೆಯರನ್ನು ಸಮಾಜದಿಂದ ಶೋಷಣೆಗೊಂಡ ಪತಿತರು ಎಂಬ ಭಾವನೆಯಿಂದ ಚಿತ್ರಿಸಿಲ್ಲ. ಅಂದಿನ ಸಮಾಜದಲ್ಲಿ ಕಟ್ಟಿಕೊಂಡ ಹೆಂಡತಿ ಒಬ್ಬಳಾದರೆ ಇಟ್ಟುಕೊಂಡ ಒಬ್ಬ ಹೆಂಡತಿಯೂ ಇರುತ್ತಿದ್ದಳು. ಒಂದು ಅರ್ಥದಲ್ಲಿ 'ಇಟ್ಟು'ಕೊಂಡ ಸ್ತ್ರೀ ವೇಶ್ಯೆಯೇ ಆಗಿದ್ದರೂ, ಅವಳು ಪತಿವ್ರತೆಯರಂತೆ ಒಬ್ಬನೇ ಪುರುಷನಿಗೆ ನಂಬಿಗಸ್ತಳಾಗಿ ಉಳಿಯುತ್ತಿದ್ದಳು. ಇಂಥ ಅನೇಕ ವೇಶ್ಯೆಯರ ಕತೆ ಬೇಂದ್ರೆಯವರು ನಮಗೆ ಹೇಳುತ್ತಿದ್ದರು. ಎನ್ಕೆಯವರು 'ಸಾವಿರದ ಕವಿ ಬೇಂದ್ರೆ' ಎಂಬ ಕಿರುಹೊತ್ತಿಗೆಯಲ್ಲಿ (೧೯೮೨ ಐಬಿಎಚ್ ಪ್ರಕಾಶನ) ಹೇಳುತ್ತಾರೆ, "ಕಾಮನ ಕಟ್ಟೆ ವೇಶ್ಯೆಯರ ಆವಾಸವಾಗಿತ್ತು. ಬಾಲಕ ದತ್ತು ಅವರಿಗೆಲ್ಲ ಪುಟ್ಟ ಭಟ್ಟನಾಗಿದ್ದ. ಅವರ ಮನೆಗೆ ಹೋಗಿ ದೇವರ ಪೂಜೆ ಮಾಡುವದು, ಪುರಾಣದ ಕತೆಗಳನ್ನು ಹೇಳುವದು, ದಕ್ಷಿಣೆ ಪಡೆಯುವುದು ದತ್ತನ ದಿನಚರಿಯಾಗಿತ್ತು."

ವೇಶ್ಯೆಯರ ಕುಲದಲ್ಲಿ ಜನಿಸಿದ್ದರೂ, ಮದುವೆಯಾಗಿ ಸಾಮಾನ್ಯ ಜೀವನ ನಡೆಸಿದ ಮಹಿಳೆಯರ ಬಗ್ಗೆ ಮದುವೆಯಾದ ಪರ ಪುರುಷನನ್ನು ತನ್ನ ಪುರುಷನೆಂದು ನಂಬಿ, ಮಕ್ಕಳಿಗೆ ಶಾಲೆಯಲ್ಲಿ ತಂದೆಯ ಹೆಸರನ್ನು ಕೊಡದೆ (ಅವನ ಗೌರವಕ್ಕೆ ಕಡಿಮೆ ಎಂದು) ತಾಯಿಯ ಹೆಸರನ್ನೇ ಬರೆಸುವ ಅನೇಕ ಕುಟುಂಬಗಳ ಕತೆಗಳನ್ನು ಬೇಂದ್ರೆಯವರು ಹೇಳುತ್ತಿದ್ದರು. ಒಮ್ಮೆ ಮುಗಳಿಯವರು ಬಾಗಲಕೋಟೆಯಲ್ಲಿ ನಾಡಹಬ್ಬದ ಭಾಷಣ ಮಾಡಿ ಧಾರವಾಡಕ್ಕೆ ಬರುತ್ತಿದ್ದರು. ಒಬ್ಬ ಕರೀಂಖಾನ್ ಎಂಬ ವ್ಯಕ್ತಿ ಅವರಿಗೆ ಭೇಟಿಯಾದ. 'ನಿಮ್ಮ ಭಾಷಣ ಭಾಳ ಚಲೋ ಇತ್ತು' ಎಂದು ಬಣ್ಣಿಸಿದ. ಹಳ್ಳಿಯ ರೈತನಂತಹ ಉಡುಪು ಧರಿಸಿದ್ದ. ಮುಗಳಿಯವರು 'ನೀವು ಯಾರು, ನಿಮ್ಮ ಪರಿಚಯ ನನಗಾಗಲಿಲ್ಲ' ಎಂದಾಗ ಅವನು ಉತ್ತರಿಸಿದ.

'ನಾನು ಕರೀಂಖಾನ್. ಹಾಗೆ ನೋಡಿದರೆ ನಿಮಗೆ ತಮ್ಮ ಆಗಬೇಕು. ನಾನು ಬೇಗಂ ಅವರ ಮಗ.' ಸಾಹಿತಿಗಳಿಗೆ ಬಹಳೇ ವಿಚಿತ್ರವೆನಿಸಿತು. ಅವರಿಗೆ ತಮ್ಮ ತಂದೆ ಇಟ್ಟುಕೊಂಡವಳು ಒಬ್ಬಳಿದ್ದಳೆಂಬ ಸಂಗತಿ ನೆನಪಾಯಿತು!

ಇನ್ನೊಬ್ಬ ಧಾರವಾಡದ ಪ್ರಸಿದ್ಧ ವಕೀಲರು ನಾಟಕದಲ್ಲಿ ಪಾತ್ರ ಮಾಡುವ ಮುಸ್ಲಿಂ ಹೆಂಗಸನ್ನು ಇಟ್ಟುಕೊಂಡರು. ಅವಳಿಗೆ ತೋಟ, ಮನೆ ಬರೆದುಕೊಟ್ಟರು. ಅವರಿಗೆ ಸಂಗೀತ ನಾದವಿತ್ತು. ದಿನಾಲೂ ರಾತ್ರಿ ಅವಳ ತೋಟದ ಮನೆಗೆ ಹೋಗುತ್ತಿದ್ದರು. ಇತ್ತ ಸಮಾಜದಲ್ಲಿ ಅವರಿಗೆ ಬಹಳ ಗೌರವವಿತ್ತು. ದಾನ ಧರ್ಮಕ್ಕೆ ಎತ್ತಿದ ಕೈ. ಹನ್ನೆರಡು ಗಂಟೆಗೆ ಮನೆಯ ಮುಂದೆ ಗಂಟೆ ಬಾರಿಸಿ ಬಂದವರಿಗೆಲ್ಲ ಊಟಕ್ಕೆ ಹಾಕುತ್ತಿದ್ದರು. ಸ್ಟೇಶನ್ ಬಸ್‌ಸ್ಟ್ಯಾಂಡಿಗೆ ಜನರನ್ನು ಕಳಿಸಿ, ಯಾರಾದರೂ ಅತಿಥಿಗಳು ದೊರೆತಾರೆಯೆ ಎಂದು ದಾರಿ ಕಾಯುತ್ತಿದ್ದರು. ಅವರ ಮನೆಯಲ್ಲಿ ತಿಂಗಳುಗಟ್ಟಲೇ ಕಿರಾಣ ಘರಾಣದ ಅಬ್ದುಲ್ ಕರೀಂಖಾನ್ ವಾಸ್ತವ್ಯ ಮಾಡುತ್ತಿದ್ದರು. ಸಂಗೀತ ಕಚೇರಿ ನಡೆಯುತ್ತಿತ್ತು. ಅದೇ ಮನೆಯಲ್ಲಿ ಮಠದ ಸ್ವಾಮಿಗಳು ಬಂದು ಚಾತುರ್ಮಾಸ್ಯಕ್ಕೆ ಕೂಡುತ್ತಿದ್ದರು. ಗೀತಾ, ಭಾಗವತ ಪ್ರವಚನ ನಡೆಸುತ್ತಿದ್ದರು. ಈ ವಕೀಲರ ಬಗ್ಗೆ ಒಂದು ರೋಚಕ ಕತೆ ಇದೆ. ಅವರು ತೋಟದ ಮನೆಯಲ್ಲಿ ವೇಶ್ಯೆಯೊಡನೆ ರಾತ್ರಿ ಕಳೆದು ಮುಂಜಾನೆ ಮನೆಗೆ ಬಂದಾಗ, ಸ್ನಾನ ಮಾಡಿ ಹೊಸ ಯಜ್ಞೋಪವೀತ ಧರಿಸಿ ದೇವರ ಪೂಜೆ ಮಾಡುತ್ತಿದ್ದರು. ಅವರ ಧರ್ಮಪತ್ನಿ ಹಬ್ಬ ಹರಿದಿನಗಳಲ್ಲಿ ಯಜಮಾನರ 'ಸ್ತ್ರೀ'ಯನ್ನು ಆಮಂತ್ರಿಸಿ ಹೋಳಿಗೆ ಊಟ ಹಾಕಿ ಹೊಸ ಬಟ್ಟೆ ಕೊಡುತ್ತಿದ್ದರು. ಇಂತಹ ಅನೇಕ ಕತೆಗಳನ್ನು ಬೇಂದ್ರೆಯವರು ಹೇಳುತ್ತಿದ್ದರು.

ನಾನೊಮ್ಮೆ ಬೇಂದ್ರೆಯವರನ್ನು ಕೇಳಿದ್ದೆ 'ವಾರದಾಗ ಮೂರು ಸಾರಿ ಬಂದು ಹೋಗಾಂವ' ಎಂದು ಯಾಕೆ ಬರೆದಿರುವಿರಿ ಎಂದು. ಈ ಪದ್ಯ ಬರೆದ ದಿನಗಳಲ್ಲಿ ಬೇಂದ್ರೆಯವರು ಹುಬ್ಬಳ್ಳಿಯಲ್ಲಿ ಶಿಕ್ಷಕರಾಗಿದ್ದರು. ಧಾರವಾಡದಿಂದ ಮೂರು ಸಲ ಹುಬ್ಬಳ್ಳಿಗೆ ಹೋಗುತ್ತಿದ್ದರು. ಬಹುಶಃ ಅವರಿಗೆ 'ಹುಬ್ಬಳ್ಳಿಯಾಂವ' ಕವಿತೆಯ ಶೆಟ್ಟರ ಹುಡುಗ ಪ್ರವಾಸ ಕಾಲಕ್ಕೆ ಭೇಟಿಯಾಗಿರಬೇಕು ಎಂದು ನನ್ನ ಊಹೆ. ಒಬ್ಬ ರಸಿಕ ತರುಣನ ಮದುವೆಯಾಗಿರುತ್ತದೆ. ಹುಡುಗಿ ಚಿಕ್ಕವಳಾಗಿರುತ್ತಾಳೆ. ಆಗ ಅವನು ತನ್ನ ಕಾಮ ಪಿಪಾಸೆ ತೀರಿಸಲು ಕಸಬೇರು (ವೃತ್ತಿಯಿಂದ ವೇಶ್ಯೆಯರು) ಬಸವೇರು (ದೇವಸ್ಥಾನದಲ್ಲಿ ಹೆಣ್ಣು ಗೂಳಿಯಂತೆ ಬಿಡಲ್ಪಟ್ಟವರು) ಇವರನ್ನು ಬಿಟ್ಟು ಒಬ್ಬ ಜೋಗತಿ (ಎಲ್ಲಮ್ಮನಿಗೆ ಸಮರ್ಪಿತಳಾದ ಭಿಕ್ಷುಕಿ)ಯನ್ನು ತನ್ನ ಪ್ರೇಯಸಿಯೆಂದು ಆರಿಸುತ್ತಾನೆ. ಬೇಂದ್ರೆಯವರು ಕೊಟ್ಟ ಟಿಪ್ಪಣಿಗಳಿಂದ ನಾವು ಅವರ 'ಅಲಿಖಿತ' ನಾಟಕವನ್ನು ಕಲ್ಪಿಸಬೇಕು.

'ಹುಬ್ಬಳ್ಳಿಯಾಂವ' ಕವಿತೆಯ ನಾಯಕ ಘಟಿಂಗನಲ್ಲ. ಸಂಸ್ಕಾರವಂತನಾಗಿದ್ದ ಎನ್ನಲು ಇನ್ನೊಂದು ಪುರಾವೆ ದೊರೆಯುತ್ತದೆ. 'ನಾದಲೀಲೆ'ಯಲ್ಲಿ ಪ್ರಕಟವಾದ 'ಬನ್ನಿ ಬನ್ನಿ ಕನಸುಗಳೇ' ಎಂಬ ಪದ್ಯ.

'ಬನ್ನಿ ಬನ್ನಿ ಕನಸುಗಳೇ
ಮರಳಿ ಮನೆಗೆ ಬನ್ನಿ
ಹಸುಳೆತನದ ನಸು ನಗೆಯಲಿ
ಹುಸಿಗತೆಗಳ ಹೊಸ ಜಗದಲಿ
ಬಣ್ಣಗೊಂಡು ಬಗೆ ಬಗೆಯಲಿ
ಕಣ್ಣು ಚಿವುಟ ಕರೆದು ಹೋದ
ಕನಸುಗಳೇ ಬನ್ನಿ.'

ಈ ಕವಿತೆಯ ಭಾವ ಸಂದರ್ಭ ಸೂಚಿಯಲ್ಲಿ ಬೇಂದ್ರೆಯವರು ಬರೆಯುತ್ತಾರೆ: 'ಅಲಿಖಿತ' ನಾಟಕದೊಳಗಿನ ಒಂದು ಹಾಡು. 'ಇನ್ನೂ ಯಾಕ ಬರಲಿಲ್ಲ' ಎಂಬ ಹಾಡನ್ನು ಕೇಳಿದ ನಾಯಕನೇ ಈ ಹಾಡನ್ನು ಹೇಳುತ್ತಾನೆ.

ಮನುಷ್ಯ ದೇಹಗಳಲ್ಲಿ ಪಶುಜೀವನ ಸಾಗಿಸಿದ್ದನ್ನು ಕಂಡು ಹೇಸಿ ಜೀವನ ರಂಗದಿಂದ ನಿವೃತ್ತನಾಗಲು ನಿಂತ ವೀರ ವಿರಕ್ತ ಜೀವನ ಒಂದು ತನ್ನ ಎಳೆತನದ, ಹುಡುಗತನದ ತಾರುಣ್ಯದ ಕನಸುಗಳನ್ನು ಮರಳಿ ತನ್ನಡೆಗೆ ಕರೆಯುತ್ತಿದೆ. ಇಂಥ ಕರುಣೆಯ ಗಾಂಭೀರ್ಯ ಒಂದು ಸಂಧಿ ಕಾಲದಲ್ಲಿ ತಲೆಯೆತ್ತುವದುಂಟು ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ನಾವು 'ಹುಬ್ಬಳ್ಳಿಯಾಂವ' ಕವಿತೆಯ ರಸಗ್ರಹಣ ಮಾಡಬೇಕು.

ಹಿಂದೊಮ್ಮೆ ಗೊಂದು ಸಲ ಕೀಟನಾಶಕ ತಯಾರಿಸುವ ಕಂಪನಿಯಲ್ಲಿ ಕೆಲಸಕ್ಕಿದ್ದ ನನ್ನ ಮಿತ್ರನೊಬ್ಬನೊಂದಿಗೆ ರೈತರ ಹೊಲಗಳಿಗೆ ಭೇಟಿ ಕೊಡುವ ಸಂದರ್ಭ ನನಗೆ ಒದಗಿತ್ತು. ಒಬ್ಬ ರೈತನೊಂದಿಗೆ ಈ ಹೊಸ ಔಷಧಿ ಅವನು ಕೀಟಗಳನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುವುದನ್ನು ಕುರಿತು ಹೇಳುತ್ತಿದ್ದಂತೆ ಆತ ಸ್ವಲ್ಪ ಬೇಸರದಿಂದಲೇ, 'ಆದೆಲ್ಲಾ ಖರೆ ಐತ್ರಿ ಸಾಹೇಬ್ರ..... ಆದರ.... ನಿಮ್ಮ 'ಎಣ್ಣಿ' (ಔಷಧಿ) ಹೊಡದವ್ರಾಗ ಒಂದಿಬ್ರು ಮೂರು ಮಂದಿಗೆ ದವಾಖಾನಿಗೆ ಹಾಕ್ಯಾರ್ರೀ.... ಎಂದ. ಅದಕ್ಕೆ ನನ್ನ ಮಿತ್ರ, ನೀಡಿದ ಸಮಾಧಾನದಿಂದ ಆ ರೈತನಿಗೆ ತೃಪ್ತಿಯಾದಂತೆ ಕಾಣಲಿಲ್ಲ.

ಆ ದಿನವೆಲ್ಲ ಆತನೊಂದಿಗೆ ತಿರುಗಾಡಿದೆ. ಒಬ್ಬ ಆ ಔಷಧಿಯಿಂದ 'ತಲೆ ತಿರುಗುತ್ತದೆ' ಎಂದು ಹೇಳಿದರೆ ಇನ್ನೊಬ್ಬ ಪ್ರಜ್ಞಾಶೂನ್ಯನಾದವನೊಬ್ಬನ ಕತೆ ಹೇಳಿದ. ಇವೆಲ್ಲಕ್ಕೂ ಹೆಚ್ಚಾಗಿ ಒಬ್ಬ 'ಖಲಾಸ್' ಆದ ಸುದ್ದಿ ತಿಳಿದಾಗಲಂತೂ ಆ ನನ್ನ ಮಿತ್ರನಿಗಿಂತ ನನಗೇ ದಿಕ್ಕು ತಪ್ಪಿದ ಅನುಭವವಾಗಿತ್ತು.

ನಾನು ಚಿಕ್ಕವನಾಗಿದ್ದಾಗ ನಮ್ಮ ಎದುರು ಮನೆಯಲ್ಲಿ ನಡೆದ ಘಟನೆಯೊಂದು ನೆನಪಿಗೆ ಬರುತ್ತದೆ. ತಂದೆ-ಮಗನಿಗೆ ಅದೆಂತಹುದೋ ಜಗಳ. ಸುಮಾರು ಕಾಲದಿಂಗ ಅವರಿಬ್ಬರ ನಡುವೆ ಬೆಳೆದು ಬಂದ ಮನಸ್ತಾಪ ಆಗಾಗ ಭುಗಿಲೆದ್ದು ಓಣಿಯ ಜನರನ್ನೆಲ್ಲ ಕೂಡಿಸುತ್ತಿತ್ತು. ಒಂದು ದಿನ ಮಾತ್ರ ಅವರ ನಡುವೆ ಆದ ಜಗಳದಲ್ಲಿ ಮಗ ಬೇಸತ್ತುಹೋಗಿ ರಾತ್ರಿ ಕೀಟನಾಶಕ ಔಷಧಿಯೊಂದನ್ನು ಕುಡಿದು ಆತ್ಮಹತ್ಯೆಗೆ ಪ್ರಯತ್ನಿಸಿದ. ಅವನ ಹಾಗೂ ಮನೆಯವರೆಲ್ಲರ ಅದೃಷ್ಟ ಚೆನ್ನಾಗಿತ್ತೆನ್ನಿ; ಬದುಕುಳಿದ.

ಇಂಥ ಘಟನೆಗಳು ಸಾಮಾನ್ಯವಾಗಿ ಬಹುತೇಕರಿಗೆ ಎದುರಾಗುತ್ತವೆ. ಇವುಗಳ ಸ್ವರೂಪ ಬೇರೆ-ಬೇರೆಯಾಗಿರ ಬಹುದು. ಆದರೆ ಈ ಎಲ್ಲ ಸಂದರ್ಭಗಳಲ್ಲಿ ಕೀಟನಾಶಕ ಔಷಧಿಯ ಪ್ರಸ್ತಾಪವಾಗಿರುವುದನ್ನು ಗಮನಿಸಿ.

## ಇತಿಹಾಸದಲ್ಲೊಂದು ಇಣುಕು

ಆಧುನಿಕ ಕೃಷಿಯ ಒಳಸುರಿಯಾಗಿರುವ 'ಪೀಡೆನಾಶಕ (Pesticides)ಗಳು (ಬೆಳೆಗಳಿಗೆ ತಗಲುವ ಕೀಟ, ಶಿಲೀಂಧ್ರ, ಬ್ಯಾಕ್ಟೀರಿಯಾ, ನಿಮ್ಯಾಟೋಡ್‌ಗಳಿಂದ ಬರುವ ರೋಗ, ಬೆಳೆಗಳ ಬೆಳವಣಿಗೆಗೆ ಅಡ್ಡ ಬರುವ ಕಳೆ ಸಸ್ಯಗಳನ್ನು ನಿಯಂತ್ರಿಸುವ ರಾಸಾಯನಿಕ ಔಷಧಿಗಳನ್ನು ಸ್ಥೂಲವಾಗಿ 'ಪೀಡೆನಾಶಕ'ಗಳೆನ್ನುತ್ತಾರೆ.) ಮನುಷ್ಯನ ಆರೋಗ್ಯದ ಮೇಲೆ ಬೀರುವ ದುಷ್ಪರಿಣಾಮಗಳು ಈಗ ಗುಟ್ಟಾಗಿ ಉಳಿದಿಲ್ಲ. ಭಾರತದಲ್ಲಿ ಪೀಡೆನಾಶಕಗಳ ಬಳಕೆ ಸುಮಾರು ೧೯೪೮-೪೯ ರಿಂದಲೇ ಆರಂಭವಾಗಿದೆ ಎನ್ನಬಹುದು. ಮೊಟ್ಟ ಮೊದಲು ಬೆಳೆಗಳಿಗೆ ಬೀಳುವ ಕೀಟಗಳನ್ನು ನಿಯಂತ್ರಿಸಲು ರಾಸಾಯನಿಕಗಳನ್ನು ಬಳಸಲಾಯಿತು. ಇವುಗಳನ್ನೇ (ಡಿಡಿಟಿ, ಬಿಎಚ್‌ಸಿ) ಸಾರ್ವಜನಿಕರ ಆರೋಗ್ಯ ರಕ್ಷಣೆಯಲ್ಲೂ ಬಳಸಬಹುದು ಎಂಬುದು ಗೊತ್ತಾಗಿ, ೧೯೫೩ರಲ್ಲಿ ಆರಂಭವಾದ ರಾಷ್ಟ್ರೀಯ ಮಲೇರಿಯಾ ಹತೋಟಿ ಕಾರ್ಯಕ್ರಮದಲ್ಲಿ ಸೊಳ್ಳೆಗಳನ್ನು ನಿಯಂತ್ರಿಸಲು ಡಿಡಿಟಿ ಬಳಸಲಾಯಿತು. ಇಲ್ಲಿ ಗಳಿಸಿದ ಯಶಸ್ಸಿನಿಂದಾಗಿ ಮಲೇರಿಯಾವನ್ನು ೭ ರಿಂದ ೯ ವರ್ಷಗಳಲ್ಲಿ ನಿರ್ನಾಮಗೊಳಿಸಲು ಅಣಿಯಾದ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ೧೯೫೮ ರಿಂದ ಮತ್ತೆ ಡಿಡಿಟಿಗೆ ಮಹತ್ವ ಬಂತು.

ಬೆಳೆಯುತ್ತಿದ್ದ ಜನಸಮೂಹಕ್ಕೆ ಆಹಾರ ಪೂರೈಸುವುದಕ್ಕಾಗಿ ಕೃಷಿಯಲ್ಲಿ ತೀವ್ರವಾದ ಸುಧಾರಣೆಗಳಾಗತೊಡಗಿದವು. ಅರವತ್ತರ ದಶಕದ ಮಧ್ಯದಲ್ಲಂತೂ ಬೇಸಾಯ ಕ್ಷೇತ್ರ ತೀವ್ರ ವೈಜ್ಞಾನಿಕ ಬದಲಾವಣೆಗಳನ್ನು ಕಂಡು 'ಹಸಿರು ಕ್ರಾಂತಿ'ಗೆ ನಾಂದಿಯಾಯಿತು. ಹಳೆಯ ತಲೆಮಾರುಗಳಿಂದ ಬಂದ ದೇಶೀಯ ತಳಿಗಳಿಗೆ ಬದಲಾಗಿ ಹೆಚ್ಚು ಇಳುವರಿ ಕೊಡುವಂಥ ಹೊಸ ಹೈಬ್ರಿಡ್ ತಳಿಗಳು ಬಂದವು.. ಇವುಗಳ ಇಳುವರಿಯ ಸಾಮರ್ಥ್ಯ ಹೆಚ್ಚಾಗಿದ್ದುದರಿಂದ ರಾಸಾಯನಿಕ ಗೊಬ್ಬರದ ಬಳಕೆ ಅನಿವಾರ್ಯವಾಗಿತ್ತು. ಹೊಸದಾಗಿ ಬಂದ ತಳಿಗಳು ಬಹಳ ನಾಜೂಕಾಗಿದ್ದವು. ಬೇಗನೇ ಕೀಟ, ರೋಗಗಳಿಗೆ ತುತ್ತಾಗುತ್ತಿದ್ದವು. ಈ ಪೀಡೆಗಳನ್ನು ನಿಯಂತ್ರಿಸದೇ ಹೋದರೆ ಕೈಗೆ ಏನೂ ಹತ್ತುತ್ತಿರಲಿಲ್ಲ. ಇದರಿಂದ ರಾಸಾಯನಿಕ ಪೀಡೆನಾಶಕಗಳ ಬಳಕೆ ಕೂಡ ಅವ್ಯಾಹತವಾಗಿ ಸಾಗಿ ಇಂದಿನ ಆಧುನಿಕ ಕೃಷಿಯಲ್ಲಿ ಇವು ಇಲ್ಲದಿದ್ದರೆ ನಡೆಯುವುದೇ ಇಲ್ಲ ಎಂಬಂತಾಗಿಬಿಟ್ಟದೆ. ಅರವತ್ತರ ದಶಕದ ಆರಂಭದಲ್ಲಿ ಕೇವಲ ಎರಡು ಸಾವಿರ ಟನ್ನುಗಳಷ್ಟು ಪೀಡೆನಾಶಕಗಳನ್ನು ಬಳಸುತ್ತಿದ್ದ ನಾವು ತೊಂಭತ್ತರ ದಶಕದಲ್ಲಿ ಅಂದಾಜು ೭೫,೦೦೦ ಟನ್ನುಗಳಷ್ಟು ಉಪಯೋಗ ಮಾಡುತ್ತಿದ್ದೇವೆ ಎಂದಮೇಲೆ ಅವು ಎಷ್ಟು ಅನಿವಾರ್ಯವಾಗಿವೆ ಎಂಬುದನ್ನು ಯೋಚಿಸಿ. (ಅಷ್ಟೇ ಅಲ್ಲ

ಸಾರ್ವಜನಿಕರ ಆರೋಗ್ಯ ಕಾಪಾಡುವಲ್ಲಿ ಅಂದಾಜು ಪ್ರತಿವರ್ಷ ೪೪ ಸಾವಿರ ಟನ್ನುಗಳಷ್ಟು ಕೀಟನಾಶಕಗಳನ್ನು ಬಳಸಲಾಗುತ್ತಿದೆ.)

ಕೋಷ್ಟಕ ೧: ಕೀಟಗಳಿಂದಾಗುವ ಅಂದಾಜು ನಷ್ಟ

| ರಾಜ್ಯ | ನಷ್ಟ (ಕೋ. ರೂ. ಗಳಲ್ಲಿ |
|---|---|
| ೧ ಗುಜರಾತ | ೬೦೦ |
| ೨ ಹರಿಯಾಣ | ೩೦೦ |
| ೩ ಕರ್ನಾಟಕ | ೧೯೩ |
| ೪ ಕೇರಳ | ೧೫೩ |
| ೫ ಬಿಹಾರ | ೧೫೩ |
| ೬ ಪಶ್ಚಿಮ ಬಂಗಾಳ | ೧೧೬ |
| ೭ ಆಂಧ್ರಪ್ರದೇಶ | ೫೦ |

ಕೋಷ್ಟಕ–೧ ನ್ನು ನೋಡಿ. ಪ್ರಮುಖ ರಾಜ್ಯಗಳಲ್ಲಿ ಕೀಟಗಳಿಂದಾಗಿ ಬೆಳೆಗಳ ನಷ್ಟದ ಅಂದಾಜನ್ನು ಇದು ತೋರಿಸುತ್ತದೆ. ಕೇವಲ ಕೀಟಗಳಿಂದಲೇ ಕೋಟಿಗಟ್ಟಲೆ ನಷ್ಟವಾಗುತ್ತಿದೆ. ವಿವಿಧ ರೋಗಗಳು, ದಂಶಕಗಳು, ಕಳೆಗಳು ಮುಂತಾದ ಇನ್ನೂ ಅನೇಕ ಪೀಡೆಗಳು ತಂದೊಡ್ಡುವ ಲುಕ್ಸಾನಿನ ಲೆಕ್ಕವೇ ಬೇರೆ! ಇಂದು ನಮ್ಮ ಕೃಷಿ ಕ್ಷೇತ್ರ ೨೦೦ ಕ್ಕೂ ಹೆಚ್ಚು ಕೀಟಗಳು, ೧೦೦ಕ್ಕೂ ಹೆಚ್ಚು ರೋಗಗಳು, ಸಾವಿರಕ್ಕೂ ಹೆಚ್ಚು ಕಳೆ ಸಸ್ಯಗಳೊಂದಿಗೆ ಹೋರಾಡಿ ೯೨ ಕೋಟಿ ಜನರಿಗೆ ಆಹಾರ ಒದಗಿಸಬೇಕಾಗಿದೆ! ಅಂದ ಮೇಲೆ ನಾವು ಪೀಡೆ ನಾಶಕಗಳನ್ನು ದೂರ ಇಡಲು ಸಾಧ್ಯವಿಲ್ಲ. ಅವುಗಳೊಂದಿಗೇ ನಾವು ಬದುಕಬೇಕಾಗಿದೆ ಎಂಬುದು ಸಾರ್ವತ್ರಿಕ ಸತ್ಯ.

ಒಂದು ಕಡೆ ಪೀಡೆನಾಶಕಗಳು ನಮ್ಮ ಹೊಟ್ಟೆ ತುಂಬಿಸುತ್ತವೆ. ಇನ್ನೊಂದು ಕಡೆ ಅದೇ ಆಹಾರದಲ್ಲಿ 'ವಿಷ' ಬೆರೆಸುತ್ತವೆ ಎಂಬುದು ಸುಳ್ಳಲ್ಲ! ನಮ್ಮ ಆರೋಗ್ಯದ ಮೇಲೆ ದಿನ ನಿತ್ಯವೂ ಪ್ರಹಾರ ಮಾಡುತ್ತಿವೆ ಎಂಬುದರಲ್ಲಿ ಸಂಶಯವೇ ಇಲ್ಲ. ಪೀಡೆನಾಶಕಗಳು ಮಣ್ಣಿನಲ್ಲಿ, ನೀರಿನಲ್ಲಿ, ಗಾಳಿಯಲ್ಲಿ ಶೇಖರಗೊಂಡು ನಮ್ಮ ಸುತ್ತ–ಮುತ್ತಲಿನ ಪ್ರಾಣಿ–ಪಕ್ಷಿಗಳು, ಜಲಚರಗಳು, ಮಣ್ಣಿನಲ್ಲಿರುವ ಮಿತ್ರ ಜೀವಿಗಳು, ಒಟ್ಟನಲ್ಲಿ ಪರಿಸರದಲ್ಲಿರುವ ಎಲ್ಲರ ಬದುಕನ್ನು ಅಸಹನೀಯಗೊಳಿಸುತ್ತಿದೆ ಎಂಬುದು ನಿಜ.

## ವಿಷವಾಗಬಹುದಾದ ಪೀಡೆನಾಶಕಗಳು

ಕೃಷಿ ರಾಸಾಯನಿಕಗಳು ಮಾನವನಲ್ಲಿ ಉಂಟುಮಾಡಿರಬಹುದಾದ ವಿಷದ ತೀವ್ರತೆಯ ಆಧಾರದ ಮೇಲೆ ಜಾಗತಿಕ ಆರೋಗ್ಯ ಸಂಸ್ಥೆ ಪೀಡೆನಾಶಕಗಳನ್ನು ನಾಲ್ಕು ಗುಂಪುಗಳಲ್ಲಿ ವರ್ಗೀಕರಿಸಿದೆ. ಇಲ್ಲಿ ಒಂದು ಮಾತಂತೂ ಸ್ಪಷ್ಟ. ಇಂಥ ರಾಸಾಯನಿಕಗಳನ್ನು ಬಳಸುವಾಗ ಈ ಲೇಖನದ ಮುಂಬರುವ ಪುಟಗಳಲ್ಲಿ ಕೊಡಲಾಗಿರುವ ಸಾಮಾನ್ಯ ಮುನ್ನೆಚ್ಚರಿಕೆ ಕ್ರಮಗಳನ್ನಂತೂ ಪಾಲಿಸಲೇಬೇಕು. ಅದರೊಂದಿಗೇ ಈ ಮುಂದೆ ಹೇಳಲಾದುದನ್ನು ಗಮನದಲ್ಲಿಡುವುದು ಒಳ್ಳೆಯದು.

ವರ್ಗ ೧ (ಎ): ಅತ್ಯಂತ ಅಪಾಯಕಾರಿ ಪೀಡೆನಾಶಕಗಳು– ಇವುಗಳನ್ನು ಅಧಿಕೃತ ಲೈಸನ್ಸ್ ಹೊಂದಿದವರು ಮಾತ್ರ ಬಳಸಬಹುದು.

ವರ್ಗ ೧ (ಬಿ): ಬಹಳ ಅಪಾಯಕಾರಿ ಪೀಡೆನಾಶಕಗಳು– ಇವುಗಳನ್ನು ಸರಿಯಾಗಿ ತರಬೇತಿ ಹೊಂದಿದವರು, ಮೇಲ್ವಿಚಾರಣೆಯಲ್ಲಿ ಬಳಸಬೇಕು. ಅಲ್ಲದೆ ನಿರ್ದಿಷ್ಟಪಡಿಸಲಾದ ಮುಂಜಾಗ್ರತಾ ಕ್ರಮಗಳನ್ನು ಅನುಸರಿಸಬೇಕು.

ವರ್ಗ ೨ : ಸಾಧಾರಣವಾಗಿ ಅಪಾಯಕಾರಿ ಪೀಡೆನಾಶಕಗಳು- ತರಬೇತಿ ಹೊಂದಿದವರು ಸೂಕ್ತ ಮೇಲ್ವಿಚಾರಣೆಯಲ್ಲಿ ಬಳಸಬಹುದು. ಗೊತ್ತಾದ ಸುರಕ್ಷತಾ ಕ್ರಮಗಳು ಅವಶ್ಯ.

ವರ್ಗ ೩: ಅಲ್ಪ ಅಪಾಯಕಾರಿ ಪೀಡೆನಾಶಕಗಳು; ಇವುಗಳನ್ನು ತರಬೇತಿ ಪಡೆದವರು ಬಳಸಬಹುದು. ಆದರೆ ಎಲ್ಲ ಮುಂಜಾಗ್ರತೆ ಕ್ರಮಗಳು ಅವಶ್ಯ.

ವರ್ಗ ೪: ನಿರಪಾಯಕಾರಿ ಪೀಡೆನಾಶಕಗಳು- ಇವು ನಿರಪಾಯಕಾರಿಯಾಗಿದ್ದರೂ ಬೇರೆ-ಬೇರೆ ಪ್ರಮಾಣ ಹಾಗೂ ಬೇರೆ-ಬೇರೆ ರಾಸಾಯನಿಕಗಳೊಂದಿಗೆ ಉಪಯೋಗಿಸಿದಾಗ ಸ್ವಲ್ಪ ಅಪಾಯಕಾರಿಯಾಗಬಹುದಾದ್ದರಿಂದ ಇವುಗಳಿಗೂ ಮೂರನೇ ವರ್ಗದಲ್ಲಿ ಹೇಳಲಾದ ಮುನ್ನೆಚ್ಚರಿಕೆ ಕ್ರಮಗಳನ್ನೇ ಕೈಗೊಳ್ಳಬೇಕು.

ಆಧುನಿಕ ಬೇಸಾಯದ ಬೆನ್ನುಹತ್ತಿರುವ ಎಲ್ಲ ದೇಶಗಳಲ್ಲಿ ಮಾನವನ ಮೇಲೆ ಒಂದಿಲ್ಲ ಒಂದು ರೀತಿ ಪರಿಣಾಮ ಉಂಟುಮಾಡಿ ಪೀಡೆನಾಶಕಗಳು ಭೀತಿ ಹುಟ್ಟಿಸಿವೆ. ಅವು ವಿಷವಾಗಿ ಪರಿಣಮಿಸಿ ಭುಗಿಲೆದ್ದ ಪ್ರಕರಣಗಳು ಸಾಕಷ್ಟಿವೆ. ಇದಕ್ಕೆ ಕಾರಣ ಆಹಾರದೊಂದಿಗೆ ರಾಸಾಯನಿಕಗಳ ಬೆರಕೆಯಾಗುವುದು. ಅದು ಕೂಡ ಸಾಗಾಟದ ಸಮಯದಲ್ಲೋ, ಶೇಖರಣೆ ಮಾಡುವ ಉಗ್ರಾಣಗಳಲ್ಲೋ ಅಥವಾ ಕೀಟನಾಶಕಗಳಿಂದ ಉಪಚರಿಸಲಾದ ಧಾನ್ಯ, ತರಕಾರಿಗಳನ್ನು ನೇರವಾಗಿ ಬಳಸಿದಾಗಲೂ ಅಕಸ್ಮಾತ್ತಾಗಿ ಆದಂಥವುಗಳು. ಸಿಂಗಾಪೂರ್‌ನಲ್ಲಿ ಹೀಗೆಯೇ ಬೆರಕೆಯಾದ ಬ್ರೆಡ್ ತಿಂದು ಎಷ್ಟೋ ಜನ ಸತ್ತರು. ಕ್ಯಾಂಫೆಕ್ಲೋರ್ ಎಂಬ ಕೀಟನಾಶಕವೊಂದನ್ನು ಸೊಪ್ಪು, ತರಕಾರಿಯ ಮೇಲೆ ಸಿಂಪರಣೆ ಮಾಡಿದ ಮೂರು ದಿನಗಳ ನಂತರ ತಿಂದ ಮನೆ ಮಂದಿಯೆಲ್ಲ ಅಸ್ವಸ್ಥರಾಗಬೇಕಾಯಿತು. ಕ್ಯಾಲಿಫೋರ್ನಿಯಾದಲ್ಲಿ ನಿಕೋಟಿನ್ ಸಲ್ಫೇಟನ್ನು ಇರಬೇಕಾದುದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಸಾಸಿವೆ ಬೆಳೆಗೆ ಸಿಂಪರಣೆ ಮಾಡಿದ್ದರಿಂದ ಅದನ್ನು ಬಳಸಿದ ಹನ್ನೊಂದು ಜನ ಆಸ್ಪತ್ರೆಗೆ ಅಡ್ಡಾಡಬೇಕಾಯಿತು. ೧೯೬೭-೬೮ರಲ್ಲಿ ಅಮೇರಿಕದ ಫ್ಲೋರಿಡಾದಲ್ಲಿ ಆರ್ಗನೋಫಾಸ್ಫೇಟ್ ಗುಂಪಿನ (ಮುಂದಿನ ಪುಟಗಳಲ್ಲಿ ವಿವರಿಸಲಾಗಿದೆ) ಮತ್ತು ಪ್ಯಾರಾಥಿಯಾನ್ ಕೀಟನಾಶಕಗಳು ವಿಷವಾದ ಪರಿಣಾಮವಾಗಿ ೧೨೨ ಜನ ಮೃತಪಟ್ಟರು. ೧೯೬೩ರಲ್ಲಿ ದಾಖಲೆಗಳು ೯೩ ಜನ ವಿವಿಧ ಪೀಡೆನಾಶಕಗಳಿಂದಾಗಿ ಅಸು ನೀಗಿದರೆಂದು ಹೇಳುತ್ತವೆ. ಪೀಡೆನಾಶಕಗಳ ಸುರಕ್ಷಿತ ಬಳಕೆಯ ಬಗ್ಗೆ ಅರಿವು ಮೂಡಿದಂತೆಲ್ಲ ಆಕಸ್ಮಿಕವಾಗಿ ಆಗಬಹುದಾದ ಸಾವು-ನೋವುಗಳು ಕಡಿಮೆಯಾಗುತ್ತ ಹೋದವೆಂದು ಅಮೇರಿಕದ ರಾಷ್ಟ್ರೀಯ ಆರೋಗ್ಯ ಅಂಕಿ-ಸಂಖ್ಯಾ ಕೇಂದ್ರದ ದಾಖಲೆಗಳಿಂದ ತಿಳಿದು ಬರುತ್ತದೆ. ಒಟ್ಟಿನಲ್ಲಿ ಜಗತ್ತಿನಲ್ಲಿ ಪ್ರತಿವರ್ಷ ವಿಷದ ಬೆರಕೆಯಿಂದ ಘಟಿಸುವ ಸಾವುಗಳಲ್ಲಿ ಶೇಕಡಾ ೪.೪ರಷ್ಟು ಕೇವಲ ಪೀಡೆನಾಶಕಗಳಿಂದಲೇ ಸಂಭವಿಸುತ್ತವೆ ಎಂಬುದು ಗಮನಾರ್ಹ. ಇದರಲ್ಲಿ ಕೃಷಿ ರಾಸಾಯನಿಕಗಳನ್ನು ಸೇವಿಸಿ ಆತ್ಮಹತ್ಯೆ ಮಾಡಿಕೊಳ್ಳುವವರ ಪ್ರಮಾಣ ಶೇಕಡಾ ೦.೯!

ಭಾರತದಲ್ಲಿ ಸಂಭವಿಸಿರುವ, ಸಂಭವಿಸುತ್ತಿರುವ ದುರಂತಗಳಿಗೇನೂ ಲೆಕ್ಕವಿಲ್ಲ. ಎಲ್ಲೋ ಸಾಮೂಹಿಕವಾಗಿ ಆದ ವಿಷದ ತಾಂಡವಗಳು ದಾಖಲಾಗಿದ್ದರೂ ಹೊಲಗಳಲ್ಲಿ, ತೋಟಗಳಲ್ಲಿ, ಕೈ ತೋಟಗಳಲ್ಲಿ, ಮನೆಗಳಲ್ಲಿ ಈ ರಾಸಾಯನಿಕಗಳೊಂದಿಗೆ ಕೆಲಸ ಮಾಡುತ್ತಿರುವವರ ಮೇಲಾದ, ಆಗುತ್ತಿರುವ ದುಷ್ಪರಿಣಾಮಗಳ ವ್ಯವಸ್ಥಿತ ದಾಖಲೆಗಳು ಸಿಗುವುದಿಲ್ಲ.

ಕೋಷ್ಟಕ-೨ರಲ್ಲಿರುವಂತೆ ಮೊದಲಿನ ಐದು ದುರ್ಘಟನೆಗಳಿಗೆ ಗೋಧಿಯ ಸಾಗಾಟ ಮಾಡುವಾಗ, ಶೇಖರಿಸುವಾಗ ಬೆರಕೆಯಾದ ವಿಷಗಳು ಕಾರಣವೆಂದು ಹೇಳಲಾಗುತ್ತದೆ. ಧಾನ್ಯಗಳೊಂದಿಗೆ ಇಲ್ಲಿ ಉಲ್ಲೇಖಿಸಲಾದ ಕೀಟ ನಾಶಕಗಳು ಸೇರಿಕೊಂಡು ಅದನ್ನು ತಿಂದವರು ಅಸು ನೀಗಿದರು.

ಕೋಷ್ಟಕ ೨: ಭಾರತದಲ್ಲಿ ಸಾಮೂಹಿಕ ವಿಷಪ್ರಾಶನವಾದ ಘಟನೆಗಳು
ಸ್ಥಳ, ವರ್ಷ, ಪೀಡಿತರ ಸಂಖ್ಯೆ, ಅಸುನೀಗಿದವರ ಸಂಖ್ಯೆ
ಕಾರಣವಾದ ಪೀಡೆನಾಶಕ

೧. ಕೇರಳ ೧೯೫೩ ೧೦೨ ೧೦೨ ಈಥೈಲ್ ಪ್ಯಾರಾಥಿಯಾನ್
೨. ಮಧ್ಯಪ್ರದೇಶ ೧೯೬೭ ೩೫ ೫ ಮ್ಯಾಲಾಥಿಯಾನ್
೩. ಮಧ್ಯ ಪ್ರದೇಶ ೧೯೬೭-೬೮ ೧೨ ೧೨ ಆಲ್ಡ್ರಿನ್, ಗ್ಯಾಮಾಕ್ಸೇನ್

೪. ಉತ್ತರ ಪ್ರದೇಶ ೧೯೭೭ ೫ -- ಎಚ್‌ಸಿಎಚ್
೫. ಉತ್ತರ ಪ್ರದೇಶ ೧೯೭೮ ೨೫೦ ೪ ಎಚ್‌ಸಿಎಚ್
೬. ಮಧ್ಯಪ್ರದೇಶ ೧೯೭೮ -- ೬ ಫಾಸ್‌ಜಿನ್ ಅನಿಲ
೭. ಮಧ್ಯಪ್ರದೇಶ ೧೯೮೪ ೨,೫೦,೦೦೦ ೧೦,೦೦೦ ಮೀಥೈಲ್ ಐಸೋಸಯನೇಟ್

೧೯೮೪ರ 'ಭೋಪಾಲ್ ಅನಿಲ ದುರಂತ' ಪ್ರತಿ ಮಗುವಿಗೂ ಗೊತ್ತು. ಪೀಡೆನಾಶಕಗಳು ತಂದೊಡ್ಡಬಹುದಾದ ದುರಂತಗಳಲ್ಲಿಯೇ ಇದು ಭೀಷಣವಾದುದು. ಮೀಥೈಲ್ ಐಸೋಸಯನೇಟ್ ಎಂಬುದು ಕಾರ್ಬಮೇಟ್ ಗುಂಪಿನ (ಮುಂದಿನ ಪುಟಗಳಲ್ಲಿ ವಿವರಣೆ ಇದೆ) ಕೀಟನಾಶಕಗಳನ್ನು ತಯಾರಿಸುವಲ್ಲಿ ಬೇಕಾಗುವ ಒಂದು ಪ್ರಮುಖ ಘಟಕ. ಆ ದುರಂತದಲ್ಲಿ ಭೋಪಾಲ್ ಹಾಗೂ ಸುತ್ತಮುತ್ತಲಿನ ಪ್ರದೇಶದ ಎರಡೂವರೆ ಲಕ್ಷಕ್ಕೂ ಹೆಚ್ಚು ಜನ ಪೀಡಿತರಾದರು! ಹತ್ತು ಸಾವಿರಕ್ಕೂ ಹೆಚ್ಚು ಜನ ಹುಳುಗಳಂತೆ ಸತ್ತರು! ಆ ಮಾರಕ ರಾಸಾಯನಿಕಕ್ಕೆ ಪ್ರತಿ ತಿಂಗಳೂ ಇನ್ನೂ ಹತ್ತು ಜನ ಸಾಯುತ್ತಿದ್ದಾರೆ. ಬದುಕಿರುವವರ ಗತಿಯಂತೂ ನರಕಸದೃಶವಾಗಿದೆ. ಅವರು ತೀವ್ರವಾದ ಉಸಿರಾಟದ ತೊಂದರೆ, ಮಿದುಳಿಗೆ ಗಾಯ, (ಮಹಿಳೆಯರು) ಋತುಚಕ್ರದ ಏರುಪೇರುಗಳಿಂದ ಬದುಕಬಾರದ ಬದುಕನ್ನು ನಡೆಸುತ್ತಿದ್ದಾರೆ. ಇದಕ್ಕೂ ಭೀಕರವಾದ ಸಂಗತಿಯೆಂದರೆ ಅವರ ದೇಹದ ಪ್ರತಿರೋಧಕ ಶಕ್ತಿ ಹಾಳಾಗಿ ಹೋಗಿರುವುದು. ಇವಿಷ್ಟೇ ಆಗಿ ಅವರು ಸತ್ತು ಹೋದ ಮೇಲೆ ಸಮಸ್ಯೆಗಳೆಲ್ಲ ಬಗೆಹರಿದರೆ ಒಳ್ಳೆಯದಿತ್ತು, ಆದರೆ ಈ ರಾಸಾಯನಿಕ ಅವರ ಅನುವಂಶೀಯ ಗುಣಧರ್ಮಗಳನ್ನೇ ಬದಲಿಸಿದೆ! ಮುಂಬರುವ ಪೀಳಿಗೆಗೆ ಕೂಡ ಇದು ಶಾಪವಾಗಿ ಪರಿಣಮಿಸಲಿದೆ!

## ವಿಷಕ್ಕೆ ಒಡ್ಡಿಕೊಳ್ಳುವವರು

ಪೀಡೆನಾಶಕಗಳ ಸಂಪರ್ಕಕ್ಕೆ ಮೊಟ್ಟಮೊದಲಿಗೆ ಬರುವವರೆಂದರೆ ಪ್ರಯೋಗಶಾಲೆಗಳಲ್ಲಿ ಅವುಗಳನ್ನು ಪರೀಕ್ಷಿಸುವ ವಿಜ್ಞಾನಿಗಳು ಹಾಗೂ ತಂತ್ರಜ್ಞರು. ಆದರೆ ಇಂಥಲ್ಲಿ ಅವರು ಸಾಕಷ್ಟು ಮುಂಜಾಗ್ರತೆ ವಹಿಸುವುದರಿಂದ ಅವರ ಆರೋಗ್ಯದ ಮೇಲೆ ಆಗಬಹುದಾದ ದುಷ್ಪರಿಣಾಮಗಳು ಬಹಳ ಮಟ್ಟಿಗೆ ಕಡಿಮೆಯಾಗುತ್ತವೆ. ಪೀಡೆನಾಶಕವೊಂದು ಪರೀಕ್ಷಿಸಲ್ಪಟ್ಟು ಸಮರ್ಥವಾಗಿದೆ ಎಂದಮೇಲೆ ದೊಡ್ಡ ಪ್ರಮಾಣದಲ್ಲಿ ಅವುಗಳನ್ನು ಕಾರ್ಖಾನೆಗಳಲ್ಲಿ ತಯಾರಿಸಲಾಗುತ್ತದೆ. ಕಾರ್ಖಾನೆಗಳಲ್ಲಿ ರಾಸಾಯನಿಕಗಳ ಸಂಪರ್ಕಕ್ಕೆ ಬರುವವರೆಂದರೆ ಅಲ್ಲಿಯ ಕಾರ್ಮಿಕರು, ಮೇಲ್ವಿಚಾರಕರು, ನಿರ್ವಾಹಕರು ಮುಂತಾದವರಾದರೂ ಅವರ ಆರೋಗ್ಯದ ಬಗ್ಗೆ ವಿಶೇಷ ಎಚ್ಚರಿಕೆಯನ್ನು ತೆಗೆದುಕೊಳ್ಳಲಾಗುತ್ತದೆ. ಆದರೆ ಭೋಪಾಲ್‌ನಲ್ಲಿ ಆದಂತಹ ಆಕಸ್ಮಿಕ ಅವಘಡಗಳು ಸಂಭವಿಸುವ ಅಪಾಯ ಇದ್ದೇ ಇರುತ್ತದೆ. ರಾಸಾಯನಿಕಗಳ ಸಾಗಾಟದಲ್ಲಿ, ಶೇಖರಣೆಯಲ್ಲಿ ಕಾರ್ಮಿಕರು ಅವುಗಳ ಸಂಪರ್ಕಕ್ಕೆ ಬಂದೇ ಬರುತ್ತಾರೆ. ನಿರಂತರವಾಗಿ ಅವರು ಅವುಗಳಿಗೆ ಒಡ್ಡಿಕೊಳ್ಳಬೇಕಾಗುತ್ತದೆ. ದೀರ್ಘಾವಧಿಯಲ್ಲಿ ಅವರ ಮೇಲೆ ದುಷ್ಪರಿಣಾಮಗಳುಂಟಾಗಬಹುದಾದ ಅಪಾಯ ಇದ್ದೇಇದೆ. ಪೀಡೆನಾಶಕಗಳನ್ನು ಬಳಕೆ ಮಾಡುವ ಬಹುತೇಕ ರೈತರು ಬಹುಶಃ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ನಿರ್ಲಕ್ಷ್ಯ ತೋರಿಸುತ್ತಾರೆ ಎಂಬುದು ನಿಜ. ಇದರಿಂದಾಗಿ ಸಿಂಪರಣೆ ಮಾಡುವಾಗ ಅವರು ಅವುಗಳ ಕಬಂಧ ಬಾಹುಗಳಿಗೆ ಬಲಿಯಾಗುವ ಸಂಭವ ಹೆಚ್ಚು. ಗೃಹಿಣಿಯರು, ಆಳುಗಳು, ಮನೆಯಲ್ಲಿದ್ದ ಹುಳ-ಹುಪ್ಪಡಿಗಳನ್ನು ನಿಯಂತ್ರಿಸಲು ರಾಸಾಯನಿಕಗಳನ್ನು ಬಳಸುವುದು ಈಗೀಗ ಹೆಚ್ಚಾಗುತ್ತಿದೆ. ಹೊಲಗಳಲ್ಲಿ ಸ್ಪ್ರೇ ಮಾಡುವಾಗ ಆಗುವುದಕ್ಕಿಂತ ಮನೆಯಲ್ಲಿ ಸಿಂಪರಣೆ ಮಾಡುವಾಗ ಆಗಬಹುದಾದ ಅಪಾಯ ಹೆಚ್ಚು. ಏಕೆಂದರೆ ಮನೆಯಲ್ಲಿ (ಹೊಲದಲ್ಲಿರುವಷ್ಟು ಗಾಳಿಯಾಡುವುದಿಲ್ಲವಾದ್ದರಿಂದ) ರಾಸಾಯನಿಕವನ್ನು ಸಿಂಪಡಿಸುವವರೇ ಅಲ್ಲದೆ ಮನೆಯಲ್ಲಿರುವವರೆಲ್ಲ ಉಸಿರಾಡಿಸಬೇಕಾಗುತ್ತದೆ. ಇನ್ನು ನಾವೆಲ್ಲರೂ ಔಷಧಿಗಳನ್ನು ಸಿಂಪಡಿಸಿ ಬೆಳೆಯಲಾದ ಬೆಳೆ, ತರಕಾರಿ, ಹಣ್ಣು-ಹಂಪಲುಗಳನ್ನು, ಕೀಟನಾಶಕಗಳೊಂದಿಗೆ ಸಂಗ್ರಹಿಸಿ ಇಡಲಾದ ಧಾನ್ಯಗಳನ್ನು ಬಳಸಿಯೇ ಬಳಸುತ್ತೇವೆ. ಇದರೊಂದಿಗೆ ಶೇಷವಾಗುಳಿದ ರಾಸಾಯನಿಕಗಳು ನಮ್ಮ ದೇಹವನ್ನು ಸೇರುತ್ತವೆ. ಅಂದರೆ ಒಂದಲ್ಲ ಒಂದು ರೀತಿಯಲ್ಲಿ ನಾವೆಲ್ಲರೂ ವಿಷಕ್ಕೆ ಒಡ್ಡಿಕೊಳ್ಳುತ್ತಲೇ ಇದ್ದೇವೆ.

## ಪೀಡೆನಾಶಕಗಳ ಬಗ್ಗೆ

ಮಾನವನ ಆರೋಗ್ಯದ ಮೇಲೆ ಕೃಷಿ ರಾಸಾಯನಿಕಗಳು ಅಡ್ಡ ಪರಿಣಾಮ ಬೀರುತ್ತವೆ. ಈ ಲೇಖನದ ಮುಖ್ಯ ಕಾಳಜಿ ಎಂದರೆ ಅವು ಉಂಟು ಮಾಡುವ ತಾತ್ಕಾಲಿಕ ಅಥವಾ ಅಲ್ಪಾವಧಿ ಹಾಗೂ ದೀರ್ಘಾವಧಿ ಪರಿಣಾಮಗಳನ್ನು ಕುರಿತು ಓದುಗರೆಲ್ಲರಿಗೂ ತಿಳಿದಿರಲಿ ಎಂಬುದು. ಸ್ವಲ್ಪವೇ ನಿಷ್ಕಾಳಜಿ ವಹಿಸಿದರೂ ಅವು ಭೀಕರವಾಗಬಲ್ಲವು. ಆದ್ದರಿಂದ ಇವುಗಳನ್ನು ಬಳಸುವವರು ವಿಶೇಷ ಎಚ್ಚರಿಕೆಯನ್ನು ವಹಿಸಬೇಕು. ಅವು ನಮ್ಮ ಆರೋಗ್ಯವನ್ನು ಹದಗೆಡಿಸಲು ಕಾರಣವೆಂದರೆ ಅವುಗಳ ವಿವೇಚನಾರಹಿತ ಬಳಕೆ, ಸಂಗ್ರಹಿಸುವಾಗ ತೋರಿಸುವ ಬೇಜವಾಬ್ದಾರಿ, ಅನುಸರಿಸಬೇಕಾದ ಸುರಕ್ಷತಾ ಕ್ರಮಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ.

ಪೀಡೆನಾಶಕಗಳೆಂದರೆ ಕೀಟ, ಶಿಲೀಂಧ್ರ, ಬ್ಯಾಕ್ಟೀರಿಯಾ (ರೋಗಗಳು) ಕಳೆ ಮುಂತಾದ ಇನ್ನೂ ಅನೇಕ ಕೃಷಿಗೆ ತೊಂದರೆ ಕೊಡುವ ಪೀಡೆಗಳನ್ನು ನಿಯಂತ್ರಿಸುವ ರಾಸಾಯನಿಕಗಳ ಸಮೂಹ ಎಂದು ಈಗಾಗಲೇ ಹೇಳಲಾಗಿದೆ. ಜಗತ್ತಿನಲ್ಲಿ ಸದ್ಯಕ್ಕೆ ೬೦೦ಕ್ಕೂ ಹೆಚ್ಚು ಪೀಡೆನಾಶಕಗಳಿವೆ. ದಿನ-ದಿನವೂ ಮಾರುಕಟ್ಟೆಗೆ ಪ್ರವಾಹದೋಪಾದಿಯಲ್ಲಿ ಬರುತ್ತಲೇ ಇವೆ.

ಕೀಟ ಹಾಗೂ ರೋಗನಾಶಕಗಳನ್ನು ಅವು ಎಸಗುವ ಕ್ರಿಯೆಯ ಸ್ವರೂಪದ ಆಧಾರದ ಮೇಲೆ, ಅವುಗಳಲ್ಲಿರುವ ಪ್ರಧಾನ ಕ್ರಿಯಾತ್ಮಕವಾದ ರಾಸಾಯನಿಕ ಘಟಕಗಳ ಆಧಾರದ ಮೇಲೆ ವರ್ಗೀಕರಿಸಲಾಗಿದೆ. ಇಲ್ಲಿ ಆಯಾ ಗುಂಪುಗಳಲ್ಲಿನ ಕೆಲವು ಪ್ರಮುಖವಾದ ಪೀಡೆನಾಶಕಗಳು, ಅವುಗಳಿಂದಾಗಬಹುದಾದ ತಾತ್ಕಾಲಿಕ ಹಾಗೂ ಖಾಯಂ ಪರಿಣಾಮಗಳು ವಹಿಸಬೇಕಾದ ಎಚ್ಚರಿಕೆ, ಸಾಧ್ಯವಿದ್ದೆಡೆಯೆಲ್ಲ ಚಿಕಿತ್ಸಾ ಕ್ರಮಗಳನ್ನು ಕೊಡಲಾಗಿದೆ.

### ಅ. ಆರ್ಗನೋಕ್ಲೋರೀನ್ ಗುಂಪು

ಈ ಗುಂಪಿನಲ್ಲಿರುವ ಅತ್ಯಂತ ಮುಖ್ಯವಾದ ಕೀಟನಾಶಕಗಳೆಂದರೆ ಡಿಡಿಟ, ಮಿಥಾಕ್ಸಿಕ್ಲೋರ್, ಕ್ಲೋರ್ಡೇನ್, ಆಲ್ಡ್ರಿನ್, ಡೈ ಎಲ್ಡ್ರಿನ್, ಎಂಡ್ರಿನ್, ಹೆಪ್ಟಾಕ್ಲೋರ್, ಎಂಡೋಸಲ್ಫಾನ್, ಕ್ಯಾಂಫೆಕ್ಲೋರ್, ಲಿಂಡೇನ್ ಮುಂತಾದವು.

ಆರ್ಗನೋಕ್ಲೋರಿನ್‌ಗಳು ಬಾಯಿ, ಚರ್ಮ, ಉಸಿರಾಟದ ಮೂಲಕ ದೇಹದೊಳಕ್ಕೆ ಹಾದಿ ಮಾಡಿಕೊಳ್ಳುತ್ತವೆ. ಚರ್ಮ, ಕರುಳಿನ ಮೂಲಕ ರಕ್ತವನ್ನು ಸೇರುತ್ತವೆ. ಕೊಬ್ಬಿನಲ್ಲಿ ಕರಗುವುದರಿಂದ ಶರೀರದಲ್ಲಿ ಬಹಳ ದಿನಗಳವರೆಗೆ ಉಳಿಯುತ್ತವೆ. ಧೂಳಿನ ರೂಪದ ಕೀಟನಾಶಕ ಗಾಳಿಯಲ್ಲಿ ಸೇರಿ ಪುಪ್ಪುಸಗಳ ಮೂಲಕ ಅತ್ಯಂತ ತೀವ್ರವಾಗಿ ಹೀರಲ್ಪಡುತ್ತದೆ. ಇವು ಬಹಳ ದಿನಗಳ ವರೆಗೆ ವಾತಾವರಣದಲ್ಲಿ ಹಾಗೂ ದೇಹದಲ್ಲಿ ವಿಭಜನೆ ಹೊಂದದೆ ಉಳಿದುಕೊಳ್ಳುತ್ತವೆ. ಇವುಗಳ ಮುಖ್ಯ ಪರಿಣಾಮ ಕೇಂದ್ರಿಯ ನರ ವ್ಯವಸ್ಥೆಯನ್ನು ಉದ್ರೇಕಿಸುವುದೇ ಆಗಿದೆ. ದೇಹ ಸೇರಿದ ಕೆಲವೇ ಗಂಟೆಗಳಲ್ಲಿ ತಲೆನೋವು, ದಿಗಿಲು, ಭಯ, ಉದ್ವೇಗಗಳೊಂದಿಗೆ ತಲೆಸುತ್ತು, ವಾಂತಿ, ಸ್ನಾಯುಗಳಲ್ಲಿ ದುರ್ಬಲತೆ, ನಡುಕ ಹಾಗೂ ಸ್ನಾಯು ಸೆಳೆತಗಳು ಉಂಟಾಗುತ್ತವೆ. ಮೊದಲಿಗೆ ತೀವ್ರವಾಗುವ ಉಸಿರಾಟ ಕ್ರಿಯೆ ಬರ-ಬರುತ್ತ ಕ್ಷೀಣವಾಗಿ ಕೊನೆಗೆ ನಿಂತು ಹೋಗಿ ರೋಗಿ ಅಸು ನೀಗಲೂಬಹುದು. ಆದರೆ ಒಂದು ವೇಳೆ ಇವು ಚರ್ಮದ ಮೂಲಕ ದೇಹವನ್ನು ಸೇರಿದ್ದರೆ, ದಿಗಿಲು, ಮಾನಸಿಕ ಗೊಂದಲ ಹಾಗೂ ನಡುಕದಂಥ ಲಕ್ಷಣಗಳಷ್ಟೇ ಕಾಣಬಹುದು. ವಿಷದ ಪ್ರಮಾಣ ಕಡಿಮೆಯಾಗಿದ್ದರೆ ಹಸಿವು ಆಗದೆ ಇರಬಹುದು.

ಚಿಕಿತ್ಸೆ: ಈ ರಾಸಾಯನಿಕಗಳಿಗೆ ಒಂದು ನಿರ್ದಿಷ್ಟವಾದ ಪ್ರತಿವಿಷವಿಲ್ಲ. ಆದರೆ ಲಕ್ಷಣಗಳಿಗನುಸಾರವಾಗಿ ಉಪಚಾರ ಮಾಡಬಹುದು. ಮೂಗು ಹಾಗೂ ಶ್ವಾಸದ ಹಾದಿಯನ್ನು ಮೊದಲು ಸ್ವಚ್ಛಗೊಳಿಸಬೇಕು. ದವಡೆಯ ಸ್ನಾಯು ಸೆಳೆತದಿಂದ ರೋಗಿ ತನ್ನ ನಾಲಿಗೆಯನ್ನು ಕಚ್ಚಿಕೊಳ್ಳದಂತೆ ತಡೆಯಲು ಬಾಯಿಯಲ್ಲಿ ಅರಿವೆಯನ್ನು ಇಡಬಹುದು. ಬಾಯಿಯ ಮೂಲಕ ಕೀಟನಾಶಕ ಒಳಹೋಗಿದ್ದರೆ ಉಪ್ಪಿನ ನೀರನ್ನು ಕುಡಿಸಿ ವಾಂತಿ ಮಾಡಿಸಬೇಕು. ಆದರೆ ಇದಕ್ಕೆ ಎಣ್ಣೆ ಅಥವಾ ಕೊಬ್ಬಿನ ಉಪಯೋಗ ಸರ್ವಥಾ ಸಲ್ಲದು. ಹಾಲನ್ನು ಕೂಡ ಉಪಯೋಗಿಸಬಾರದು. ಏಕೆಂದರೆ ಇವು ಕೊಬ್ಬು ಅಥವಾ ಎಣ್ಣೆಯಲ್ಲಿ ಕರಗಿ ರಕ್ತವನ್ನು ಸೇರುವ ಅಪಾಯವಿರುತ್ತದೆ. ಚರ್ಮ ಹಾಗೂ ಕಣ್ಣುಗಳನ್ನು ನೀರಿನಿಂದ ಸ್ವಚ್ಛವಾಗಿ ತೊಳೆಯಬೇಕು. ಆದಷ್ಟು ಬೇಗನೆ ವೈದ್ಯರ ಕಡೆಗೆ ಒಯ್ಯಬೇಕು. ಮಿದುಳಿನಲ್ಲಿ ಯಾವುದೇ ತೊಂದರೆ ಇಲ್ಲದಿದ್ದರೆ ಪೀಡಿತ ಬೇಗನೇ ಚೇತರಿಸಿಕೊಳ್ಳುತ್ತಾನೆ.

ಈ ಗುಂಪಿನ ಕೆಲವು ಮುಖ್ಯವಾದ ಕೀಟನಾಶಕಗಳ ಬಗ್ಗೆ ಈಗ ಚರ್ಚಿಸೋಣ.

೧. ಡಿಡಿಟಿ:

ಬಹುಶಃ ಡಿಡಿಟಿಯ ಹೆಸರು ಕೇಳದವರು ಯಾರೂ ಇಲ್ಲವೆಂದರೂ ನಡೆದೀತು. ದೇಹದ ತೂಕಕ್ಕೆ ಪ್ರತಿ ಕೆ.ಜಿ. ಆರು ಮಿಲಿಗ್ರ್ಯಾಂನಷ್ಟು ಪುಡಿ ವಿಷವಾಗಲು ಸಾಕು. ಪ್ರತಿ ಕೆಜಿ ದೇಹದ ತೂಕಕ್ಕೆ ೬೦-೫೦೦ ಮಿಲಿಗ್ರ್ಯಾಂನಷ್ಟು ಪುಡಿ ಮರಣಾಂತಿಕವಾಗಬಹುದು. ವಿಷವಾದಾಗ ಆರ್ಗನೋಕ್ಲೋರೀನ್ ಗುಂಪಿನ ಲಕ್ಷಣಗಳನ್ನೆಲ್ಲ ಇದು ಉಂಟುಮಾಡುತ್ತದೆ. ಈ ಗುಂಪಿನಲ್ಲಿ ತಿಳಿಸಲಾದ ಚಿಕಿತ್ಸಾ ಕ್ರಮಗಳನ್ನು ಅನುಸರಿಸಬೇಕು. ದೀರ್ಘಾವಧಿಯ ಪರಿಣಾಮಗಳೆಂದರೆ ಗರ್ಭಿಣಿಯರಲ್ಲಿ ಪ್ಲಾಸೆಂಟಾ ಮತ್ತು ಎದೆಹಾಲಿನ ಮೂಲಕ ಮಗುವಿನ ದೇಹವನ್ನು ಸೇರಬಹುದು. ಇದು ಕ್ಯಾನ್ಸರ್‌ಕಾರಕ ಎನ್ನುವ ವರದಿಗಳಿದ್ದರೂ ಇನ್ನೂ ಅದು ಸ್ಪಷ್ಟವಾಗಿಲ್ಲ.

ಸುರಕ್ಷತೆ: ಇದಕ್ಕೊಂದು ಸಮರ್ಥವಾದ ಪ್ರತಿ ವಿಷವಿಲ್ಲ. ಮೂತ್ರಪಿಂಡ, ಯಕೃತ್ತಿನ ತೊಂದರೆ ಇರುವವರು ಇದನ್ನು ತಪ್ಪಿಸುವುದೇ ಒಳ್ಳೆಯದು. ಡಿಡಿಟಿ ಸಿಂಪಡಿಸಿದ ಹೊಲಗಳಲ್ಲಿ ೨೪ ಗಂಟೆಗಳವರೆಗಾದರೂ ಅಡ್ಡಾಡದೇ ಇರುವುದು ಉತ್ತಮ.

೨. ಆಲ್ಡ್ರಿನ್ ಡೈ ಎಲ್ಡ್ರಿನ್, ಎಂಡ್ರಿನ್

ಈ ಕೀಟನಾಶಕಗಳು ತೀವ್ರವಾದ ವಿಷಗಳು. ಅಶಕ್ತರು ಬಹಳ ಬೇಗನೇ ಇವುಗಳಿಗೆ ಸ್ಪಂದಿಸುತ್ತಾರೆ. ಆರ್ಗನೋಕ್ಲೋರೀನ್ ಗುಂಪಿನ ಎಲ್ಲ ಲಕ್ಷಣಗಳನ್ನು ವಿಷವಾದಾಗ ಇವು ತೋರಿಸುತ್ತವೆ. ಮತ್ತೆ ಮತ್ತೆ ಆಲ್ಡ್ರಿನ್ ಅಥವಾ ಡೈಎಲ್ಡ್ರಿನ್‌ಗೆ ಒಡ್ಡಿಕೊಳ್ಳುವುದರಿಂದ ತೀವ್ರ ಸ್ನಾಯು ಸೆಳೆತ ಉಂಟಾಗುತ್ತದೆ. ಕೆಲವೊಮ್ಮೆ ಯಾವುದೇ ಇತರ ಲಕ್ಷಣಗಳಿಲ್ಲದೆ, ಮೂಳೆಗಳಲ್ಲಿ ಬಿರುಕು ಕಾಣಿಸಿಕೊಳ್ಳಬಹುದು. ದೀರ್ಘಾವಧಿಯಲ್ಲಿ ಪ್ರಾಣಿಗಳ ಮೇಲೆ ನಡೆಸಲಾದ ಪ್ರಯೋಗಗಳಿಂದ ಡೈ ಎಲ್ಡ್ರಿನ್ ಕ್ಯಾನ್ಸರ್‌ಕಾರಕ ಎಂಬುದು ದೃಢಪಟ್ಟಿದೆ. ಆಲ್ಡ್ರಿನ್ ಹಾಗೂ ಎಂಡ್ರಿನ್‌ಗಳು ಸ್ತ್ರೀಯ ಫಲವತ್ತತೆಯನ್ನು ಕಡಿಮೆ ಮಾಡುವುದಾಗಿ ಸಂಶಯಿಸಲಾಗಿದೆ.

ಚಿಕಿತ್ಸೆ: ಎಂಡ್ರಿನ್‌ನಿಂದ ವಿಷವಾದದ್ದಕ್ಕೆ ಬಾರ್ಬಿಚುರೇಟ್‌ನಿಂದ ಉಪಚರಿಸುತ್ತಾರೆ. ಇತರ ಚಿಕಿತ್ಸಾ ಕ್ರಮಗಳು



ಹಿಂದೆ ತಿಳಿಸಿದಂತೆಯೇ ಇವೆ.

ಸುರಕ್ಷತೆ: ಇವುಗಳನ್ನು ಯಾವುದೇ ಕಾರಣಕ್ಕೂ ಕುಡಿಯುವ, ಬಳಸುವ ನೀರಿನ ಸಮೀಪ ಕೂಡ ಇಡಬಾರದು. ಆಹಾರ ಬೆಳೆಗಳ ಮೇಲೆ ಇವುಗಳನ್ನು ಬಳಸದೇ ಇರುವುದೇ ಒಳ್ಳೆಯದು. ಗರ್ಭಿಣಿಯರು ಇವುಗಳ ಸಮೀಪ ಕೂಡ ಹೋಗಬಾರದು.

೩. ಕ್ಲೋರ್ಡೇನ್– ಆರು ಗ್ರಾಂನಷ್ಟು ಔಷಧಿ ದೇಹ ಸೇರಿದರೆ ಸ್ಪ್ರೇ ಮಾಡುವ ರೈತನ ಗತಿ ಮುಗಿದಂತೆಯೇ. ಚರ್ಮದ ಮೇಲೆ ಈ ರಾಸಾಯನಿಕ ಚೆಲ್ಲಿದುದರಿಂದ ಎಷ್ಟೋ ಕೃಷಿಕರು ಅಸುನೀಗಿದ ನಿದರ್ಶನಗಳಿವೆ. ಕುಡಿತದ ಚಟವಿರುವವರು ಹಾಗೂ ಯಕೃತ್ತಿನ ತೊಂದರೆ ಇರುವವರು ಈ ವಿಷಕ್ಕೆ ಬಲಿಯಾಗುತ್ತಾರೆ. ಆರ್ಗನೋಕ್ಲೋರೀನ್‌ಗಳು ಉಂಟುಮಾಡುವ ಲಕ್ಷಣಗಳನ್ನು ಇದು ತೋರಿಸುತ್ತದೆ. ಇದು ದೇಹದಲ್ಲಿ ಬಹಳ ದಿನಗಳವರೆಗೆ ಉಳಿಯುವುದರಿಂದ ಯಕೃತ್ತಿನ ಅಂಗಾಂಶಗಳನ್ನು ಹಾಳು ಮಾಡುತ್ತದಲ್ಲದೆ ಪ್ರಾಣಿಗಳ ಮೇಲೆ ನಡೆಸಲಾದ ಸಂಶೋಧನೆಗಳಿಂದ ಯಕೃತ್ತಿನ ಕ್ಯಾನ್ಸರನ್ನುಂಟುಮಾಡುತ್ತದೆ ಎಂದು ಸಂಶಯಿಸಲಾಗಿದೆ.

ಚಿಕಿತ್ಸೆ: ಉಳಿದ ಆರ್ಗನೋಕ್ಲೋರೀನ್‌ಗಳಂತೆ.

ಸುರಕ್ಷತೆ: ಇದಕ್ಕೊಂದು ಪ್ರತಿವಿಷ ಇನ್ನೂ ಗೊತ್ತಾಗಿಲ್ಲ. ಇದರ ಬಳಕೆಯನ್ನು ಮಾಡದಿರುವುದೇ ಒಳ್ಳೆಯದು. ಈ ರಾಸಾಯನಿಕವನ್ನು ಸಿಂಪಡಿಸಲಾದ ಕ್ಷೇತ್ರದಿಂದ ೨೪ ತಾಸುಗಳವರೆಗೆ ದೂರವಿರಬೇಕು.

೪. ಎಂಡೋಸಲ್ಫಾನ್– ಇದೊಂದು ಅತ್ಯಂತ ಸಾಮಾನ್ಯವಾದ, ಬಹುಶಃ ಎಲ್ಲರಿಗೂ ಗೊತ್ತಿರಬಹುದಾದ ಕೀಟನಾಶಕ. ವಿವಿಧ ಬೆಳೆಗಳ ಮೇಲೆ ಬರುವ ಬಗೆಬಗೆಯ ಹುಳುಗಳನ್ನು ನಿಯಂತ್ರಿಸಲು ಇದನ್ನು ಉಪಯೋಗಿಸಲಾಗುತ್ತದೆ. ಬಾಯಿ, ಚರ್ಮ ಹಾಗೂ ಉಸಿರಾಟದ ಮೂಲಕ ಶರೀರವನ್ನು ಸೇರಿ ವಿಶೇಷವಾಗಿ ಪ್ರೋಟೀನ್ ಕೊರತೆಯಿಂದ ಬಳಲುವವರ ಮೇಲೆ ಬಹಳ ಬೇಗನೇ ಪರಿಣಾಮವನ್ನುಂಟುಮಾಡುತ್ತದೆ. ಈ ವಿಷದ ಲಕ್ಷಣಗಳೆಂದರೆ ತಲೆನೋವು, ಹಸಿವೆ ಆಗದೆ ಇರುವುದು, ತಾತ್ಕಾಲಿಕವಾಗಿ ಕಿವುಡುತನ ಉಂಟಾಗುವುದು. ಕಲಬೆರಕೆಯಾದ, ಎಂಡೋಸಲ್ಫಾನ್‌ನಿಂದ ಉಪಚರಿಸಲ್ಪಟ್ಟ ಆಹಾರ ಧಾನ್ಯಗಳನ್ನು ತಿನ್ನಲು ಬಳಸಿದಾಗ ವಿಷವಾಗುವ ಸಾಧ್ಯತೆಗಳು ಹೆಚ್ಚು. ಈ ರಾಸಾಯನಿಕ ಅತ್ಯಂತ ಬೇಗನೇ ವಿಭಜನೆಗೊಂಡು ದೇಹದಿಂದ ಹೊರಹೋಗುತ್ತದಾದ್ದರಿಂದ ದೀರ್ಘಾವಧಿಯಲ್ಲಿ ಮಾನವನಿಗೆ ಯಾವುದೇ ತೊಂದರೆ ಇಲ್ಲ.

ಚಿಕಿತ್ಸೆ: ಇತರ ಆರ್ಗನೋಕ್ಲೋರಿನ್‌ಗಳಂತೆ.

ಸುರಕ್ಷತೆ: ಇದಕ್ಕೊಂದು ಪ್ರತಿವಿಷವಿಲ್ಲ. ಯಕೃತ್ತು ಹಾಗೂ ಮೂತ್ರಪಿಂಡಗಳಲ್ಲಿ ತೊಂದರೆ ಇರುವವರು ಇದರೊಂದಿಗೆ ಕೆಲಸ ಮಾಡಬಾರದು. ಇದನ್ನು ಸ್ಪ್ರೇ ಮಾಡಿದ ಹೊಲಗಳಿಂದ ಸುಮಾರು ಎರಡು ದಿನಗಳಾದರೂ ದೂರ ಇರುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು.

೫. ಲಿಂಡೇನ್– ಈ ಗುಂಪಿನ ಬಹಳ ಮಾರಕವಾದ ರಾಸಾಯನಿಕ. ವಿಶೇಷವಾಗಿ ಅಪೌಷ್ಟಿಕತೆ ಹಾಗೂ ಪ್ರೊಟೀನ್ ಕೊರತೆಯಿರುವವರು ಬಹಳ ಬೇಗನೇ ಈ ವಿಷದ ದುಷ್ಪರಿಣಾಮಗಳಿಗೆ ಬಲಿಯಾಗುತ್ತಾರೆ. ಇದರಿಂದ ಕಣ್ಣು, ಚರ್ಮ ಹಾಗೂ ಉಸಿರಾಟದ ಅಂಗಗಳಲ್ಲಿ ತೀವ್ರವಾದ ಉರಿತ ಉಂಟಾಗುತ್ತದೆ. ಇದು ಉಂಟುಮಾಡುವ ದೀರ್ಘಾವಧಿಯ ಪರಿಣಾಮಗಳು ನಿಜಕ್ಕೂ ಭಯಂಕರವಾಗಿವೆ. ಲಿಂಡೇನ್ ಕೊಬ್ಬಿನಂಶವಿರುವ ದೇಹದ ಭಾಗಗಳಷ್ಟೇ ಅಲ್ಲದೆ ಯಕೃತ್ತು ಹಾಗೂ ಮಿದುಳಿನಲ್ಲಿ ಶೇಖರವಾಗಿ ಬಹಳ ದಿನಗಳವರೆಗೆ ಉಳಿಯುತ್ತದೆ. ಹಾಲುಣಿಸುವ ತಾಯಂದಿರ ಎದೆಹಾಲಿನ ಮೂಲಕ ಇದು ಶಿಶುವಿನ ಕೋಮಲ ಶರೀರವನ್ನು ಸೇರುತ್ತದೆ. ಯಕೃತ್ತು ಹಾಗೂ ಥೈರಾಯ್ಡ್ ಗ್ರಂಥಿಗಳಿಗೆ ಕ್ಯಾನ್ಸರ್ ಅಂಟಸಬಹುದು ಎಂದು ತಿಳಿದುಬಂದಿದೆ. ಭ್ರೂಣದ ಮೇಲೆ ಕೆಟ್ಟ ಪರಿಣಾಮ ಬೀರಿ ದೇಹದ ರೋಗ ನಿರೋಧಕ ಶಕ್ತಿಯನ್ನೇ ನಾಶಪಡಿಸುತ್ತದೆ.

ಚಿಕಿತ್ಸೆ ಹಾಗೂ ಸುರಕ್ಷತೆ: ಇತರ ಆರ್ಗನೋಕ್ಲೋರೀನ್‌ಗಳಿಗಿರುವಂತೆ.

ಬ. ಆರ್ಗನೋಫಾಸ್ಫರಸ್ ಗುಂಪು:

ಈ ಗುಂಪಿನ ಸಂಯುಕ್ತಗಳು ಸಾಮಾನ್ಯವಾಗಿ ಕೀಟ ಹಾಗೂ ಸಸ್ತನಿಗಳಿಗೆ ಬಹಳ ಪ್ರಬಲವಾದ ವಿಷಗಳು. ದೇಹದ ಒಳಸೇರಿ ವಿಷವುಂಟಾಗುವ ಪ್ರಾಥಮಿಕ ಲಕ್ಷಣಗಳೆಂದರೆ ಹೊಟ್ಟೆ ತೊಳಸಿದಂತಾಗಿ ವಾಂತಿಯಾದಂತಾಗು



ವುದು, ತಲೆ ಸುತ್ತು, ತಲೆನೋವು, ಬಲಹೀನತೆ, ಮಾನಸಿಕ ದಿಗ್ಭ್ರಾಂತಿ ಮತ್ತು ಸ್ನಾಯುಗಳಲ್ಲಿನ ಹೊಂದಾಣಿಕೆ ತಪ್ಪುವುದು. ನಂತರ ವಾಂತಿ, ಭೇದಿ, ಸ್ನಾಯು ಸೆಳೆತ, ವಿಪರೀತ ಬೆವರುವಿಕೆ ಕಂಡುಬರುತ್ತವೆ. ತೀವ್ರವಾಗಿ ವಿಷವಾದಾಗಿನ ಸಂದರ್ಭಗಳಲ್ಲಿ ಪಾರ್ಶ್ವವಾಯು ಬಡಿದು ರೋಗಿ ಪ್ರಜ್ಞಾಹೀನನಾಗಿ ಸಾಯುವ ಸಂಬವವೂ ಉಂಟು.

ಚಿಕಿತ್ಸೆ– ಆರ್ಗನೋಫಾಸ್ಫರಸ್‌ಗಳಿಗೆ ತುರ್ತಾಗಿ ವೈದ್ಯಕೀಯ ಚಿಕಿತ್ಸೆ ಆಗಬೇಕು. ರೋಗಿಗೆ ತುರ್ತಾಗಿ ವಾಂತಿ ಮಾಡಿಸಿ ವೈದ್ಯರ ಬಳಿಗೆ ಕರೆದೊಯ್ಯಬೇಕು. ಸಾಮಾನ್ಯವಾಗಿ ಈ ಗುಂಪಿನ ಸಂಯುಕ್ತಗಳಿಗೆ ಪ್ರತಿವಿಷವಾಗಿ ಅಟ್ರೋಪಿನ್‌ಅನ್ನು ಬಳಸಲಾಗುತ್ತದೆ. ಹತ್ತಿಪ್ಪತ್ತು ನಿಮಿಷಗಳ ಅಂತರದಲ್ಲಿ ೨ ರಿಂದ ೧೦ ಮಿಲಿಗ್ರಾಂ ಅಟ್ರೊಪಿನ್ ಇಂಜೆಕ್ಷನ್ ಮಾಡಲು ವೈದ್ಯರು ಶಿಫಾರಸು ಮಾಡುತ್ತಾರೆ. ಒಂದು ದಿನದಲ್ಲಿ ನೂರು ಮಿಲಿಗ್ರಾಂನಷ್ಟು ಔಷಧವನ್ನು ಬಳಸಬೇಕಾಗುತ್ತದೆ. ಅಟ್ರೋಪಿನ್ ಪ್ರಮಾಣ ಹೆಚ್ಚಾದರೆ ನಡೆದೀತು. ಆದರೆ ಕಡಿಮೆಯಾದರೆ ಮರಣಾಂತಿಕವಾಗಬಹುದು. ಆಕ್ಸಿಮ್ ಎಂಬ ಔಷಧಿಯನ್ನು ಕೂಡ ಪ್ರತಿವಿಷವಾಗಿ ಬಳಸಲಾಗುತ್ತದೆ.

ಸುರಕ್ಷತೆ: ಸಾಮಾನ್ಯ ಸುರಕ್ಷತಾ ಕ್ರಮ (ಮುಂದಿನ ಪುಟಗಳಲ್ಲಿದೆ)ಗಳನ್ನು ಅನುಸರಿಸಬೇಕು. ಸರಿಯಾದ ಸಂರಕ್ಷಣಾ ಪರಿಕರಗಳಿಲ್ಲದಿದ್ದರೆ ಸಿಂಪರಣೆ ಮಾಡಲೇಬಾರದು.

೧. ಪ್ಯಾರಾಥಿಯಾನ್: ಇದೊಂದು ಕೀಟ ಹಾಗೂ ಜೇಡನಾಶಕ ಔಷಧಿ. ಭಯಂಕರವಾದ ವಿಷ. ವಿಶೇಷವಾಗಿ ಪ್ರೊಟೀನ್ ಕೊರತೆ ಇರುವವರಲ್ಲಿ ಇದರ ತೀವ್ರತೆ ಹೆಚ್ಚು. ಬಾಯಿ ಹಾಗೂ ಚರ್ಮದ ಮೂಲಕ ದೇಹ ಪ್ರವೇಶ ಮಾಡುತ್ತದೆ. ಎಲ್ಲ ಕೃಷಿ ಪೀಡೆನಾಶಕಗಳ ಪೈಕಿ ಇದೇ ಭಾರೀ ಮರಣಾಂತಿಕ ಸಂಯುಕ್ತ. ಮಧ್ಯ ಅಮೇರಿಕದಲ್ಲಿ ರಾಸಾಯನಿಕಗಳಿಂದ ಉಂಟಾಗುವ ಶೇಕಡಾ ೮೦ರಷ್ಟು ಸಾವುಗಳಲ್ಲಿ ಇದರ ಪಾಲಿದೆಯೆನ್ನುವುದರಲ್ಲಿ ಅತಿಶಯೋಕ್ತಿಯಿಲ್ಲ. ಇದನ್ನು ಸ್ಪ್ರೇ ಮಾಡುವಾಗ, ಸಾಗಾಟದ ಸಮಯದಲ್ಲಿ ಆಹಾರ ಪದಾರ್ಥಗಳಲ್ಲಿ ಬೆರೆತು ಅನಾಹುತಗಳು

ಸಂಭವಿಸಬಹುದು. ಇದನ್ನು ದೇಹ ಕೂಡಿಟ್ಟುಕೊಳ್ಳುವುದಿಲ್ಲವಾದ್ದರಿಂದ ದೀರ್ಘಾವಧಿಯಲ್ಲಿ ಯಾವುದೇ ತೊಂದರೆಗಳಿಲ್ಲ.

ಚಿಕಿತ್ಸೆ: ಆರ್ಗನೋಫಾಸ್ಫರಸ್‌ಗಳಿಗೆ ಸೂಚಿಸಿದಂತೆ.

ಸುರಕ್ಷತೆ: ಸರಿಯಾದ ಸಂರಕ್ಷಣಾ ಪರಿಕರಗಳಿಲ್ಲದೆ ಇದನ್ನು ಸ್ಪ್ರೇ ಮಾಡಲೇಬಾರದು. ಸಿಂಪರಣೆ ಮಾಡಲ್ಪಟ್ಟ ಹೊಲಗಳಲ್ಲಿ ಕೆಲವು ದಿನಗಳ ವರೆಗಾದರೂ ಅಡ್ಡಾಡಬಾರದು.

೨. ಮೋನೋಕ್ರೋಟೋಫಾಸ್- ಇದೊಂದು ಸಾಮಾನ್ಯವಾದ ಕೀಟನಾಶಕ. ನಮ್ಮ ಎಲ್ಲ ರೈತರು ಇದನ್ನು ಯಾವತ್ತೂ ಉಪಯೋಗ ಮಾಡಿಯೇ ಮಾಡುತ್ತಾರೆ. ಕೈ ತೋಟ, ಹೂದೋಟಗಳಲ್ಲಿಯೂ ಇದರ ಬಳಕೆ ಹೆಚ್ಚು. ಬಾಯಿ, ಮೂಗು ಹಾಗೂ ಚರ್ಮದ ಮೂಲಕ ದೇಹದ ಒಳಸೇರಿ ದುಷ್ಪರಿಣಾಮ ಉಂಟುಮಾಡುತ್ತದೆ. ಇತರ ಆರ್ಗನೋಫಾಸ್ಫರಸ್‌ಗಳಂತೆಯೇ ಲಕ್ಷಣಗಳನ್ನುಂಟುಮಾಡುತ್ತದೆ. ದೀರ್ಘಾವಧಿಯಲ್ಲಿ ಈ ಕೀಟನಾಶಕದಿಂದ ಯಾವುದೇ ತೊಂದರೆ ಇಲ್ಲ.

ಚಿಕಿತ್ಸೆ ಹಾಗೂ ಸುರಕ್ಷತೆ: ಆರ್ಗನೋಫಾಸ್ಫರಸ್‌ಗಳಿಗೆ ಸೂಚಿಸಿದಂತೆ.

೩. ಮ್ಯಾಲಾಥಿಯಾನ್: ಪ್ಯಾರಾಥಿಯಾನ್‌ಗೆ ಹೋಲಿಸಿದರೆ ಇದು ನಿರುಪದ್ರವಿಯಾದ ಕೀಟ ಹಾಗೂ ಜೇಡನಾಶಕ. ಆದರೆ ಸುಮಾರು ನಾಲ್ಕೈದು ಗ್ರಾಂನಷ್ಟು ಪುಡಿ ಬಾಯಿಯ ಮೂಲಕ ಹೊಟ್ಟೆ ಸೇರಿದರೆ ಸಾವಿಗೆ ಆಮಂತ್ರಣ ನೀಡಿದಂತೆಯೇ. ಇದು ಉಂಟುಮಾಡುವ ಚಿಹ್ನೆಗಳು ಈ ಗುಂಪಿನ ಇತರ ರಾಸಾಯನಿಕಗಳುಂಟು ಮಾಡುವ ಪರಿಣಾಮಗಳನ್ನು ಹೋಲುತ್ತದೆ. ದೀರ್ಘಾವಧಿಯ ಬಳಕೆಯಿಂದ ಹೆದರುವಂಥ ಸಮಸ್ಯೆಗಳಾಗುವುದಿಲ್ಲ.

ಚಿಕಿತ್ಸೆ: ಆರ್ಗನೋಫಾಸ್ಫರಸ್‌ಗಳಿಗೆ ಸೂಚಿಸಿದಂತೆ.

ಸುರಕ್ಷತೆ: ಇದರಿಂದ ಉಪಚರಿಸಲ್ಪಟ್ಟ ಬೆಳೆಗಳಿಂದ ಒಂದು ದಿನವಾದರೂ ದೂರವಿರುವುದು ಒಳ್ಳೆಯದು.

೪. ಡೈ ಮೀಥೋಯೇಟ್: ಇದೊಂದು ಕೀಟ ಹಾಗೂ ಜೇಡನಾಶಕ. ಇದು ಎಷ್ಟು ಅಪಾಯಕಾರಿ ಎಂದರೆ ಕೇವಲ ಕಾಲು ಗ್ರಾಂನಷ್ಟು ರಕ್ತ ಸೇರಿದರೂ ಮರಣವನ್ನುಂಟು ಮಾಡುವಷ್ಟು. ಬಹಳ ಹೊತ್ತು ದೇಹದಲ್ಲಿ ಉಳಿಯುವುದಿಲ್ಲ. ಬೇಗನೇ ವಿಸರ್ಜಿಸಲ್ಪಡುವುದರಿಂದ ದೀರ್ಘಾವಧಿಯಲ್ಲಿ ದುಷ್ಪರಿಣಾಮಗಳು ಇಲ್ಲವೆಂದರೂ ನಡೆದೀತು.

ಚಿಕಿತ್ಸೆ ಹಾಗೂ ಸುರಕ್ಷತೆ: ಆರ್ಗನೋಫಾಸ್ಫರಸ್‌ಗಳಿಗೆ ಇರುವಂತೆ.

## ಕ. ಕಾರ್ಬಾಮೇಟ್ ಗುಂಪು

ಈ ಗುಂಪಿನ ರಾಸಾಯನಿಕಗಳು ಬಹಳ ಶಕ್ತಿಯುತವಾಗಿದ್ದು, ತೀವ್ರವಾಗಿ ಕ್ರಿಯೆಗಳಲ್ಲಿ ತೊಡಗಿ, ಬೇಗ ಪರಿಣಾಮವನ್ನುಂಟುಮಾಡುವ ಸಾಮರ್ಥ್ಯ ಹೊಂದಿವೆ. ಸಸ್ತನಿಗಳಿಗೆ ಬಹಳ ವಿಷಕಾರಿಯಾದವುಗಳು. ಬಾಯಿಯ ಮೂಲಕ ದೇಹ ಸೇರಿದ ಕೆಲವೇ ಕ್ಷಣಗಳಲ್ಲಿ ವಿಷದ ಬಾಧೆಯ ಅನುಭವವಾಗುತ್ತದೆ. ಇವುಗಳಿಂದ ತಲೆನೋವು, ತಲೆಸುತ್ತು, ವಾಂತಿ, ದೃಷ್ಟಿ ಮಂಜಾಗುವುದು, ವಿಪರೀತ ಬೆವರುವಿಕೆ, ಬಾಯಿಯಲ್ಲಿ ಜೊಲ್ಲು, ನಡುಕ, ಸ್ನಾಯು ಸೆಳೆತ ಮುಂತಾದ ಲಕ್ಷಣಗಳು ತೀವ್ರವಾಗಿ ಗೋಚರಿಸುತ್ತವೆ. ಆದರೆ ಇವೆಲ್ಲ ಕೇವಲ ಸ್ವಲ್ಪ ಹೊತ್ತಿನವರೆಗೆ ಮಾತ್ರ. ಆರ್ಗನೋಫಾಸ್ಫರಸ್ ರಾಸಾಯನಿಕಗಳಿಗಿಂತ ಬೇಗನೇ ಇವುಗಳ ಪರಿಣಾಮಗಳು ತಹಬಂದಿಗೆ ಬರುತ್ತವೆ.

ಕಾರ್ಬಾಮೇಟ್‌ಗಳು ಎಷ್ಟು ಬೇಗ ದೇಹದೊಳಕ್ಕೆ ಹೀರಲ್ಪಡುತ್ತವೆಯೋ ಅಷ್ಟೇ ಬೇಗನೇ ಹೊರದೂಡಲ್ಪಡುತ್ತವೆ. ದೀರ್ಘಾವಧಿಯಲ್ಲಿ ಇವು ದೇಹದಲ್ಲಿ ಶೇಖರಗೊಳ್ಳುವ ಸಾಧ್ಯತೆಗಳಿಲ್ಲ. ಆದ್ದರಿಂದ ತಾತ್ಕಾಲಿಕವಾಗಿ ಇವು ಭಯಂಕರವಾಗಿ ಕಂಡರೂ ಪದೇ-ಪದೇ ಇವುಗಳಿಗೆ ಒಡ್ಡಿಕೊಳ್ಳುವುದರಿಂದ ಅಂಥ ಭಯಾನಕ ದುಷ್ಪರಿಣಾಮಗಳೇನೂ ಕಂಡುಬಂದಿಲ್ಲ.

ಚಿಕಿತ್ಸೆ: ಕಾರ್ಬಾಮೇಟ್‌ಗಳಿಂದ ವಿಷವುಂಟಾದರೆ ೧ ರಿಂದ ೨ ಮಿಲಿಗ್ರಾಂನಷ್ಟು ಅಟ್ರೋಪಿನ್ (ಸಲ್ಫೇಟ್) ಔಷಧಿಯನ್ನು ಶಿಫಾರಸು ಮಾಡುತ್ತಾರೆ. ಇದು ಕಾರ್ಬಾಮೇಟ್‌ಗಳಿಗೆ ಪ್ರತಿವಿಷವಲ್ಲ. ಆದರೆ ವಿಷದ ಲಕ್ಷಣಗಳ ತೀವ್ರತೆಯನ್ನು ಕಡಿಮೆಗೊಳಿಸಿ ಪರಿಹಾರ ನೀಡುತ್ತದೆ.

ಸುರಕ್ಷತೆ: ಮೂತ್ರಪಿಂಡ ಮತ್ತು ಯಕೃತ್ತಿನ ರೋಗಗಳಿಂದ ನರಳುತ್ತಿರುವವರು ಮಾತ್ರ ಇವುಗಳಿಂದ

ದೂರವಿರುವುದು ಉತ್ತಮ.

೧. ಕಾರ್ಬರಿಲ್: ಕಾರ್ಬಮೇಟ್ ಗುಂಪಿನ ಅತ್ಯಂತ ಪ್ರಮುಖವಾದ ಕಾರ್ಬರಿಲ್ ಒಂದು ಪರಿಣಾಮಕಾರಿಯಾದ ಕೀಟನಾಶಕ ಔಷಧಿ. ಬಾಯಿ, ಚರ್ಮ ಅಥವಾ ಮೂಗಿನ ಮೂಲಕವಾಗಲಿ ಕೇವಲ ಕಾಲು ಗ್ರಾಂನಷ್ಟು ಔಷಧಿ ದೇಹದ ಒಳಸೇರಿದರೆ ಅಪಾಯಕಾರಿ ಪರಿಣಾಮ ಬೀರುತ್ತದೆ. ಪ್ರೊಟೀನ್ ಕೊರತೆಯಿಂದ ಬಳಲುವವರಲ್ಲಿ ದುಷ್ಪರಿಣಾಮದ ತೀವ್ರತೆ ಮತ್ತೂ ಹೆಚ್ಚಾಗಿರುತ್ತದೆ. ಆದರೆ ಮೂತ್ರದ ಮೂಲಕ ಇದು ಬೇಗನೇ ವಿಸರ್ಜಿಸಲ್ಪಡುವುದರಿಂದ ರೋಗಿ ವೇಗವಾಗಿ ಮೊದಲಿನ ಸ್ಥಿತಿಗೆ ಬರುತ್ತಾನೆ. ಸುದೀರ್ಘವಾಗಿ ಬಳಸುವುದರಿಂದ ಯಾವುದೇ ತೊಂದರೆಗಳಿಲ್ಲ.

ಚಿಕಿತ್ಸೆ: ವಿಷ ದೇಹ ಸೇರಿದರೆ ಒಡನೆಯೇ ಸೋಡಾ ದ್ರಾವಣದಿಂದ ರೋಗಿಯ ಹೊಟ್ಟೆಯನ್ನು ತೊಳೆಸಬೇಕು.

ಸುರಕ್ಷತೆ: ಕಾರ್ಬಮೇಟ್ ಗುಂಪಿಗೆ ಸೂಚಿಸಿದಂತೆ.

೨. ಕಾರ್ಬೋಫ್ಯುರಾನ್- ಇದೊಂದು ಕೀಟ, ಜೇಡ ಹಾಗೂ ನಿಮ್ಯಾಟೋಡ್ ನಾಶಕ. ಕಾರ್ಬಮೇಟ್ ಗುಂಪಿನ ಎಲ್ಲ ಲಕ್ಷಣಗಳನ್ನು ವಿಷವಾದಾಗ ಇದು ಉಂಟುಮಾಡುತ್ತದೆ. ದೀರ್ಘ ಉಪಯೋಗದಿಂದ ಅಂಥ ಯಾವ ದುಷ್ಪರಿಣಾಮಗಳು ಕಂಡುಬಂದಿಲ್ಲ.

ಚಿಕಿತ್ಸೆ: ಇದರ ಹರಳುಗಳು ಹೊಟ್ಟೆ ಸೇರಿದ್ದರೆ ವಾಂತಿ ಮಾಡಿಸಬೇಕು. ಕಣ್ಣುಗಳಿಗೆ ತಗುಲಿದ್ದರೆ ಒಂದು ಹನಿ ಹೋಮಾಟ್ರೋಪಿನ್ ಔಷಧಿಯನ್ನು ಶಿಫಾರಸು ಮಾಡಲಾಗಿದೆ.

ಸುರಕ್ಷತೆ: ಚರ್ಮಕ್ಕೆ ಸೋಂಕದಂತೆ, ಉಸಿರಿನ ಮೂಲಕ ಒಳಸೇರದಂತೆ ಎಚ್ಚರವಹಿಸಬೇಕು. ಹಾಗೂ ಇತರ ಮುಂಜಾಗ್ರತಾ ಕ್ರಮ ಕೈಗೊಳ್ಳಬೇಕು.

## ಡ. ತಾಮ್ರದ ಸಂಯುಕ್ತಗಳು

ತಾಮ್ರಯುಕ್ತ ಸಂಯುಕ್ತಗಳಾದ ಸಲ್ಫೇಟ್, ಕಾರ್ಬೋನೇಟ್ ಆಕ್ಸಿಕ್ಲೋರೈಡ್, ನ್ಯಾಫ್ತನೇಟ್, ಹೈಡ್ರಾಕ್ಸೈಡ್, ಆಕ್ಸಿ-ಕ್ವಿನೋಲೇಟ್‌ಗಳನ್ನು ಮುಖ್ಯವಾಗಿ ಬೆಳೆಗಳಿಗೆ ರೋಗ ತರುವ ಶಿಲೀಂಧ್ರ, ಬ್ಯಾಕ್ಟೀರಿಯಾಗಳನ್ನು ನಿಯಂತ್ರಿಸುವಲ್ಲಿ ಬಳಸಲಾಗುತ್ತದೆ.

ಇವೆಲ್ಲವುಗಳಲ್ಲಿ ತಾಮ್ರದ ಕಾರ್ಬೋನೇಟ್ ಅತ್ಯಂತ ಭಯಂಕರವಾದ ವಿಷವಾಗಿದೆ. ಇವು ಬಾಯಿ ಅಥವಾ ಉಸಿರಿನ ಮೂಲಕ ದೇಹವನ್ನು ಸೇರಬಹುದು.

ಸಾಮಾನ್ಯವಾಗಿ ಕೃಷಿಕರು ಬಳಸುವುದು ತಾಮ್ರದ ಸಲ್ಫೇಟ್ (ಮೈಲುತುತ್ತ) ಅನ್ನು. ಆದ್ದರಿಂದ ಇದರ ಬಗ್ಗೆಯೇ ಇಲ್ಲಿ ಮುಖ್ಯವಾಗಿ ಚರ್ಚಿಸೋಣ. ಸಂಪರ್ಕಕ್ಕೆ ಬಂದ ಕೆಲವೇ ಕ್ಷಣಗಳಲ್ಲಿ ಕಣ್ಣು, ಮೂಗು ಹಾಗೂ ಚರ್ಮಗಳು ಭಗಭಗನೇ ಉರಿಯುವಂತೆ ಮಾಡುತ್ತದೆ. ಕಣ್ಣು ಕೆಂಪಾಗಿ ನೋಯತೊಡಗುತ್ತವಲ್ಲದೆ ದೃಷ್ಟಿ ಕೆಲ ಹೊತ್ತಿನವರೆಗೆ ಮಂದವಾಗುತ್ತದೆ. ಹೊಟ್ಟೆ ಸೇರಿದ್ದರೆ, ವಾಂತಿಯಾಗುವ ಸಂಭವವುಂಟು. ವಿಷವಾಗುವುದಕ್ಕೆ ಕೇವಲ ಒಂದು ಗ್ರಾಂ ಮೈಲುತುತ್ತ ಸಾಕಾದರೆ ೮ ರಿಂದ ೧೫ ಗ್ರಾಂ ನಷ್ಟು ಹರಳು ಜೀವವನ್ನೇ ತೆಗೆದುಕೊಳ್ಳಬಹುದು. ಇದನ್ನು ನುಂಗಿದವನ ಬಾಯಿಯಲ್ಲಿ ಯಾವುದೋ ಲೋಹವನ್ನು ಜಗಿಯುತ್ತಿರುವ ಅನುಭವವಾಗುತ್ತದೆ. ನೀಲಿ ಅಥವಾ ಹಸಿರು ಬಣ್ಣದ ಹರಳು-ಹರಳಾದ ಪದಾರ್ಥದ ವಾಂತಿಯಾಗುತ್ತದೆ. ತೀವ್ರವಾದ ನೀರು ಮತ್ತು ರಕ್ತದ ಭೇದಿ, ಕೊನೆಗೆ ತೀವ್ರವಾದ ದೈಹಿಕ ಅಥವಾ ಮಾನಸಿಕ ಆಘಾತವಾಗಬಹುದು. ವಿಷ ಬಹಳವಾಗಿದ್ದರೆ ರೋಗಿಯ ಸ್ಥಿತಿ ಗಂಭೀರವಾಗಿ ಕೆಲವೇ ಗಂಟೆಗಳಲ್ಲಿ ಮರಣವನ್ನಪ್ಪಬಹುದು. ಅದೃಷ್ಟವಶಾತ್ ರೋಗಿ ಉಳಿದರೂ ಯಕೃತ್ತು ಮೂತ್ರಪಿಂಡಗಳ ತೊಂದರೆಯಿಂದ ನರಳಬೇಕಾಗುತ್ತದೆ. ರಕ್ತ ಕೂಡ ದೋಷಮಯವಾಗಿ ಉಳಿಯುತ್ತದೆ. ಆದರೆ ದೀರ್ಘಾವಧಿಯಲ್ಲಿ ಮೈಲುತುತ್ತೆಯಲ್ಲಿನ ತಾಮ್ರ ಯಕೃತ್ತಿನಲ್ಲಿಯೇ ಉಳಿದುಕೊಂಡರೂ ಯಾವುದೇ ದುಷ್ಪರಿಣಾಮವಾಗುವ ಸಂಗತಿ ದಾಖಲಾಗಿಲ್ಲ.

ಚಿಕಿತ್ಸೆ: ವಿಷ ಒಳಸೇರಿದುದು ಗೊತ್ತಾದರೆ ತಡಮಾಡದೆ ರೋಗಿಗೆ ಚೆನ್ನಾಗಿ ಬಾಯಿ ಮುಕ್ಕಳಿಸಿ, ಸಾಕಷ್ಟು ನೀರು ಅಥವಾ ಸಕ್ಕರೆ ಹಾಲು ಕುಡಿಸಬೇಕು. ಶೇಕಡಾ ಒಂದರ ಪೊಟ್ಯಾಶಿಯಂ ಫೆರ್ರೋಸಯನೈಡನ್ನು ಇದಕ್ಕಾಗಿ ಚಿಕಿತ್ಸೆಗೆ ಬಳಸುತ್ತಾರೆ. ಸೋಡಿಯಂ ಸಲ್ಫೇಟ್‌ನಿಂದ ಭೇದಿ ಮಾಡಿಸುತ್ತಾರೆ.

ಸುರಕ್ಷತೆ: ಸಾಮಾನ್ಯ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಬೇಕು.

## ಗ. ಕಳೆ ನಾಶಕಗಳು

ಆಧುನಿಕ ಕೃಷಿಯಲ್ಲಿ ಕೀಟ, ರೋಗ ನಾಶಕಗಳನ್ನು ಬಳಸುವಂತೆಯೇ ಕಳೆ ನಾಶಕಗಳೂ ಅನಿವಾರ್ಯವಾಗಿವೆ. ಏಕದಳ, ದ್ವಿದಳ, ನೀರಿನಲ್ಲಿರುವ ಕಳೆ ಸಸ್ಯಗಳು, ಹುಲ್ಲು ಮುಂತಾದವುಗಳನ್ನು ಬೆಳೆಯದಂತೆ ತಡೆಯಲು ಸಾಕಷ್ಟು ಬಗೆಯ ಕಳೆ ನಾಶಕ (Herbicides)ಗಳನ್ನು ಉಪಯೋಗಿಸಲಾಗುತ್ತದೆ. ಸ್ಥೂಲವಾಗಿ ಕಳೆ ನಾಶಕಗಳನ್ನು ಐದು ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಇಲ್ಲಿ ಮುಖ್ಯವಾದ ಕೆಲವು ಕಳೆನಾಶಕಗಳ ದುಷ್ಪರಿಣಾಮಗಳ ಕುರಿತು ಚರ್ಚಿಸೋಣ.

೧. ಡೈಕ್ವಾಟ್– ಡೈಪಿರಿಡಿಲಿಯಂ ಗುಂಪಿಗೆ ಸೇರಿದ ಇದನ್ನು ಅಗಲ ಎಲೆಯ ಮತ್ತು ನೀರಿನಲ್ಲಿರುವ ಕಳೆಗಳನ್ನು ನಾಶಪಡಿಸಲು ಬಳಸಲಾಗುತ್ತದೆ. ಉಸಿರಿನಲ್ಲಿ ಈ ಔಷಧಿ ಸೇರಿಕೊಂಡರೆ ಕ್ಷಣದಲ್ಲಿಯೇ ಮೂಗಿನಲ್ಲಿ ರಕ್ತ ಸ್ರಾವವಾಗುತ್ತದೆ. ಚರ್ಮದ ಮೇಲೆ ಬಿದ್ದರೆ ಕೆಂಪು ಗಾದರಿ, ಗುಳ್ಳೆಗಳೆದ್ದು ಉರಿಯತೊಡಗುತ್ತದೆ. ಆಕಸ್ಮಾತ್ ಉಗುರಿನ ಮೇಲೆ ಚಿಮ್ಮಿದರೆ ಅವು ಉದುರಿಹೋಗುತ್ತವೆ. ದೀರ್ಘಾವಧಿಯಲ್ಲಿ ಖಾಯಂ ಕಣ್ಣಿನ ತೊಂದರೆಗಳುಂಟಾಗಿ ಮೋತಿಬಿಂದುವಿಗೆ ಮೂಲವಾಗಬಹುದು.

ಚಿಕಿತ್ಸೆ: ಇದಕ್ಕೆ ನಿರ್ದಿಷ್ಟ ಚಿಕಿತ್ಸಾ ಕ್ರಮವಿಲ್ಲ.

ಸುರಕ್ಷತೆ: ಸಾಮಾನ್ಯ ಸುರಕ್ಷತಾ ಕ್ರಮಗಳನ್ನು ಅನುಸರಿಸಬೇಕು.

೨. ಪರಾಕ್ವಾಟ್– ಡೈ ಪಿರಿಡಿಲಿಯಂ ಗುಂಪಿನ ಇನ್ನೊಂದು ಸದಸ್ಯ. ಬಹುತೇಕ ಎಲ್ಲ ಬಗೆಯ ಮತ್ತು ನೀರಿನಲ್ಲಿರುವ ಕಳೆ ಸಸ್ಯಗಳನ್ನು ಕೂಡ ನಾಶಪಡಿಸಲು ಇದು ಒಂದು ಉತ್ತಮ ರಾಸಾಯನಿಕ.

ಪರಾಕ್ವಾಟ್ ಬಹಳ ವಿಷಕಾರಿ. ಒಂದೇ ಚಮಚದಷ್ಟು ಔಷಧಿ ಮನುಷ್ಯನನ್ನು ಕೊಲ್ಲಬಲ್ಲದು. ವಿಷ ಒಳಹೊಕ್ಕರೆ ಬಾಯಿ, ಗಂಟಲು ಹೊಟ್ಟೆಯಲ್ಲಿ ಭಯಂಕರ ಉರಿ, ತಳಮಳ ಶುರುವಾಗುತ್ತದೆ. ಯಕೃತ್ತು, ಮೂತ್ರಪಿಂಡಗಳ ಕಾರ್ಯದ ಮೇಲೆ ತೀವ್ರವಾದ ಹೊಡೆತ ಬೀಳುತ್ತದೆ. ಗಂಭೀರವಾದ ಇನ್ನೊಂದು ಪರಿಣಾಮವೆಂದರೆ ಪುಪ್ಪುಸಗಳ ಸ್ನಾಯುಗಳು ಪೆಡಸಾಗಿ ಅವುಗಳ ಕಾರ್ಯಕ್ಷಮತೆ ಕುಗ್ಗುತ್ತದೆ. ಇದಕ್ಕೆ ಯಾವುದೇ ಚಿಕಿತ್ಸೆ ಇಲ್ಲ. ಉಸಿರಿನ ಮೂಲಕ ಒಳಗೆ ಹೋದರೆ ಮೂಗಿನಲ್ಲಿ ರಕ್ತಸ್ರಾವವಾಗುತ್ತದೆ. ಚರ್ಮದ ಮೇಲೆ ಬಿದ್ದರೆ ಗುಳ್ಳೆಗಳು, ಗಾದರಿಗಳು ಏಳುತ್ತವೆ. ಸಂಪರ್ಕಕ್ಕೆ ಬಂದರೆ ಉಗುರುಗಳು ಕಳಚಿ ಬೀಳುತ್ತವೆ, ಕಣ್ಣಿಗೆ ಗಾಯಗಳಾಗಬಹುದು. ಆದರೆ ಈ ಎಲ್ಲ ಪರಿಣಾಮಗಳು ತಾತ್ಕಾಲಿಕ. ಕೆಲವೇ ಗಂಟೆಗಳಲ್ಲಿ ಇವು ಮಾಯವಾಗಬಹುದು. ಆದರೆ ಸ್ವಲ್ಪವೇ ನಿರ್ಲಕ್ಷ್ಯ ತೋರಿದರೆ ಅನಾಹುತ ತಪ್ಪಿದ್ದಲ್ಲ. ಪರಾಕ್ವಾಟ್‌ನಿಂದ ವಿಷವಾದ ಶೇಕಡಾ ೫೦ ರಷ್ಟು ಪ್ರಕರಣಗಳು ಸಾವಿನಲ್ಲಿ ಕೊನೆಯಾಗುವವು. ಒಂದು ಅಂದಾಜಿನ ಪ್ರಕಾರ ಪಪುವಾ–ನ್ಯೂಗಿನಿಯಲ್ಲಿ ಪ್ರತಿವರ್ಷ ಈ ರಾಸಾಯನಿಕ ನೂರು ಜನರನ್ನು ಬಲಿ ತೆಗೆದುಕೊಳ್ಳುತ್ತದೆ. ಸುದೀರ್ಘವಾದ ಉಪಯೋಗದಿಂದ ಕ್ಯಾನ್ಸರಿನ ಸಾಧ್ಯತೆಗಳಿವೆ. ವರ್ಣತಂತುಗಳ ಜೋಡಣೆಯಲ್ಲಿ ಹಠಾತ್ ಮಾರ್ಪಾಟುಗಳಾಗಿ ಬೇಡದ ಫಲಿತಾಂಶಗಳಿಗೆ ದಾರಿಯಾಗಬಹುದು. ಅದು ಮಾನವನ ದೇಹದಲ್ಲಿ ಸಂಗ್ರಹವಾಗುಳಿಯುವುದಿಲ್ಲ. ಬೇಗನೇ ವಿಸರ್ಜಿಸಲ್ಪಡುತ್ತದೆ.

ಚಿಕಿತ್ಸೆ: ವಿಷದ ಲಕ್ಷಣಗಳು ಕಂಡುಬಂದರೆ ವಾಂತಿ ಮಾಡಿಸಬೇಕು (ಇದೇನು ಅಷ್ಟು ಸಹಾಯಕ್ಕೆ ಬರುವುದಿಲ್ಲವೆಂದು ಗೊತ್ತಾಗಿದೆ) ಪೀಡಿತನಿಗೆ ಮಣ್ಣು ತಿನ್ನಿಸುವುದರಿಂದ ರಾಸಾಯನಿಕದ ಉಗ್ರತೆಯನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಮಾಡಬಹುದು. ಸಾಕಷ್ಟು ನೀರನ್ನು ಕುಡಿಸಿ, ರೋಗಿಯನ್ನು ಆಸ್ಪತ್ರೆಗೆ ಸೇರಿಸುವುದು ಅವಶ್ಯ.

ಸುರಕ್ಷತೆ: ಸಾಮಾನ್ಯ ಸುರಕ್ಷತಾ ಮುಂಜಾಗ್ರತೆಗಳನ್ನು ಕೈಗೊಳ್ಳಬೇಕು.

೩. ಪೆಂಟಾಕ್ಲೋರೋಫೀನಾಲ್:– ಇದೊಂದು ಆಲ್–ಇನ್–ಒನ್ ಪೀಡೆನಾಶಕ. ಕೀಟ, ಕಳೆ, ಶಿಲೀಂಧ್ರ ಮುಂತಾದವುಗಳ ಹತೋಟಿಗಾಗಿ ಬಳಸಲಾಗುತ್ತದೆ. ಇದು ಎಷ್ಟು ಭಯಂಕರವಾಗಿದೆಯೆಂದರೆ ಆರೋಗ್ಯವಂತ ಮನುಷ್ಯನನ್ನು ಕೊಲ್ಲಲು ಎರಡು ಗ್ರಾಂ ವಿಷ ಹೇಗಾದರೂ ರಕ್ತ ಸೇರಿದರೆ ಸಾಕು. ಈ ವಿಷ ಉಂಟುಮಾಡುವ ಲಕ್ಷಣಗಳು ಬಹಳ ವಿಶಿಷ್ಟವಾಗಿವೆ. ಇದು ಒಳಸೇರಿದ ಕೆಲವೇ ಕ್ಷಣಗಳಲ್ಲಿ ಕೆಲಸಗಾರನಲ್ಲಿ ಹುರುಪು, ಹುಮ್ಮಸ್ಸು ಇಮ್ಮಡಿಯಾಗುತ್ತವೆ. ಆರೋಗ್ಯ ಮೊದಲಿಗಿಂತ ಒಮ್ಮೆಲೇ ಸುಧಾರಿಸಿದ ಅನುಭವವಾಗಿ ಹೆಚ್ಚು ಕೆಲಸ ಮಾಡುತ್ತಾನೆ.

ಆದರೆ ಇದು ಒಂದೆರಡು ದಿನಗಳ ಮಟ್ಟಿಗೆ ಮಾತ್ರ. ದೇಹದ ಉಷ್ಣತೆ ಹೆಚ್ಚಾಗತೊಡಗುತ್ತದೆ. ಕೆಲವು ದಿನಗಳಲ್ಲೇ ವಿಷದ ಪರಿಣಾಮಗಳು ಕಾಣತೊಡಗುತ್ತವೆ. ಬೆವರುವಿಕೆ, ನೀರಡಿಕೆ ಹೆಚ್ಚಾಗುತ್ತದೆ. ಆಯಾಸ, ತೂಕದಲ್ಲಿ ಇಳಿಕೆ, ಭೇದಿ, ಹೊಟ್ಟೆನೋವು, ವಾಂತಿ ಹಾಗೂ ತಲೆಸುತ್ತು ಕಾಣಿಸಿಕೊಳ್ಳುತ್ತವೆ. ಚರ್ಮದ ಮೇಲೆ ಬಿಳಿ ಬೊಕ್ಕೆಗಳು, ಕಣ್ಣಿನಲ್ಲಿ ಉರಿ ಏಳಬಹುದು. ಮುಂದೆ ಯಕೃತ್ತು, ಮೂತ್ರಪಿಂಡಗಳು ಹಾಳಾಗುವ ಸಾಧ್ಯತೆಗಳಿವೆ. ಇದರ ವಾಸನೆಯನ್ನು ಆಘ್ರಾಣಿಸಿದಾಗ ಉಸಿರಾಟದಲ್ಲಿ ತೊಂದರೆಯಾಗಿ, ಪೀಡಿತನು ಕೋಮಾಕ್ಕೊಳಗಾಗಿ ಸತ್ತೇ ಹೋಗಬಹುದು. ದೀರ್ಘಾವಧಿಯಲ್ಲಿ ಕ್ಯಾನ್ಸರ್ ಉಂಟಾಗುತ್ತದೆಂದು ಹೇಳುತ್ತಾರೆ. ಆದರೆ ಅದು ಸ್ಪಷ್ಟವಾಗಿಲ್ಲ. ಭ್ರೂಣದ ಮೇಲೆ ವ್ಯತಿರಿಕ್ತವಾದ ಪರಿಣಾಮಗಳಾಗಬಹುದು.

ಚಿಕಿತ್ಸೆ: ವಿಷವಾದದ್ದು ಖಾತ್ರಿಯಾದ ಕೂಡಲೇ ಬೇಗನೇ ಕ್ರಮ ಕೈಗೊಳ್ಳಬೇಕು. ಔಷಧ ಬಾಯಿಯ ಮೂಲಕ



ಒಳಹೋಗಿದ್ದರೆ ಪೀಡಿತನ ಬಾಯಿಯನ್ನು ನೀರಿನಿಂದ ಮುಕ್ಕಳಿಸಿ, ಇದ್ದಿಲಿನ ಪುಡಿಯನ್ನು ತಿನ್ನಿಸಿ ಸಾಕಷ್ಟು ನೀರು ಅಥವಾ ಹಾಲನ್ನು ಕುಡಿಸಬೇಕು. ನಂತರ ವಾಂತಿ ಮಾಡಿಸಬೇಕು. ಚರ್ಮದ ಮೇಲೆ ಔಷಧಿ ಬಿದ್ದಿದ್ದರೆ ಸೋಪು ಹಚ್ಚಿ ಸ್ವಚ್ಛವಾಗಿ ತೊಳೆಯಬೇಕು. ಈ ರಾಸಾಯನಿಕಕ್ಕೆ ಒಂದು ಸಮರ್ಥವಾದ ಪ್ರತಿವಿಷ ಇಲ್ಲದೇ ಇರುವುದು ದುರುದೃಷ್ಟಕರ.

ಸಾಮಾನ್ಯ ಪ್ರಥಮ ಚಿಕಿತ್ಸೆ: ವಿಷವು ದೇಹವನ್ನು ಸೇರಿದೆ ಎಂದು ಅನುಮಾನ ಬಂದ ಕೂಡಲೇ ವೈದ್ಯರನ್ನು ಕರೆಸಬೇಕು ಅಥವಾ ಪೀಡಿತನನ್ನು ಸಾಧ್ಯವಾದರೆ ಆಸ್ಪತ್ರೆಗೆ ಒಯ್ಯಬೇಕು. ಗೊತ್ತು ಮಾಡಿಕೊಂಡು ರಾಸಾಯನಿಕದ ಕ್ರಿಯಾತ್ಮಕ ಅಂಶದ ಬಗ್ಗೆ ವೈದ್ಯರಿಗೆ ಹೇಳುವುದು ಉಚಿತ.

ವೈದ್ಯಕೀಯ ಸೇವೆ ಲಭ್ಯವಾಗುವವರೆಗೆ ಈ ಕ್ರಮಗಳನ್ನು ಕೈಗೊಳ್ಳಬೇಕು.

ಪೀಡಿತನನ್ನು ಸ್ವಚ್ಛವಾದ ಜಾಗದ ಮೇಲೆ, ನೆರಳಿನಲ್ಲಿ ಮಲಗಿಸಬೇಕು. ಉಸಿರಾಟವನ್ನು ಪರೀಕ್ಷಿಸಿ ಮೂಗಿನಲ್ಲಿ ರಾಸಾಯನಿಕ ಇದೆಯೋ ಇಲ್ಲವೋ ಎಂಬುದನ್ನು ಖಾತ್ರಿ ಪಡಿಸಿಕೊಳ್ಳಿರಿ.

ಉಸಿರಾಟದಲ್ಲಿ ತೊಂದರೆ ಇದ್ದರೆ ಕೃತಕ ಉಸಿರಾಟ ಮಾಡಿಸಬೇಕು. ಬಟ್ಟೆಯ ಮೇಲೆ ರಾಸಾಯನಿಕ ಬಿದ್ದಿದ್ದರೆ ಅದನ್ನು ತೆಗೆದು, ಚರ್ಮಕ್ಕೆ ಹತ್ತಿದ್ದರೆ ನೀರು ಹಾಗೂ ಸೋಪಿನಿಂದ ತೊಳೆಯಿರಿ. ಒಂದು ವೇಳೆ ನೇರವಾಗಿ ಚರ್ಮಕ್ಕೆ ಗಾಯವಾಗಿದ್ದರೆ ತೊಳೆಯಬೇಡಿರಿ. ರಾಸಾಯನಿಕ ಉಸಿರಾಟದ ತೊಂದರೆ ಉಂಟುಮಾಡುವಂಥದ್ದಾಗಿದ್ದರೆ (ಉದಾ: ಡಿಎನ್‌ಓಸಿ, ಡೈನೋಸೆಬ್, ಬೈನಾಪ್ಯಾಕ್ರಿಲ್, ಪೆಂಟಾಕ್ಲೋರೋಫೀನಾಲ್ ಮುಂ.) ಪೀಡಿತನನ್ನು ತಂಪಾದ ಜಾಗದಲ್ಲಿ ಮಲಗಿಸುವುದು ಅವಶ್ಯ. ಕಣ್ಣಿನಲ್ಲಿ ರಾಸಾಯನಿಕ ಬಿದ್ದದ್ದೇ ಆದರೆ ಶುದ್ಧವಾದ ತಣ್ಣೀರಿನಿಂದ ೧೦ ರಿಂದ ೧೫ ನಿಮಿಷಗಳವರೆಗೆ ಕಣ್ಣನ್ನು ತೊಳೆಯಬೇಕು.

ದ್ರವರೂಪದ ವಿಷವನ್ನು ಸೇವಿಸಲಾಗಿದ್ದರೆ ಅಥವಾ ಅಕಸ್ಮಾತ್ತಾಗಿ ಬಾಯಿಯ ಮೂಲಕ ಒಳಹೋಗಿದ್ದರೆ ಯಾವುದೇ ಕಾರಣಕ್ಕೂ ತಡಮಾಡದೆ, ಎರಡು-ಮೂರು ಸಲ ಪೀಡಿತನ ಬಾಯಿ ಮುಕ್ಕಳಿಸಬೇಕು. ನಂತರ ಎರಡು ಗ್ಲಾಸುಗಳಷ್ಟು ಶುದ್ಧ ನೀರು ಕುಡಿಸಬೇಕು. ಇಂಥ ಪ್ರಕರಣಗಳಲ್ಲಿ ವಾಂತಿ ಮಾಡಿಸುವುದು ಬಹಳ ಅವಶ್ಯಕ ಒಂದು ಗ್ಲಾಸು ಉಗುರು ಬೆಚ್ಚಗಿನ ನೀರಿನಲ್ಲಿ ಎರಡು ಟೇಬಲ್ ಸ್ಪೂನ್ ಉಪ್ಪುಹಾಕಿ ಕರಗಿಸಿ ಕುಡಿಸಬೇಕು. ಇಲ್ಲದಿದ್ದರೆ ಗಂಟಲಲ್ಲಿ ಎರಡು ಬೆರಳುಗಳನ್ನು ತೂರಿಸಿ ವಾಂತಿಮಾಡಿಸಿ, ನಂತರ ಒಂದು ಟೇಬಲ್ ಚಮಚೆಯಷ್ಟು ಚೆನ್ನಾಗಿ ಅರೆದ ಇದ್ದಿಲು ಪುಡಿಯನ್ನು ಒಂದು ಗ್ಲಾಸು ನೀರಿನಲ್ಲಿ ಹಾಕಿ ಕುಡಿಸಬೇಕು. ಒಂದು ವೇಳೆ ಪೀಡೆನಾಶಕವನ್ನು ಸಾವಯವ ದ್ರಾವಣ (ಉದಾ: ಸೀಮೆ ಎಣ್ಣೆ)ಗಳಲ್ಲಿ ಕರಗಿಸಲಾಗಿದ್ದರೆ ವಾಂತಿ ಮಾಡಿಸುವ ಮೊದಲು ಪೀಡಿತನಿಗೆ ಸಾಕಷ್ಟು ಹಸಿ ಮೊಟ್ಟೆಗಳನ್ನು ತಿನ್ನಿಸಬೇಕು. ಅಥವಾ ಗಂಜಿಯನ್ನು ಕುಡಿಸಬೇಕು. ಒಂದು ವೇಳೆ ಪೀಡೆನಾಶಕ ಕಾಸ್ಟಿಕ್ ರಾಸಾಯನಿಕ ಅಥವಾ ಆಮ್ಲವಾಗಿದ್ದರೆ ಯಾವುದೇ ಪರಿಸ್ಥಿತಿಯಲ್ಲೂ ವಾಂತಿ ಮಾಡಿಸಬಾರದು. ಆದರೆ ಸಾಕಷ್ಟು ಇದ್ದಿಲು ಪುಡಿಯನ್ನು ತಿನ್ನಿಸಬೇಕು.

ಸ್ನಾಯು ಸೆಳೆತ ಉಂಟಾಗಿ ಪೀಡಿತ ಹಲ್ಲುಗಟ್ಟಿ ಊರತೊಡಗಿದನೆಂದರೆ ನಾಲಿಗೆಯನ್ನು ಕಚ್ಚಿಕೊಳ್ಳದಂತೆ ದವಡೆಗಳ ನಡುವೆ ಕೈವಸ್ತ್ರವನ್ನು ಇಡಬೇಕು.

ಪೀಡಿತ ಪ್ರಜ್ಞಾಹೀನನಾಗಿದ್ದರೆ ಉಸಿರಾಟ ಸರಿಯಾಗಿ ಇದೆಯೋ ಇಲ್ಲವೋ ಎಂಬುದನ್ನು ಮಾತ್ರ ಪರೀಕ್ಷಿಸಿ, ಇಲ್ಲದಿದ್ದರೆ ಕೃತಕ ಉಸಿರಾಟ ಮಾಡಿಸುವುದೊಂದನ್ನು ಬಿಟ್ಟರೆ ಮತ್ತೇನೂ ಮಾಡಲು ಸಾಧ್ಯವಾಗದೆ ಇರಬಹುದು. ಅಂಥ ವೇಳೆಯಲ್ಲಿ ರೋಗಿಯನ್ನು ಆದಷ್ಟು ಬೇಗನೆ ಆಸ್ಪತ್ರೆಗೆ ಕರೆದೊಯ್ಯಬೇಕು. ನೀರು ಅಥವಾ ಇನ್ನಾವುದೇ ದ್ರಾವಣವನ್ನು ರೋಗಿಗೆ ಕುಡಿಸುವ ಸಾಹಸ ಮಾಡಬಾರದು. ಹಾಗೆ ಮಾಡಿದ್ದಾದರೆ ಉಸಿರುಗಟ್ಟುವ ಸಾಧ್ಯತೆಗಳಿವೆ.

ಸುರಕ್ಷಿತ ಬಳಕೆಗೆ ಸಾಮಾನ್ಯ ನಿಯಮಗಳು: ಪೀಡೆನಾಶಕವೊಂದನ್ನು ಬಳಸುವ ಪೂರ್ವದಲ್ಲಿ ಈ ಮುಂದೆ ಹೇಳಲಾದ ಕೆಲವು ಅಂಶಗಳ ಬಗ್ಗೆ ಎಚ್ಚರವಹಿಸುವುದು ತುಂಬಾ ಮಹತ್ವದ್ದು.

೧. ಬಾಟಲಿ ಅಥವಾ ಡಬ್ಬಿಯ ಲೇಬಲ್ಲನ್ನು ಸರಿಯಾಗಿ ಓದಿ. ಒಂದು ವೇಳೆ ಕೈಗೊಳ್ಳಬೇಕಾದ ಮುಂಜಾಗ್ರತಾ ಕ್ರಮಗಳು, ವಿಷವಾದಾಗ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಅಲ್ಲಿ ಸರಿಯಾದ ಮಾಹಿತಿ ಇಲ್ಲದಿದ್ದರೆ ಅಂಥ ಔಷಧಿಯನ್ನು ಬಳಸಲೇಬೇಡಿರಿ.

೨. ರಾಸಾಯನಿಕವನ್ನು ನೀರಿನೊಂದಿಗೆ ಮಿಶ್ರಮಾಡುವಾಗ ಕೈಗವಸು ಹಾಕಿಕೊಳ್ಳುವುದನ್ನು ಮರೆಯಬಾರದು. ದ್ರಾವಣ ಮೈಮೇಲೆ ಚೆಲ್ಲದಂತೆ ನಿಧಾನವಾಗಿ ಬೆರೆಸಿ. ಔಷಧಿ ಪುಡಿರೂಪದಲ್ಲಿದ್ದರೆ ಸುತ್ತೆಲ್ಲ ಅದರ ಧೂಳು ಹಾರದಂತೆ ಎಚ್ಚರವಹಿಸಿ.

೩. ಸ್ಪ್ರೇ ಅಥವಾ ಧೂಳೀಕರಿಸುವ ಉಪಕರಣಗಳು ಸರಿಯಾದ ಸ್ಥಿತಿಯಲ್ಲಿ ಇವೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಿರಿ. ಸ್ಪ್ರೇಯರ್ ಯಾವುದೇ ಪರಿಸ್ಥಿತಿಯಲ್ಲಿ ಸೋರಬಾರದು.

೪. ಸಿಂಪರಣೆಮಾಡುವ ಸಮಯದಲ್ಲಿ ನೀರು, ಸೋಪು, ಟವಲ್ಲುಗಳು ಬಳಿಯಲ್ಲಿರಲೇಬೇಕು. ಆಕಸ್ಮಾತ್ ಔಷಧಿ ಮೈಮೇಲೆ ಚೆಲ್ಲಿದರೆ ಆಗಿಂದಾಗ ತೊಳೆದುಕೊಳ್ಳಲು ಬರುತ್ತದೆ.

೫. ಸ್ಪ್ರೇ ಮಾಡುವಾಗ ಏನಾದರೂ ತಿನ್ನುವುದನ್ನು, ಕುಡಿಯುವುದನ್ನು ಮತ್ತು ಧೂಮಪಾನ ಮಾಡುವುದನ್ನು ಮಾಡಬಾರದು. ಅಲ್ಲದೆ ಶರಾಬು ಕುಡಿದು ಸ್ಪ್ರೇ ಮಾಡಬಾರದು. ಏಕೆಂದರೆ ಧೂಮಪಾನ ಮತ್ತು ಆಲ್ಕೋಹಾಲ್‌ಗಳು ವಿಷದ ತೀವ್ರತೆಯನ್ನು ಹೆಚ್ಚಿಸುತ್ತವೆ.

೬. ದನಕರುಗಳು, ಮನೆಯಲ್ಲಿನ ಸಾಕು ಪ್ರಾಣಿಗಳ ಮೇಲೂ ಪೀಡೆ ನಾಶಕಗಳು ವಿಷವಾಗಬಲ್ಲವು ಎಂಬುದನ್ನು ಗಮನದಲ್ಲಿಡಿರಿ. ಅದಕ್ಕಾಗಿ ತೋಟದಲ್ಲಿರುವ ದೋಣಿ (ಅಥವಾ ಟ್ಯಾಂಕು) ಅಥವಾ ಬಾವಿಯ ಕಟ್ಟೆಯ ಮೇಲೆ ಸ್ಪ್ರೇಯರ್‌ಗಳನ್ನು ತೊಳೆಯುವುದಾಗಲೀ, ರಾಸಾಯನಿಕಗಳನ್ನು ಮಿಶ್ರಮಾಡುವುದಾಗಲೀ ಮಾಡಬಾರದು. ಉದ್ದೇಶ ವೇನೆಂದರೆ ಮನುಷ್ಯನು ಅಥವಾ ಪ್ರಾಣಿಗಳು ಕುಡಿಯಬಹುದಾದ ನೀರಿನಲ್ಲಿ ತಪ್ಪಿಕೂಡ ರಾಸಾಯನಿಕ ಚೆಲ್ಲಬಾರದು.

೭. ಬಹಳ ಹೊತ್ತಿನವರೆಗೆ ಸಿಂಪರಣೆ ಅಥವಾ ಧೂಳೀಕರಿಸುವ ಕೆಲಸವನ್ನು ಮಾಡಲು ಹೋಗಬೇಡಿರಿ.

೮. ಸ್ಪ್ರೇ ಮಾಡಲಾದ ಹೊಲ, ತೋಟ ಅಥವಾ ಬೆಳೆಗಳಿಂದ ಎರಡು ದಿನಗಳಿಂದ ಹಿಡಿದು ಒಂದು ವಾರದವರೆಗಾದರೂ, ಸಂದರ್ಭಾನುಸಾರ, ದೂರ ಇರುವುದು ಒಳ್ಳೆಯದು.

೯. ಸ್ಪ್ರೇ ಮಾಡುವಾಗ ರಾಸಾಯನಿಕ ಯಾವುದೇ ಹಂತದಲ್ಲಿ ಮೈಗೆ ಸೋಂಕದಂತೆ, ಉಸಿರಿನ ಮೂಲಕ ದೇಹದ ಒಳಸೇರದಂತೆ ನೋಡಿಕೊಳ್ಳುವುದು ಅತ್ಯಂತ ಅವಶ್ಯಕ. ಇದಕ್ಕಾಗಿ ಸ್ಪ್ರೇ ಮಾಡುವುದಕ್ಕೆ ಮುಂಚೆ ರಕ್ಷಣೆಗಾಗಿ ಈ ಮುಂದೆ ಹೇಳಲಾದ ಉಡುಪು ಹಾಗೂ ಸಾಧನಗಳನ್ನು ಧರಿಸಬೇಕು.

೧) ಸಂಪೂರ್ಣವಾಗಿ ಮೈ ಮುಚ್ಚುವಂತೆ ಹತ್ತಿಯ ದಪ್ಪನೆಯ ಪ್ಯಾಂಟು, ಶರ್ಟು ಧರಿಸುವುದು ಉತ್ತಮ. ಮೇಲೆ ಒಂದು ಏಪ್ರನ್ ಕಟ್ಟಿಕೊಂಡರಂತೂ ಬಹಳ ಒಳ್ಳೆಯದು. ಆದರೆ ನಮ್ಮ ಬಹುತೇಕ ರೈತರು ಉಡುಪಿನ ಕಡೆಗೆ ಲಕ್ಷ್ಯಕೊಡುವುದಿಲ್ಲ. ಅವರು ಧೋತರವನ್ನೇ ಎತ್ತಿಕಟ್ಟಿ ಸ್ಪ್ರೇ ಮಾಡುವುದರಿಂದ ಚರ್ಮದಿಂದ ಹೀರಲ್ಪಡುವ ರಾಸಾಯನಿಕಗಳಿಗೆ ಆದರದ ಆಮಂತ್ರಣ ನೀಡಿದಂತಾಗುತ್ತದೆ. ಕೆಲಸ ಮುಗಿದ ನಂತರ ಉಡುಪನ್ನು ಸ್ವಚ್ಛವಾಗಿ ಒಗೆದಿಡಬೇಕು.

೨) ಮೇಲಿಂದ ಮೇಲೆ ಕೈಗಳು ರಾಸಾಯನಿಕ, ಅದರ ಬಾಟಲು, ಡಬ್ಬಿ, ಬಕೆಟ್ಟು, ಸ್ಪ್ರೇಯರ್‌ನ ಹಿಡಿಕೆ, ನಾಝಲ್‌ಗಳ ಸಂಪರ್ಕಕ್ಕೆ ಬರುತ್ತಿರುವುದರಿಂದ ರಬ್ಬರಿನ ದಪ್ಪನಾದ ಕೈಗವಸುಗಳನ್ನು ಹಾಕಿಕೊಳ್ಳುವುದನ್ನು ಯಾವುದೇ ಸಂದರ್ಭದಲ್ಲಿ ಮರೆಯಕೂಡದು. ಕೈಗಳಿಗೆ ಗಾಯವಾಗಿದ್ದರಂತೂ ಅದನ್ನು ಧರಿಸದೇ ಸ್ಪ್ರೇ



ಮಾಡಲೇಬಾರದು. ಸಿಂಪರಣೆಯಾದನಂತರ ಅವುಗಳನ್ನು ತೊಳೆಯಬೇಕು.

೩) ಕಣ್ಣುಗಳಿಗೆ ಕನ್ನಡಕ, ಮೂಗಿಗೆ, (ರೆಸ್ಪಿರೇಟರ್ ಗಾಳಿ ಸೋಸುವ ಸಾಧನ) ಏರಿಸಿಕೊಳ್ಳುವುದನ್ನು ಕಡ್ಡಾಯ ಮಾಡಿಕೊಳ್ಳಬೇಕು. ಇದರಿಂದ ರಾಸಾಯನಿಕ ಕಣ್ಣಿನಲ್ಲಿ ಬಿದ್ದು ಆಗುವ ಅನಾಹುತವನ್ನು ತಪ್ಪಿಸಬಹುದು. ಈಗೀಗ ಪೇಟೆಯಲ್ಲಿ ಸಿದ್ಧ ಮುಖ ಕವಚಗಳೇ ಸಿಗುತ್ತವೆ. ಅವುಗಳ ಉಪಯೋಗ ಮಾಡಿಕೊಳ್ಳಬೇಕು. ಕುದಲುಗಳ ರಕ್ಷಣೆಗೆ ಟೊಪ್ಪಿಗೆ ಧರಿಸುವುದೊಳಿತು.

೪) ಕಾಲು, ಪಾದಗಳ ರಕ್ಷಣೆಗೆ ರಬ್ಬರಿನ ಉದ್ದ ಬೂಟುಗಳನ್ನು ಹಾಕಿಕೊಳ್ಳಬೇಕು.

೧೦) ಗಾಳಿಯ ವಿರುದ್ಧ ಸಿಂಪರಣೆ ಅಥವಾ ಧೂಳೀಕರಣ ಸರ್ವಥಾ ಸಲ್ಲದು. ಏಕೆಂದರೆ ಗಾಳಿಯಲ್ಲಿ ರಾಸಾಯನಿಕ ಸೇರಿ ಮೂಗಿನಲ್ಲಿ, ಬಾಯಿಯಲ್ಲಿ ಸೇರಬಹುದು, ಮೈಮೇಲೆ ಬೀಳಬಹುದು.

ಗೃಹಿಣಿಯರಿಗೊಂದು ಕಿವಿ ಮಾತು: ಸಂತೆಯಿಂದ ತರಕಾರಿ, ಹಣ್ಣು ಹಂಪಲುಗಳನ್ನು ತಂದ ಕೂಡಲೇ ಅವುಗಳನ್ನು ಉಪ್ಪಿನ ನೀರಿನಲ್ಲಿ ಚೆನ್ನಾಗಿ ತೊಳೆಯಿರಿ. ಒಂದು ಬಕೆಟ್ ನೀರಿಗೆ ಎರಡು–ಮೂರು ಮುಷ್ಟಿ ಉಪ್ಪನ್ನು ಹಾಕಿ, ಕರಗಿಸಿ, ಒಂದೈದು ನಿಮಿಷ ತರಕಾರಿಗಳನ್ನು ಬಕೆಟ್ಟಿನಲ್ಲಿಡುವುದರಿಂದ ರಾಸಾಯನಿಕ ಹಾಗೂ ರೋಗಾಣುಗಳಿಂದ ಶೇಕಡಾ ೯೯ ರಷ್ಟು ರಕ್ಷಣೆ ದೊರೆಯುತ್ತದೆ. ಇದಕ್ಕಾಗಿ ಉಗುರು ಬೆಚ್ಚಗಿನ ನೀರನ್ನು ಉಪಯೋಗಿಸಿದರಂತೂ ಬಹಳ ಒಳ್ಳೆಯದು.

## ಸುರಕ್ಷಿತ ಶೇಖರಣೆ

ಪೀಡೆನಾಶಕಗಳನ್ನು ಸರಿಯಾದ ರೀತಿಯಲ್ಲಿ ವ್ಯವಸ್ಥಿತವಾಗಿ ಶೇಖರಿಸಿ ಇಡುವುದು ಬಹಳ ಮಹತ್ವದ್ದು. ಇಲ್ಲಿ ಅವಶ್ಯವಾಗಿ ಪಾಲಿಸಬೇಕಾದ ಕೆಲವು ಅಂಶಗಳಿವೆ.

ಪೀಡೆನಾಶಕಗಳನ್ನಿಡುವ ಕೋಣೆಯಲ್ಲಿ ಚೆನ್ನಾಗಿ ಗಾಳಿ, ಬೆಳಕು ಆಡುವಂತಿದ್ದು, ಬಟ್ಟೆ, ಆಹಾರ ಪದಾರ್ಥಗಳು, ಧಾನ್ಯಗಳ ಚೀಲಗಳನ್ನು ಅಲ್ಲಿ ಸರ್ವಥಾ ಇಡಬಾರದು. ಕೋಣೆಗೆ ಸರಿಯಾಗಿ ಮುಚ್ಚಬಹುದಾದ ಕಿಟಕಿ, ಬಾಗಿಲುಗಳು ಇರಬೇಕು.

ರಾಸಾಯನಿಕಗಳನ್ನು ಮುಚ್ಚಳವಿಲ್ಲದ ಡಬ್ಬಿಗಳಲ್ಲಿ ಇಡುವುದಾಗಲೀ, ಗಾಳಿಗೆ ಹಾಗೇ ತೆರೆದಿಡುವುದಾಗಲೀ ಮಾಡಬಾರದು.

ಖಾಲಿಯಾದ ರಾಸಾಯನಿಕದ ಡಬ್ಬಿ ಅಥವಾ ಪ್ಲಾಸ್ಟಿಕ್ ಚೀಲಗಳನ್ನು ಆಗಿಂದಾಗ ಒಂದು ಗೊತ್ತಾದ ಸ್ಥಳದಲ್ಲಿ ಹುಗಿದು ಅಥವಾ ಸುಟ್ಟುಬಿಡಬೇಕು. ಕೆಲವರು ಇಂಥ ಡಬ್ಬಿಗಳನ್ನೇ ಕುಡಿಯುವ ನೀರಿಗಾಗಿ, ಬಾಟಲಿಗಳನ್ನು ಒಳ್ಳೆಣ್ಣೆ ತರಲು ಉಪಯೋಗಿಸುತ್ತಾರೆ. ಇಂಥ ಸಾಹಸ ಯಾವುದೇ ಪರಿಸ್ಥಿತಿಯಲ್ಲಿ ಸಲ್ಲದು.

ಆಯಾ ರಾಸಾಯನಿಕಗಳನ್ನು ಆಯಾ ಡಬ್ಬಿಗಳಲ್ಲಿಯೇ ಇಡಬೇಕು. ಕೆಲವೊಮ್ಮೆ ಸ್ವಲ್ಪವೇ ಔಷಧಿ ಉಳಿದಿದೆಯೆಂದು ಬೇರೆ ಡಬ್ಬಿಗೋ, ಲೇಬಲ್ ಇಲ್ಲದ ಬಾಟಲಿಯಲ್ಲಿಯೋ ಹಾಕಿ ಇಟ್ಟಾಗ ದುರ್ಘಟನೆ ಸಂಭವಿಸಬಹುದು.

ಮಕ್ಕಳ ಕೈಗೆ ಯಾವುದೇ ರಾಸಾಯನಿಕ ಯಾವುದೇ ಸಮಯದಲ್ಲಿ ಸಿಗದಂತೆ ಇಡಬೇಕು.

## ಕೊನೆಯ ಮಾತು

ಸದ್ಯದ ಪರಿಸ್ಥಿತಿಯಲ್ಲಿ ಈ ರಾಸಾಯನಿಕ ಪೀಡೆನಾಶಕಗಳು ನಮ್ಮ ಕೃಷಿಯ ಅನಿವಾರ್ಯಗಳಾಗಿವೆ. ಇಲ್ಲಿ ನಮಗಿರುವ ಹಾದಿಯೆಂದರೆ ಸಾಧ್ಯವಾದಷ್ಟು ಮಟ್ಟಿಗೆ, ಅತ್ಯಂತ ವಿವೇಕದಿಂದ ಅವುಗಳನ್ನು ಬಳಸುವುದು. ಇದನ್ನು ನಾವು ಸಾಧಿಸಬಹುದು. ಹೇಗೆಂದರೆ–

೧. ಇವುಗಳನ್ನು ಬಳಸುವವರಿಗೆ ಸೂಕ್ತ ತರಬೇತಿ ಕೊಡುವುದು.

೨. ತಜ್ಞರ ಶಿಫಾರಸ್ಸಿಗನುಗುಣವಾಗಿ ಅವುಗಳನ್ನು ಬಳಸುವುದು.

೩. ಬಳಸುವುದಕ್ಕಿಂತ ಮೊದಲು, ಮಧ್ಯದಲ್ಲಿ ಮತ್ತು ನಂತರ ಹಾಗೂ ಸಾಗಾಟ, ಸಂಗ್ರಹಣೆಯಲ್ಲಿ ಸಾಕಷ್ಟು ಮುಂಜಾಗ್ರತೆಗಳನ್ನು ಕೈಗೊಂಡು, ಜವಾಬ್ದಾರಿಯಿಂದ ವರ್ತಿಸುವುದು.

ಇವುಗಳೊಂದಿಗೆ ಕೆಲಸ ಮಾಡುವುದೆಂದರೆ ಒಂದು ರೀತಿಯಲ್ಲಿ ಹೆಜ್ಜೇನಿನ ಹುಟ್ಟಿನಿಂದ ಜೇನು ಬಿಡಿಸಿದ ಹಾಗೆ; ಜೇನು ಸಿಕ್ಕಿರಬೇಕು, ಆದರೆ ನೊಣ ಕಚ್ಚಿರಬಾರದು ಎಂದೇ ಲೆಕ್ಕ.

## ವಿವಿಧ ಪೀಡೆನಾಶಕಗಳು, ಅವುಗಳ ಬಳಕೆ ಹಾಗೂ ಸಲಹೆಗಳು

| ಅ. ನಂ. | ಪೀಡೆ ನಾಶಕಗಳು | ವರ್ಗ | ಬೆಳೆಗಳು | ಗುರಿ ಪೀಡೆ | ಸಲಹೆ |
|---|---|---|---|---|---|
| ೧. | ಆಲ್ಡ್ರಿನ್ ಡೈ ಆಲ್ಡ್ರಿನ್ ಎಂಡ್ರಿನ್ | ೧ಬಿ | ಹತ್ತಿ, ತಂಬಾಕು, ಕಬ್ಬು, ಶೇಂಗಾ, ಭತ್ತ, ಸಣಬು, ಮೆಕ್ಕೆ ಜೋಳ, ಸೋಯಾ | ದುಂಬಿ, ಗೆದ್ದಲು, ಮಿಡತೆ, ಕಂಬಳಿ ಹುಳು, ಪಾತರಗಿತ್ತಿ | ಬಳಕೆ ಬೇಡ |
| ೨. | ಆಲ್ಡಿಕಾರ್ಬ್ | ೧ಎ | ಅಲಂಕಾರಿಕ ಸಸ್ಯ, ತರಕಾರಿ, ಹಣ್ಣಿನ ಬೆಳೆ, ಕಾಫಿ, ಜೋಳ, ಕಬ್ಬು | ಜೇಡ, ನಿಮ್ಯಾಟೋಡ್, ಬಿಳಿ ನೊಣ, ಹೇನು, ಎಲೆತಿನ್ನುವ ಹುಳ | ಸುರಕ್ಷಿತ ಬಳಕೆ |
| ೩. | ಅಟ್ರಾಝಿನ್ | ೩ | ಹಣ್ಣಿನ ಬೆಳೆ, ಮೆಕ್ಕೆ ಸೋಯಾ | ಕಳೆಗಳು | ಸುರಕ್ಷಿತ ಬಳಕೆ ಆಹಾರ, ನೀರು, ಮೇವಿನಲ್ಲಿ ಸೇರದಂತೆ ನೋಡಿಕೊಳ್ಳಿ |
| ೪. | ಬೆನೊಮಿಲ್ | | ವಾರ್ಷಿಕ, ಅಲಂಕಾರಿಕ, ಹಣ್ಣಿನ, ವಾಣಿಜ್ಯ ಬೆಳೆಗಳು | ಶಿಲೀಂಧ್ರ, ಜೇಡ | ಸುರಕ್ಷಿತ ಬಳಕೆ |
| ೫. | ಕ್ಯಾಂಫೆಕ್ಲೋರ್ | ೨ | ಮೆಕ್ಕೆ, ಹತ್ತಿ, ಹಣ್ಣು ತರಕಾರಿ, ಸೋಯಾ | ಮಿಡತೆ, ಸೈನಿಕ ಹುಳು, ನೊಣ, ದಂಶಕ | ಯಕೃತ್ತು-ಮೂತ್ರಪಿಂಡದ ತೊಂದರೆ ಇರುವವರು ಬಳಸಬಾರದು |
| ೬. | ಕ್ಯಾಪ್ಟಾನ್ | ೨ | ಹಣ್ಣಿನ, ಅಲಂಕಾರಿಕ, ತರಕಾರಿ ಬೆಳೆಗಳು, ಬೀಜೋಪಚಾರ | ಶಿಲೀಂಧ್ರ | ಸುರಕ್ಷಿತ ಬಳಕೆ |
| ೭. | ಕಾರ್ಬರಿಲ್ | ೨ | ಹತ್ತಿ, ಭತ್ತ, ಮೆಕ್ಕೆ, ಹಣ್ಣು, ಆಲೂಗಡ್ಡೆ ತರಕಾರಿ | ವಿವಿಧ ಕೀಟಗಳು | ಸುರಕ್ಷಿತ ಬಳಕೆ |
| ೮. | ಕಾರ್ಬೋಫ್ಯುರಾನ್ | ೧ | ಮೆಕ್ಕೆ, ಭತ್ತ | ಫ್ಲೀ ದುಂಬಿ, ಕಾಂಡ ಕೊರಕ, ಸಿಸ್ಟ್ ನಿಮ್ಯಾಟೋಡ್ | ಸುರಕ್ಷಿತ ಬಳಕೆ |
| ೯. | ಕ್ಲೋರ್ಡೇನ್ | ೨ | ಬೀಜೋಪಚಾರ, ಮಣ್ಣಿನ ಉಪಚಾರ | ಇರುವೆ, ದುಂಬಿ, ಮಿಡತೆ, ಜೊಂಡಿಗ | ಬಳಕೆ ಬೇಡ |
| ೧೦. | ಕ್ಲೋರೋ-ಬೆಂಝ್ಯುಲೇಟ್ | ೩ | ನಿಂಬೆ, ದ್ರಾಕ್ಷಿ, ಹತ್ತಿ, ಸೋಯಾ, ಚಹ, | ಜೇಡ, ಕೆಲವು ಕೀಟಗಳು | ಸುರಕ್ಷಿತ ಬಳಕೆ |

| | | | | |
|---|---|---|---|---|
| | | ತರಕಾರಿ | | |
| ೧೧. ಕ್ಲೋರ್ ಪೈರಿಫಾಸ್ | ೨ | ವಾರ್ಷಿಕ ಬೆಳೆಗಳು | ಕೀಟಗಳು, ಸೊಳ್ಳೆ, ನೊಣ, | ಸುರಕ್ಷಿತ ಬಳಕೆ |
| ೧೨. ತಾಮ್ರದ ಸಂಯುಕ್ತಗಳು: ಕಾರ್ಬೋನೇಟ್ ಆಕ್ಸಿಕ್ಲೋರೈಡ್ ನ್ಯಾಫ್ಥಸೀಟ್ ಹೈಡ್ರಾಕ್ಸೈಡ್, ಆಕ್ಸಿಬೆನೋಲೀಟ್, ಸಲ್ಫೇಟ್ | | ಎಲ್ಲ ಬೆಳೆಗಳು | ಶಿಲೀಂಧ್ರ | ಸುರಕ್ಷಿತ ಬಳಕೆ |
| ೧೩. ೨,೪-ಡಿ | ೨ | ಮೆಕ್ಕೆ, ಕಬ್ಬು | ಎಲ್ಲ ಕಳೆಗಳು | ದೀರ್ಘಾವಧಿಯ ವರೆಗೆ ಬಳಕೆ ಸಲ್ಲದು. |
| ೧೪. ಡಿ.ಡಿ.ಟಿ. | ೨ | ಹತ್ತಿ, ಕೋಸು, ಮೆಕ್ಕೆ | ಕೀಟಗಳು, ಸೊಳ್ಳೆ, ಟ್ಸೆಟ್ಸೆ ನೊಣ | ಯಕೃತ್ತು ಹಾಗೂ ಮೂತ್ರ ಪಿಂಡದ ತೊಂದರೆ ಇರುವವರು ದೂರ ಇರಬೇಕು |
| ೧೫. ಡೈಕ್ಲೋರ್‌ವಾಸ್ | ೧ ಬಿ | -- | ನೊಣ, ಸೊಳ್ಳೆ | ಸ್ಪ್ರೇ ಮಾಡುವ ಮೊದಲು ಮತ್ತು ನಡುವೆ ಆಲ್ಕೋಹಾಲ್ ಸೇವಿಸಬಾರದು |
| ೧೬. ಡೈಫ್ಲು ಬೆಂಝ್ಯುರಾನ್ | ೩ | ಅರಣ್ಯಬೆಳೆ, ಲಿಂಬೆ, ವಾರ್ಷಿಕ ಬೆಳೆ, ಹತ್ತಿ, ಸೋಯಾ | ಎಲೆ ತಿನ್ನುವ ಕೀಟ ಸೊಳ್ಳೆ, ನೊಣ | ಸುರಕ್ಷಿತ ಬಳಕೆ |
| ೧೭. ಡೈಮಿಥೋ-ಯೇಟ್ | ೨ | ಹಣ್ಣು, ತರಕಾರಿ ಬೆಳೆ, ಹುರುಳಿ, ಹತ್ತಿ | ರಸ ಹೀರುವ ಕೀಟ, ಜೇಡ. | ಸುರಕ್ಷಿತ ಬಳಕೆ |
| ೧೮. ಡೈಕ್ವಾಟ್ | ೨ | ವಿವಿಧ ಬೆಳೆಗಳು | ದ್ವಿದಳ ಮತ್ತು ಜಲ - ವಾಸಿ ಕಳೆ ಸಸ್ಯಗಳು. | ಸುರಕ್ಷಿತ ಬಳಕೆ |
| ೧೯. ಡೈ ಸಲ್ಫೊಟಾನ್ | ೧ಎ | ಬೀಜೋಪಚಾರ, ಮಣ್ಣಿನ ಉಪಚಾರ | ಕೀಟ, ಜೇಡ, | ಸುರಕ್ಷಿತ ಬಳಕೆ |
| ೨೦. ಡಿಎನ್‌ಒಸಿ | ೧ಬಿ | ಧಾನ್ಯದ ಬೆಳೆಗಳು | ಕೀಟ, ಜೇಡ, ಶಿಲೀಂಧ್ರ, ಕಳೆ ಸಸ್ಯಗಳು | ಇದೊಂದು ಸ್ಫೋಟಕ. ಹೃದಯ, ಯಕೃತ್ತು, ಮೂತ್ರಕೋಶ, ಹೊಟ್ಟೆಯ ತೊಂದರೆ |

| | | | | |
|---|---|---|---|---|
| | | | | ಇರುವವರು ಮದ್ಯಪಾನಿಗಳು ದೂರ ಇರಬೇಕು. ಬಳಕೆ ಬೇಡ |
| ೨೧. ಎಂಡೋ ಸಲ್ಫಾನ್ | ೨ | ಹಣ್ಣು, ತರಕಾರಿ, ಆಹಾರದ ಬೆಳೆಗಳು ಹತ್ತಿ, ತಂಬಾಕು, ಚಹ | ದುಂಬಿ, ಹೇನು, ಜೇಡ, ಕಂಬಳಿಹುಳು | ಯಕೃತ್ತು ಮೂತ್ರಕೋಶದ ರೋಗಿಗಳು ದೂರ ಇರಬೇಕು. ಸುರಕ್ಷಿತ ಬಳಕೆ |
| ೨೨. ಇಪಿಎನ್ | ೧ಎ | ಹತ್ತಿ, ಭತ್ತ, ಹಣ್ಣು, ತರಕಾರಿ ಬೆಳೆ | ಕಂಬಳಿ ಹುಳು, ಕಾಂಡಕೊರಕ ಎಲೆ ತಿನ್ನುವ ಕೀಟ | ಸುರಕ್ಷಿತ ಬಳಕೆ |
| ೨೩. ಈಥಲೀನ್ ಡೈಬ್ರೋಮೈಡ್ | ೨ | ಧಾನ್ಯ, ಹಣ್ಣು, ತರಕಾರಿಗಳನ್ನು ಸಂಗ್ರಹಿಸುವುದಕ್ಕೆ ಮಣ್ಣಿನ ಉಪಚಾರಕ್ಕೆ. | ಕೀಟ, ನಿಮ್ಯಾಟೋಡ್‌ಗಳು | ಬಳಕೆ ಬೇಡ |
| ೨೪. ಫೆನಿ-ಟ್ರೋಥಿಯಾನ್ | ೨ | ಕಾಫಿ, ಭತ್ತ, ಗೋಧಿ, | ಮಿಡತೆ, ಕಾಂಡಕೊರಕ, ಎಲೆ ತಿನ್ನುವ ಕೀಟ, ಮನೆಯಲ್ಲಿನ ಕೀಟಗಳು. | ಸುರಕ್ಷಿತ ಬಳಕೆ |
| ೨೫. ಗ್ಲೈಫೋಸೇಟ್ | ೩ | ವಿವಿಧ ಬೆಳೆಗಳು | ವಿವಿಧ ಕಳೆ ಸಸ್ಯಗಳು | ಸುರಕ್ಷಿತ ಬಳಕೆ |
| ೨೬. ಹೆಪ್ಟಾಕ್ಲೋರ್ | ೨ | ಮೆಕ್ಕೆ, ಬಾಳೆ, [illegible]ಣ್ಣೆಕಾಳು ತರಕಾರಿ, ಕಬ್ಬು, ತೆಂಗು, ಅಡಿಕೆ, | ಬೆಳೆ ಹಾಗೂ ಮನೆಯಲ್ಲಿನ ಕೀಟಗಳು. | ಬಳಕೆ ಬೇಡ |
| ೨೭. ಹೆಕ್ಸಾಕ್ಲೋರೋ ಬೆಂಝೀನ್ | ೩ | ವಿವಿಧ ಬೆಳೆಗಳು | ಶಿಲೀಂಧ್ರ | ಸುರಕ್ಷಿತ ಬಳಕೆ |
| ೨೮. ಲಿಂಡೇನ್ | ೨ | ವಿವಿಧ ಬೆಳೆಗಳು | ಬೆಳೆಗಳ ಕೀಟಗಳು, ದಂಶಕ, ಸೊಳ್ಳೆ | ಬಳಕೆ ಬೇಡ |
| ೨೯. ಮ್ಯಾಲಾಥಿಯಾನ್ | | ವಾರ್ಷಿಕ, ಅಲಂಕಾರಿಕ, ತೋಟದ ಬೆಳೆ ಹಾಗೂ ಧಾನ್ಯ ಸಂಗ್ರಹಕ್ಕಾಗಿ | ಕೀಟ, ಸೊಳ್ಳೆ | ಸುರಕ್ಷಿತ ಬಳಕೆ |
| ೩೦. ಎಂಸಿಪಿಎ ಎಂಸಿಪಿಪಿ | ೩ | ವಿವಿಧ ಬೆಳೆಗಳು | ಕಳೆ ಸಸ್ಯಗಳು | ಬಳಕೆ ಬೇಡ |
| ೩೧. ಮೋನೋ ಕ್ರೋಟೋಫಾಸ್ | ೧ ಬಿ | ಭತ್ತ, ಕಬ್ಬು, ಲಿಂಬೆ, ತಂಬಾಕು, ಬಟಾಟೆ | ಕೀಟಗಳು | ಸ್ಪ್ರೇ ಮಾಡಲಾದ ತೋಟಕ್ಕೆ ಒಂದು ವಾರ ಹೋಗಬೇಡಿ. |
| ೩೨. ನೈಟ್ರೋಫೆನ್ | ೩ | ಧಾನ್ಯದ ಬೆಳೆಗಳು | ಕಳೆ ಸಸ್ಯಗಳು | ಬಳಕೆ ಬೇಡ |
| ೩೩. ಪರಾಕ್ವಾಲ್ | ೧ ಬಿ | ಬಟಾಟೆ, ಮೆಕ್ಕೆ | ಎಲ್ಲ ಥರದ ಹಾಗೂ | ಬಳಕೆ ಬೇಡ |

| | | | | |
|---|---|---|---|---|
| ೩೪. ಪ್ಯಾರಾಥಿಯಾನ್ | ೧ ಎ | ಸೋಯಾ, ಹತ್ತಿ ಧಾನ್ಯ, ತರಕಾರಿ, ಬೆಳೆಗಳು, ಹತ್ತಿ ತಂಬಾಕು | ನೀರಿನಲ್ಲಿರುವ ಕಳೆಗಳು ಕೀಟ, ಸೊಳ್ಳೆ | ಕೆಲ ದಿನ ಉಪಚರಿಸಲಾದ ತೋಟದಿಂದ ದೂರ ಇರಬೇಕು. |
| ೩೫ ಪೆಂಟಾ ಕ್ಲೋರೋಫಿನಾಲ್ | ೧ ಬಿ | ವಿವಿಧ ಬೆಳೆಗಳು | ಕೀಟ, ಶಿಲೀಂಧ್ರ, ಕಳೆಗಳು | ಬಳಕೆ ಬೇಡ |
| ೩೬. ೨,೪,೫-ಟಿ | ೨ | ವಿವಿಧ ಬೆಳೆಗಳು | ದ್ವಿದಳ ಕಳೆ ಸಸ್ಯಗಳು | ಬಳಕೆ ಬೇಡ |
| ೩೭. ಝೈನೆಬ್ ಮ್ಯಾನೆಬ್ ಮ್ಯಾಂಕೋಝೆಬ್ | | ವಿವಿಧ ಬೆಳೆಗಳು | ಶಿಲೀಂಧ್ರ | ದೀರ್ಘಾವಧಿ ಬಳಕೆ ಸಲ್ಲದು. |

## ಸಂಬಂಧ ೨: ಪೀಡೆ ನಾಶಕಗಳ ಸದ್ಯದ ಸ್ಥಿತಿ

| ಅ. ಸಂ. ರಾಷ್ಟ್ರ | ಪೀಡೆ ನಾಶಕ | ಸ್ಥಿತಿ |
|---|---|---|
| ೧. ಭಾರತ. | ಎಂಡ್ರಿನ್, ಈಥೈಲ್ ಪ್ಯಾರಾಥಿಯಾನ್, ಕ್ಯಾಂಫೆಕ್ಲೋರ್, ಡೈ ಎಲ್ಡ್ರಿನ ಡೆಟ್ರೋಮೋಕ್ಲೋರೋಪ್ರೊಪೇನ್ | ಬಳಕೆ ನಿರ್ಬಂಧಿತ ಅಥವಾ ನಿಷಿದ್ಧ |
| ೨. ಅಮೇರಿಕದ ಸಂಯುಕ್ತ ಸಂಸ್ಥಾನ | ಆಲ್ಡ್ರಿನ್, ಡೈ ಎಲ್ಡ್ರಿನ್, ಎಂಡ್ರಿನ್, ಕ್ಲೋರ್ಡೇನ್, ಡಿಡಿಟಿ, ೨,೪-ಡಿ ಹೆಪ್ಟಾಕ್ಲೋರ್, ಲಿಂಡೇನ್, ಕ್ಯಾಂಫೆಕ್ಲೋರ್ ಮತ್ತು ಇನ್ನೂ ಅನೇಕ ಪೀಡೆನಾಶಕಗಳು. | ಬಳಕೆಯನ್ನು ತಡೆ ಹಿಡಿಯಲಾಗಿದೆ. ಅಥವಾ ರದ್ದು. ಗೊಳಿಸಲಾಗಿದೆ |
| ೩. ಯುನೈಟೆಡ್ ಕಿಂಗಡಮ್ | ಆಲ್ಡ್ರಿನ್ ಡೈ ಎಲ್ಡ್ರಿನ್, ಎಂಡ್ರಿನ್, ಕ್ಲೋರ್ಡೇನ್, ಡಿಡಿಟಿ, ಎಚ್‌ಸಿಎಚ್, ಹೆಪ್ಟಾಕ್ಲೋರ್ ಮತ್ತು ಇನ್ನು ಅನೇಕ ಪೀಡೆನಾಶಕಗಳು | ಬಳಕೆ ನಿರ್ಬಂಧಿತ ಅಥವಾ ನಿಷಿದ್ಧ |
| ೪. ರಷ್ಯ ಆಲ್ಡ್ರಿನ್, | ಡಿಡಿಟಿ, ಹೆಪ್ಟಾಕ್ಲೋರ್ | ಬಳಕೆ ನಿರ್ಬಂಧಿತ |
| ೫. ಜಪಾನ್. | ಡಿಡಿಟಿ, ಬಿಎಚ್‌ಸಿ, ಮಿಥೈಲ್ ಪ್ಯಾರಾಥಿಯಾನ್ | ಬಳಕೆ ನಿರ್ಬಂಧಿತ ಅಥವಾ ನಿಷಿದ್ಧ |

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**

**Registered with the Registrar of Newspaper for India under No. 3633/57.**




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಷಿ<br>ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.
ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

KASTURI, Kannada Digest Reg.No. KRNG - 43, Licence No. L2120 - WPP No, 33 Price - Rs. 6-00